

# ಹೊಸತು

ನೆಮ್ಮದಿಯ ನಾಳೆ ನಮ್ಮದು





ಆಗಸ್ಟ್ ೨೦೦೦ ಬೆಲೆ : ರೂ. ೧೦






ಸ್ವಾತಂತ್ರ್ಯ ಹೋರಾಟದಲ್ಲಿ ನನ್ನ ಕೆಲ ಅನುಭವಗಳು

'ಅಖಂಡ ಕರ್ನಾಟಕ'ದ ಸಮಗ್ರತೆ ಪ್ರಶ್ನಾತೀತ

ಅಣು ಸಂಸ್ಕೃತಿಯ ಅಪಾಯಗಳು

ವಸಂತದಲ್ಲಿ ಮಾಗಿಯ ಹಾಡು

ಬದುಕು ಬಲಿಗೊಟ್ಟ ಗಿಯೋರ್ದಾನೊ ಬ್ರೂನೋ

ನಾನು ಅಮೆರಿಕೆಯ ಬೇಹುಗಾರಳಾಗಬೇಕೆ?

ಹೊಸ ಸಹಸ್ರಮಾನದಲ್ಲಿ ಜಾನಪದ

ಯೋಗಪ್ರವೇಶ, ಇತ್ಯಾದಿ...

# ಹೊಸತು

## ಒಳಗೇನಿದೆ.....




*ಚಿತ್ರಗಳು : ರವಿಕುಮಾರ್ ಅಜ್ಜೀಪುರ, ಹರಿಣಿ, ನಾಡಿಗ್*
*ಮುಖಪುಟದಲ್ಲಿ : ಕಲಾವಿದ ಶಂಕರ ಪಾಟೀಲರ ವರ್ಣಚಿತ್ರ*
*ಛಾಯಾಚಿತ್ರ : ಡಿ. ಎಸ್. ಚೌಗಲೆ*
*ವಿನ್ಯಾಸ : ನವಕರ್ನಾಟಕ ವಿನ್ಯಾಸ* ***ಕಚೇರಿ ಸಹಕಾರ*** *: ಜಿ. ವಿ. ತೇಜೋವತಿ*


**ಈ** ಸಂಚಿಕೆಯೊಂದಿಗೆ 'ಹೊಸತು' ಎರಡನೆಯ ವರ್ಷಕ್ಕೆ ಕಾಲಿಡುತ್ತಿದೆ. ಕಳೆದ ಹನ್ನೆರಡು ಸಂಚಿಕೆಗಳನ್ನು ವಿಮರ್ಶಾತ್ಮಕವಾಗಿ ಗಮನಿಸುತ್ತಾ ಅದರ ಬೆಳವಣಿಗೆಗೆ ಸಲಹೆ-ಸೂಚನೆ -ಸಹಕಾರ ನೀಡುತ್ತಿರುವವರಿಗೆಲ್ಲಾ 'ಹೊಸತು' ಋಣಿಯಾಗಿದೆ. ನಮ್ಮ ನ್ಯೂನತೆಗಳನ್ನು ಆಗಾಗ್ಗೆ ಎತ್ತಿ ತೋರಿಸುವುದರ ಮೂಲಕ ಓದುಗ ವೃಂದವು ಪತ್ರಿಕೆಯ ಮೌಲ್ಯವನ್ನು, ನಿಖರತೆಯನ್ನು ಪೋಷಿಸಿದೆ, ಬೆಳೆಸಿದೆ. ತಮ್ಮ ಬಹುಮುಖೀ ಬರಹಗಳ ಮುಖೇನ ಲೇಖಕರು ಪತ್ರಿಕೆಗೆ ಪುಷ್ಟಿ ನೀಡಿದ್ದಾರೆ, ಚಿಂತನೆಗೆ ಹಾಗೂ ಕ್ರಿಯೆಗೆ ಗ್ರಾಸ ಒದಗಿಸಿದ್ದಾರೆ. ಅವರೆಲ್ಲರಿಗೂ 'ಹೊಸತು' ವಂದನೆ ಸಲ್ಲಿಸುತ್ತದೆ ಮತ್ತು ಎರಡನೆಯ ವರ್ಷದಲ್ಲಿ ಇನ್ನೂ ಅತಿಶಯವಾದ ಸಂವಹನಕ್ಕೆ ಆಹ್ವಾನ ನೀಡುತ್ತದೆ. ಪತ್ರಿಕೆಗೆ ಬರೆಯುವ ಆಶಯ ವ್ಯಕ್ತಪಡಿಸಿ ಭರವಸೆ ನೀಡಿದ ಕೆಲವರು ಕಾರಣಾಂತರಗಳಿಂದ ಈವರೆಗೆ ಬರೆಯಲು ಸಾಧ್ಯವಾಗಿಲ್ಲ. ಮುಂದಿನ ದಿನಗಳಲ್ಲಿ ಪತ್ರಿಕೆಯ ಈ ಕೊರತೆಯನ್ನು ನೀಗಿಸುವಲ್ಲಿ ಅವರ ಸಕ್ರಿಯ ಪಾತ್ರವಿದೆ. ಪ್ರತಿಕ್ರಿಯಿಸಲು ಇಚ್ಛಿಸಿದ ಅನೇಕ ಓದುಗರು ಸಮಯಾಭಾವದಿಂದಾಗಿ ಹಾಗೆ ಮಾಡಲು ಸಾಧ್ಯವಾಗಿಲ್ಲ. ಗುಣಾತ್ಮಕವಾಗಿ ಪತ್ರಿಕೆಯ ಏಳಿಗೆಗೆ ಅವರ ಮಧ್ಯಪ್ರವೇಶವು ಅಪಾರ ಸಹಾಯ ಮಾಡಬಲ್ಲುದು. ಬರುವ ತಿಂಗಳುಗಳಲ್ಲಿ ಅದರ ನಿರೀಕ್ಷೆಯಲ್ಲಿರುತ್ತೇವೆ.

ತಿಂಗಳಿಗೊಮ್ಮೆ ಪ್ರಕಟವಾಗುವ ಪತ್ರಿಕೆ ಇದಾದ್ದರಿಂದ ಇದರ ಸ್ವರೂಪವು ಅಗತ್ಯವಾಗಿ ಬೇರೆ ಪತ್ರಿಕೆಗಳಿಗಿಂತ ಭಿನ್ನವಾಗಿದೆ. ದಿನದಿಂದ ದಿನಕ್ಕೆ ವರದಿಯಾಗುವ ಘಟನೆಗಳನ್ನು ದಾಖಲಿಸುವ ಸುದ್ದಿ ಪತ್ರಿಕೆಯಾಗಿ 'ಹೊಸತು' ಮೂಡಿಬರಲಾರದು. ಎಲ್ಲ ಸುದ್ದಿಗಳನ್ನೂ ವಿಶ್ಲೇಷಿಸುವ ಉದ್ದೇಶ ಸಹ ಫಲಿಸಲಾರದು. ಲೇಖನಗಳನ್ನು ನೀಡಿದವರಿಗೆ ಒಮ್ಮೊಮ್ಮೆ ಬೇಸರ ಉಂಟಾಗುವುದು ಶಕ್ಯ: ಇನ್ನೂ ಅದು ಪ್ರಕಟವಾಗಲಿಲ್ಲವೆಂಬ ಕಾರಣದಿಂದ. ವರ್ಷಕ್ಕೆ ಹನ್ನೆರಡೇ ಸಂಚಿಕೆಗಳಿರುವ ಪತ್ರಿಕೆಯ ಮಿತಿಗಳ ಪರಿಣಾಮ ಇದು. ಅದನ್ನು ಸಹಿಸಿ ಸಹಕರಿಸಬೇಕೆಂಬುದು ನಮ್ಮ ಮನವಿ.

ನಮ್ಮ ಓದುಗರ ಬಳಗ ಅಗಾಧವಲ್ಲ. ಆದರೆ ವಿಶಾಲವಾದುದು. ಪತ್ರಿಕೆಯ ಮೌಲಿಕತೆಯ ಬಗ್ಗೆ ಅವರೆಲ್ಲಾ ಸಹಮನಸ್ಕರಾಗಿರುವುದು ನಮ್ಮ ಹೆಮ್ಮೆ. ವಿಷಯ ಮಂಡನೆ ಅಪೂರ್ಣವೆಂದೋ, ಭಾಷೆ ಕಠಿಣವೆಂದೋ ಕೆಲವೊಮ್ಮೆ ಅವರಿಗೆ ಅನಿಸಿದರೆ ಅದು ಸ್ವಾಭಾವಿಕ. ಗಂಭೀರ ವಿಷಯಗಳನ್ನು ಸರಳವಾಗಿ ನಿರೂಪಿಸಿ ವಿಶ್ಲೇಷಿಸುವುದು ಪತ್ರಿಕೆಯ ಆಶಯ. ಅದಕ್ಕೆ ಲೇಖಕರ ಮನ್ನಣೆಯೂ ಅಗತ್ಯ. ಸರಳವಾದ ನಿರೂಪಣೆಯ ಹೆಸರಿನಲ್ಲಿ ಅತ್ಯಂತ ಸರಳೀಕರಣವನ್ನು ನಾವು ಆಯ್ದುಕೊಳ್ಳುವಂತಿಲ್ಲ. ಒಂದೊಂದು ಶಿಸ್ತಿಗೂ ತನ್ನದೇ ಆದ ಭಾಷೆ ಇರುತ್ತದೆ. ಓದುಗರ ಸಹನೆ ಮತ್ತು ಸಹೃದಯತ್ವ ಅದನ್ನು ಬೆಳೆಸಬಲ್ಲುದು.



ಜೂನ್ ತಿಂಗಳ ಅಸಹ್ಯ ಘಟನೆಗಳಲ್ಲಿ ಕ್ರೈಸ್ತ ಮಂದಿರಗಳಿಗೆ ಇಡಲಾದ ಸಿಡಿಮದ್ದು, ಅದರಿಂದುಂಟಾದ ನಷ್ಟ, ಮನೋವೇದನೆ, ಬಾಂಧವ್ಯದಲ್ಲಿ ಬಿರುಕು, ಎಲ್ಲಾ ಸೇರಿವೆ. ಅಷ್ಟೇ ಅಸಹ್ಯಕರವಾದ್ದು ಬೆಂಗಳೂರು-ಮೈಸೂರು ಹೆದ್ದಾರಿ ರಚನೆಗಾಗಿ ಕೃಷ್ಣ ಸರ್ಕಾರದ ಸಂಭ್ರಮ, ಕೃತ್ರಿಮತೆ ಮತ್ತು ಶಾಮೀಲುತನ. ಕೇಂದ್ರ ಪರಿಸರ ರಕ್ಷಣಾ ಇಲಾಖೆಯ ನಿಯಮವನ್ನು ಔಪಚಾರಿಕವಾಗಿಯಷ್ಟೇ ಪೂರೈಸುವುದು ಈ ಸರ್ಕಾರದ ಭ್ರಷ್ಟನೀತಿ. ಅದಕ್ಕಾಗಿ ಸಾರ್ವಜನಿಕ ಬಹಿರಂಗ ಚರ್ಚೆ ನಡೆಯಬೇಕು, ನಡೆದಿದೆ. ಇದು ಕಾಟಾಚಾರದ ಪರಮಾವಧಿ. ಎಂಭತ್ತಕ್ಕೂ ಹೆಚ್ಚು ವಯಸ್ಸಿನ ಹಿರಿಯ ಉದಾತ್ತ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಎಚ್. ಎಸ್. ದೊರೆಸ್ವಾಮಿಯಂತಹವರು ಕೂಡ ಪೊಲೀಸರ ಬಂಧನಕ್ಕೆ ಸಿಲುಕಿದರೆಂದರೆ ಈ ಸಾರ್ವಜನಿಕ ವಿಚಾರ ವಿನಿಮಯದ ಅನೀತಿಯುತ, ತಾಳ್ಮೆರಹಿತ, ಅಯೋಗ್ಯ ನಿರ್ವಹಣೆಯು ಅರಿವಿಗೆ ಬರುತ್ತದೆ. ಅವರೆತ್ತಿದ ಪ್ರಶ್ನೆಗೆ ಉತ್ತರ ಕೊಡಲು ಸರ್ಕಾರ ಅಂಜುವುದೇಕೆ? ಗುಟ್ಟಾಗಿ ನೀವು ಮಾಡಿಕೊಂಡಿರುವ ಒಪ್ಪಂದಗಳನ್ನು ಬಹಿರಂಗಗೊಳಿಸಿ ಎಂಬುದಷ್ಟೇ ಅವರ ಆಗ್ರಹ. ಬಂಧನ ಅದಕ್ಕೆ ಉತ್ತರ ! ಬಿಡದಿಯ ಬಳಿ ಗಾಲ್ಫ್ ಕೋರ್ಸ್, ಮಂಡ್ಯದ ಬಳಿ ಜೂಜುತಾಣ, ಇವೆಲ್ಲಾ ಯಾವ ಹಳ್ಳಿಯ ರೈತರಿಗಾಗಿ ಎಂಬುದನ್ನು ಜಿಲ್ಲಾಧಿಕಾರಿಗಳು ವಿವರಿಸಬಲ್ಲರೆ? ನಮ್ಮ ನಾಳೆಗಳನ್ನು ಧ್ವಂಸ ಮಾಡಹೊರಟಿರುವ ಈ ಸರ್ಕಾರ ಮತಿಭ್ರಷ್ಟವಾಗದೆ ಈಗಲೂ ಮರುಚಿಂತನೆ ನಡೆಸಲು ಸಮಯವಿದೆ. ಸಂಪರ್ಕ-ಸಂಚಾರ ಸಾಧನೆಗಾಗಿ ಹೆದ್ದಾರಿ ಮತ್ತು ವಿಲಾಸಿ ಪಟ್ಟಣ ಸಂಕೀರ್ಣಗಳು ಬೇಕಾಗಿಲ್ಲ, ಇನ್ನೊಂದು ರೈಲುಮಾರ್ಗವನ್ನು ರಚಿಸಿದರೆ ಸಾಕು. ನಮ್ಮ ಕೆರೆಗಳು, ಫಲವತ್ತಾದ ಭೂಮಿ, ರೈತರ ಆಸ್ತಿ, ಸರ್ಕಾರದ ಮೂಲೋದ್ದೇಶ, ಯಾವುದೂ ನಾಶವಾಗಬೇಕಾಗಿಲ್ಲ. ೧೯೮೫ರಲ್ಲಿ ಬಂಜರಾಗಿದ್ದ ಭೂಮಿ ೨೦೦೦ ನೇ ಇಸವಿಯಲ್ಲಿ ತೋಟವಾಗಿ ಕಂಗೊಳಿಸುತ್ತಿದ್ದರೆ ಅದನ್ನು 'ಬಂಜರು' ಎಂದು ವರ್ಣಿಸುವ ಅಧಿಕಾರಿಗಳ ಮೂರ್ಖತನ ಎಲ್ಲೆಯಿಲ್ಲದ್ದು, ಸರ್ಕಾರದ ದೌರ್ಜನ್ಯ ಖಂಡನೀಯವಾದದ್ದು. ಹಂಗರಹಳ್ಳಿಯಲ್ಲಿ ಬೇಡಿ ಕಿತ್ತೊಗೆಯಲು ಐವರಿಗೆ ಸಾಧ್ಯವಾದ ಹಿನ್ನೆಲೆಯಲ್ಲಿ ಬೆಂಗಳೂರು - ಮೈಸೂರು ಹೆದ್ದಾರಿಯ ಎಲ್ಲ ಹಳ್ಳಿಗಳನ್ನೂ ಹಂಗರಹಳ್ಳಿ ಮಾಡಲಿರುವ ಸರ್ಕಾರಕ್ಕೆ ಜನತೆ ಬುದ್ಧಿ ಹೇಳಬೇಕು.

- ಜಿ. ಆರ್.




ಸಂಪುಟ-೨ ಸಂಚಿಕೆ - ೧ ಆಗಸ್ಟ್ ೨೦೦೦

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೫೬

*ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in


# ಸ್ವಾಯತ್ತತೆಯ ಅಪೇಕ್ಷೆಯಲ್ಲಿ ಅನರ್ಥವೆಲ್ಲಿಯದು?

ಏಕಕಾಲಕ್ಕೆ ಕಾಶ್ಮೀರದ ಮುಖ್ಯಮಂತ್ರಿ ಫರೂಕ್ ಅಬ್ದುಲ್ಲಾ ಉಗ್ರ ದೇಶದ್ರೋಹಿ ಹಾಗೂ ಸಚ್ಚಾ ದೇಶಭಕ್ತನೆಂಬ ಎರಡು ವಿರೋಧಾತ್ಮಕ ಬಿರುದುಗಳನ್ನು ಪಡೆದುಕೊಂಡಿರುವುದು ನಮ್ಮ ಸದ್ಯದ ರಾಜಕೀಯ ಕುತಂತ್ರಗಳಿಗೆ ಕನ್ನಡಿ ಹಿಡಿದಂತಾಗಿದೆ. ಎರಡು ಬಿರುದುಗಳನ್ನೂ ಒಂದೇ ಪಕ್ಷದ ಧುರೀಣರು ನೀಡಿರುವುದು ಅಪರೂಪದ ವಿಸ್ಮಯ. ಭಾರತೀಯ ಜನತಾ ಪಕ್ಷದ ಒಬ್ಬ ನಾಯಕ ಅಬ್ದುಲ್ಲಾ ಅವರನ್ನು ಅವಾಚ್ಯವಾಗಿ ನಿಂದಿಸಿದರೆ ಇನ್ನೊಬ್ಬ ನಾಯಕ ಆತನನ್ನು ಪುಣ್ಯಪುರುಷನೆಂದು ಶ್ಲಾಘಿಸುತ್ತಾನೆ. ಇದು ಅಬ್ದುಲ್ಲಾ ಬಗೆಗಿನ ವ್ಯಾಖ್ಯಾನ ಎಂಬುದಕ್ಕಿಂತ ಭಾಜಪದ ಮರಳುಮಾಡುವ ಮೋಡಿ ರಾಜಕೀಯಕ್ಕೆ ನಿದರ್ಶನ ಎನ್ನುವುದು ಹೆಚ್ಚು ಸೂಕ್ತ. ಅಬ್ದುಲ್ಲಾನ ತಾಯಿ ಸತ್ತಿದ್ದೇ ಸಾಕು, ಕಾಶ್ಮೀರದ ಬಗೆಗಿನ ದೆಹಲಿ ಚಿಂತನೆಯನ್ನು ವಾಜಪೇಯಿ ರಾತ್ರೋರಾತ್ರಿ ಪರಿಷ್ಕರಿಸುತ್ತಾರೆ ! ಮುಂಚೆಯೇ ಅದಕ್ಕೆ ಅಡ್ಡಿಯೇನಿತ್ತು ?

ಸ್ವಾಯತ್ತತೆಯ ಪ್ರಶ್ನೆಯನ್ನು ಮುಂದುಮಾಡಿರುವ ಅಬ್ದುಲ್ಲಾ ಅವರ ರಾಜಕೀಯ ಅಗತ್ಯಗಳು, ಅನಿವಾರ್ಯತೆಗಳು ಏನಾಗಿವೆಯೆಂಬುದು ಇಲ್ಲಿ ಪ್ರಸ್ತುತವಲ್ಲ. ನಿಜಕ್ಕೂ ಗಂಭೀರ ಅವಗಾಹನೆಗೆ ಯೋಗ್ಯವಾಗಿರುವುದು ಕಾಶ್ಮೀರದ ಪರಿಸ್ಥಿತಿ, ಅಲ್ಲಿಯ ಜನರ ಬವಣೆ, ಆ ರಾಜ್ಯದ ಆರ್ಥಿಕ ಅನಭಿವೃದ್ಧಿ ಮತ್ತು ಭಾರತ ಸಂವಿಧಾನದಲ್ಲಿ ದತ್ತವಾಗಿರುವ ಒಕ್ಕೂಟದ ಕಲ್ಪನೆಯ ಸಾರ್ಥಕ್ಯ ಹಾಗೂ ದುರ್ಬಲತೆ. ಅಬ್ದುಲ್ಲಾನನ್ನು ಕಾರಾಗೃಹಕ್ಕೆ ಅಟ್ಟಿ ಸೈನ್ಯದ ನೆರವಿನಿಂದ ಕಾಶ್ಮೀರವನ್ನು ಭಾರತದಲ್ಲಿ 'ಸಮಗ್ರವಾಗಿ' ಐಕ್ಯ ಹೊಂದುವಂತೆ ಮಾಡಬೇಕೆಂಬ ಭಾವೋದ್ರೇಕದ ಮಾತುಗಳು ಕ್ರಿಯೆಯಾಗಿ ಏನಾದರೂ ಪರಿವರ್ತನೆಗೊಂಡರೆ ನಮ್ಮ ದೇಶದ ಮುಂದಿನ ಅಧ್ಯಾಯವು ರಕ್ತದ ಬಣ್ಣದಿಂದ ತೊಯ್ದುಹೋಗುತ್ತದೆ.

ಸ್ವಾಯತ್ತತೆಯ ಪ್ರಶ್ನೆಯನ್ನು ಇಂದೇಕೆ ಎತ್ತಿದಿರಿ ಎಂಬ ಸವಾಲು ಅಬ್ದುಲ್ಲಾ ಸರ್ಕಾರಕ್ಕೆ ಮುಜುಗರ ಉಂಟುಮಾಡಬಹುದು. ಆದರೆ, ಆ ಪ್ರಶ್ನೆಯನ್ನು ಎಂದಾದರೂ ಯಾರಾದರೂ ಎತ್ತಲೇಬೇಕಾದ್ದು: ಕೇವಲ ಕಾಶ್ಮೀರದ ಸಂದರ್ಭದಲ್ಲಿ ಅಲ್ಲ, ಆದರೆ ಎಲ್ಲ ರಾಜ್ಯಗಳ ಸಂದರ್ಭದಲ್ಲಿ. ಕಾಶ್ಮೀರದ ಶಾಸನಸಭೆಯ ಸ್ವಾಯತ್ತತಾ ನಿರ್ಣಯವನ್ನು ಲೋಕಸಭೆಯಲ್ಲಿ ಚರ್ಚಿಸಲಾಗುವುದೆಂದು ಹೇಳಿ ಆಮೇಲೆ ಕೇಂದ್ರ ಸಚಿವ ಸಂಪುಟದ ಸಭೆಯಲ್ಲೇ ಅದನ್ನು ಚಿವುಟಿಹಾಕಿದ್ದು ಕೇಂದ್ರ ಸರ್ಕಾರದ ದೊಡ್ಡ ಪಕ್ಷವಾದ ಭಾಜಪದ ದೃಷ್ಟಿಯನ್ನು ಸ್ಪಷ್ಟಗೊಳಿಸುತ್ತದೆ. ಸಂವಿಧಾನದ ೩೭೦ನೇ ವಿಧಿಯನ್ನು ರದ್ದುಮಾಡುವ ತನ್ನ ನಿರ್ಧಾರವನ್ನು ಭಾಜಪ ಎಷ್ಟೋ ಕಾಲದಿಂದ ಮುಕ್ತವಾಗಿ ಸಾರುತ್ತಾ ಬಂದಿದೆ ಮತ್ತು ತನಗೆ ಬಹುಮತ ಲಭ್ಯವಾದಾಗ ಅದನ್ನು ಕಾರ್ಯಗತಗೊಳಿಸುವುದಾಗಿ ಈಗಲೂ ಹೇಳುತ್ತಿದೆ. ಅಂತಹ ಪಕ್ಷದೊಡನೆ ಸಮ್ಮಿಶ್ರ ಸರಕಾರದಲ್ಲಿ ಸೇರ್ಪಡೆ ಹೊಂದಿದ ಕಾಶ್ಮೀರದ ನ್ಯಾಷನಲ್ ಕಾನ್ಫರೆನ್ಸ್ ಪಕ್ಷವು ತನ್ಮೂಲಕ ಪ್ರತ್ಯೇಕತೆಯ ಸೂತ್ರವನ್ನು ಎತ್ತಿಹಿಡಿಯುವ ಹುರಿಯತ್ ಗುಂಪನ್ನು ಹಿಮ್ಮೆಟ್ಟಿಸಲು ಸಾಧ್ಯವಾದೀತೆಂದು ಬಗೆದಿದೆ. ಅದರ ಅಂಗವಾಗಿ ಸ್ವಾಯತ್ತತೆಯ ಹಕ್ಕೊತ್ತಾಯಕ್ಕೆ ಇಂದು ಮಹತ್ವವನ್ನು ನೀಡಲಾಗಿದೆ. ಇದೆಲ್ಲಾ ಗೊತ್ತಿದ್ದೂ ವಾಜಪೇಯಿ, ಅದ್ವಾನಿ, ಫರ್ನಾಂಡಿಸ್ ಮುಂತಾದವರು ತೀವ್ರರೂಪದ ಹೇಳಿಕೆಗಳನ್ನು ನೀಡಿ ಈಗ ಪೆಚ್ಚುಮೋರೆ ಮಾಡಿಕೊಂಡಿರುವುದು ಅವರ ರಾಜಕೀಯ ಕಾರ್ಯನಿರ್ವಹಣೆಯ ವಿಫಲತೆಯನ್ನು ತೋರಿಸುತ್ತದೆ. ಕಾರ್ಗಿಲ್‌ನಲ್ಲಿ ಗೆದ್ದಂತೆ ಅಬ್ದುಲ್ಲಾ ವಿರುದ್ಧದ ಸಮರದಲ್ಲೂ ವಿಜಯಿಗಳಾಗುತ್ತೇವೆಂಬ ಹುಮ್ಮಸ್ಸು ಅವರದೆಂದು ತೋರುತ್ತದೆ. ಬಿರುಸಿನ ವಾಗ್ದಾಳಿಯ ಸಂದರ್ಭದಲ್ಲಿ ಅಬ್ದುಲ್ಲಾ ನಮ್ಮ ದೇಶದವನು, ಕಾಶ್ಮೀರ ನಮ್ಮ ದೇಶದ ಒಂದು ರಾಜ್ಯ ಎಂಬುದನ್ನು ಇವರೆಲ್ಲಾ ಮರೆತುಬಿಡುತ್ತಾರೆ !

ಇಷ್ಟಕ್ಕೂ ಅಬ್ದುಲ್ಲಾನನ್ನು ಕಾಶ್ಮೀರದ ಜನಪ್ರತಿನಿಧಿಯೆಂದು ನಾವು ಸ್ವೀಕರಿಸಿದ್ದೇವಲ್ಲವೆ ? ಕಾಶ್ಮೀರದ ಚುನಾವಣೆಗಳ ಇತಿಮಿತಿ ಏನೇ ಇರಲಿ, ವಿಶ್ವಕ್ಕೆ ನಾವು ಹೇಳುವುದಿದು: ಪ್ರಜಾಪ್ರಭುತ್ವದ ಕ್ರಮದಲ್ಲಿ ಅಲ್ಲಿ ಚುನಾವಣೆ ಜರುಗಿದೆ, ಒಂದು ಪಕ್ಷ ಅಧಿಕಾರಕ್ಕೆ ಬಂದಿದೆ, ಅಬ್ದುಲ್ಲಾ ಅದರ ನಾಯಕ ಮತ್ತು ಆತನ ಸರ್ಕಾರ ಇಡೀ ಜಮ್ಮು-ಕಾಶ್ಮೀರವನ್ನು ಪ್ರತಿನಿಧಿಸುತ್ತದೆ. ಇದರಲ್ಲಿ ಹುರುಳಿಲ್ಲವೆಂದಾದರೆ ಕಾಶ್ಮೀರದ ಜನಾಭಿಪ್ರಾಯ ಭಾರತದಲ್ಲಿ ವಿಲೀನವಾಗುವುದರ ಪರವಾಗಿದೆ ಎಂಬ ನಮ್ಮ ಮಾತು ಹುಸಿಯಾಗುತ್ತದೆ. ಇದನ್ನಾದರೂ ಕೇಂದ್ರದ ಸಮ್ಮಿಶ್ರ ಸರ್ಕಾರ ಗಣನೆಗೆ ತೆಗೆದುಕೊಳ್ಳಬೇಕಾಗಿತ್ತು. ಕಾಶ್ಮೀರ ಶಾಸನಸಭೆಯ ನಿರ್ಣಯವನ್ನು ಸರ್ವಾಂಗೀಣವಾಗಿ ಚರ್ಚೆಗೆ ಎತ್ತಿಕೊಳ್ಳಲು ಈಗಲೂ ಸಮಯ ಮೀರಿಲ್ಲ. ಸಚಿವ ಸಂಪುಟದಲ್ಲಿ ಆ ನಿರ್ಣಯವನ್ನು ಗುಡಿಸಿಹಾಕಿ ಈಗ ಅಬ್ದುಲ್ಲಾ ಜೊತೆ ಮಾತುಕತೆ ನಡೆಸುವುದಾಗಿ ಹೇಳುವ ನಮ್ಮ ಪ್ರಧಾನಿಗಳಿಗೆ ರಾಜಕೀಯ ಅರಳುಮರಳು ಆವರಿಸಿರುವುದು ಖಚಿತಗೊಂಡಿದೆ. ಕಾಶ್ಮೀರದ ನಿರ್ಣಯವನ್ನು ಹಾಗೆ ಕಸದಬುಟ್ಟಿಗೆ ಹಾಕುವುದೆಂದರೆ ನಾಳೆ ನಾಗಾಲ್ಯಾಂಡ್, ಅರುಣಾಚಲ ಪ್ರದೇಶ, ಮಣಿಪುರ, ಮೇಘಾಲಯ ಮುಂತಾದ ರಾಜ್ಯಗಳಲ್ಲಿ ಈಗಿರುವುದಕ್ಕಿಂತ ಹೆಚ್ಚಿನ ಅನುಮಾನಕ್ಕೆ ಆಸ್ಪದ ಕೊಟ್ಟಂತಲ್ಲವೆ? 'ಬಲಿಷ್ಠ ಕೇಂದ್ರ' ಇದಕ್ಕೇ ಏನು ಬೇಕಾಗುವುದು?

ಶಿಕ್ಷಣ, ಉದ್ದಿಮೆ, ಉದ್ಯೋಗ ಇವುಗಳಿಗೆ ಹಣ ತೊಡಗಿಸದೆ ಭಾರೀ ಸೈನ್ಯದ ತುಕಡಿಗಳನ್ನಿರಿಸಿ ಕಾಶ್ಮೀರದ ಜನರ ಮೇಲೆ ಕೈಮಾಡಿದರೆ ನ್ಯಾಷನಲ್ ಕಾನ್ಫರೆನ್ಸ್ ಸಹ ಹುರಿಯತ್ ಹಾದಿ ಹಿಡಿದೀತು. ಕೇಂದ್ರದ ಉದ್ಧಟತನಕ್ಕೆ ಇತಿಶ್ರೀ ಹಾಡಬೇಕು. ಪ್ರಾಬಲ್ಯದಿಂದ ಆಳುವ ಕಾಲ ಇದಲ್ಲ. ಪ್ರಾದೇಶಿಕ ಪಕ್ಷಗಳು ಪ್ರಬಲವಾಗಿರುವುದೇ ಕೇಂದ್ರದ ಕೆಡಕು ನೀತಿಗಳಿಂದ. ಆರ್ಥಿಕವಾಗಿಯಂತೂ ಕೇಂದ್ರದ್ದೇ ಕಡೆಯ ಮಾತು. ದೇಶದ ಸಂಪತ್ತನ್ನು ವಿದೇಶಿ ಕೈಗಳಿಗೆ ತಟಾಯಿಸುವಾಗ ಕೇಂದ್ರ ಸರ್ಕಾರವು ಯಾವ ರಾಜ್ಯದ ಅನುಮತಿ ಪಡೆಯುತ್ತದೆ? ಅಭಿವೃದ್ಧಿಯ ಹಾದಿಯಲ್ಲಿ ಮುಳ್ಳನ್ನು ಹಾಸಿ ಜನರು ಉಸಿರೆತ್ತಕೂಡದೆಂದು ಗದರಿಸಿದರೆ ಆಗುತ್ತದೆಯೇ? ಈ ಲಾಠಿ ಸಂಸ್ಕೃತಿ ದೇಶಕ್ಕೆ ಮಾರಕವಾದದ್ದು.

ಸಮಾನತೆ, ಸ್ವಾತಂತ್ರ್ಯ, ಸ್ವಂತಿಕೆ, ಸಹಯೋಗ ಇವು ಸ್ವಾಯತ್ತತೆಯ ಮೂಲಸೂತ್ರಗಳು. ಅದು ಸಂವಿಧಾನದತ್ತವಾದ ಹಕ್ಕೇ ವಿನಾ ಕೇಂದ್ರವು ರಾಜ್ಯಗಳಿಗೆ ನೀಡುವ ಭಿಕ್ಷೆಯಲ್ಲ. ಕಾಶ್ಮೀರದ ನಿರ್ಣಯದ ಅರ್ಥ ಅದು. ಕೇಂದ್ರವು ಎಚ್ಚೆತ್ತುಕೊಳ್ಳಬೇಕಾದ ಸಮಯ ಇದು. ಬಾಲಿಶ ಪ್ರತಿಕ್ರಿಯೆಗಳಿಂದ ಪರಿಸ್ಥಿತಿಯನ್ನು ಇನ್ನಷ್ಟು ಕಲುಷಿತಗೊಳಿಸಲು ಕೇಂದ್ರದ ಸಮ್ಮಿಶ್ರ ಸರ್ಕಾರಕ್ಕೆ ಜನತೆಯು ಅನುಮತಿ ನೀಡಿಲ್ಲ, ನೀಡುವುದಿಲ್ಲ.

## ಮಾರಿ ಕಣ್ಣು ಹೋತನ ಮೇಲೆ!

ರಾಷ್ಟ್ರೀಯ ದೂರಸಂಪರ್ಕ ನೀತಿ - ೧೯೯೯ರನ್ವಯ, ೨೦೦೧ನೆಯ ಇಸವಿಯಲ್ಲಿ ದೂರಸಂಪರ್ಕ ಇಲಾಖೆಯನ್ನು ಸಾರ್ವಜನಿಕ ಉದ್ದಿಮೆಯಾಗಿಸುವ ಉದ್ದೇಶವಿತ್ತು. ಆದರೆ ಈಗ ಇದನ್ನು ಬರುವ ಅಕ್ಟೋಬರ್ ೧ರಿಂದಲೇ ಮಾಡಿಬಿಡುವುದು ಖಾತ್ರಿಯಾಗಿದೆ. ಕಳೆದ ಎರಡು ವರ್ಷಗಳಿಂದ ವಿದೇಶೀ ಮತ್ತು ಸ್ವದೇಶೀ ವ್ಯಾಪಾರಿಗಳು ಎಬ್ಬಿಸಿರುವ ಗುಲ್ಲು-ಗೊಂದಲಗಳ ನಡುವೆ, ಈ ಇಲಾಖೆಯನ್ನು ಮೊದಲಿಗೆ ಸಾರ್ವಜನಿಕವಾಗಿಸಿ, ಮುಂದುವರಿದು ಅದರ ಆಸ್ತಿಯನ್ನು ಈ ವ್ಯಾಪಾರಿಗಳಿಗೆ ಅಗ್ಗದಲ್ಲಿ ಮಾರುವ ''ಖಾಸಗೀಕರಣ''ವೆಂಬ ಪ್ರಕ್ರಿಯೆಯ ಅಗತ್ಯವಾದರೂ ಏನು ಎಂಬ ವಿಷಯ ಇನ್ನು ಚರ್ಚಿಸಲೇ ಬೇಕಿಲ್ಲ. ಅದು ಸ್ವಯಂಸಿದ್ಧ ವಿಷಯವೆಂಬ ಕಿಡಿಗೇಡಿ ಧೋರಣೆ ಈ ತರಾತುರಿ ತೀರ್ಮಾನದಲ್ಲಿ ಎದ್ದು ಕಾಣುತ್ತಿದೆ.

ಕೊರತೆ ಇಲ್ಲದ ಸಮತೋಲನ ಬಜೆಟ್ ಬೇಕೇಬೇಕೆಂಬ ವಿಶ್ವ ವಾಣಿಜ್ಯ ಸಂಸ್ಥೆಯ ಹೊಲಸು ಆಜ್ಞೆಗೆ ದಾಸರಾಗಿ, ಸರ್ಕಾರದ ಉದ್ದಿಮೆಗಳನ್ನು ಖಾಸಗೀಕರಣಗೊಳಿಸಲು ಕೇಂದ್ರವು ಮುಂದಿಟ್ಟಿರುವ ಯಾವ ಕಾರಣಗಳೂ ದೂರ ಸಂಪರ್ಕ ಇಲಾಖೆಗೆ ಅನ್ವಯವಾಗುವುದಿಲ್ಲ. ಇದು ಸರ್ಕಾರದ ಬಜೆಟ್‌ನಿಂದ ಕೃಪಾಪೋಷಿತ ರೋಗಗ್ರಸ್ತ ಉದ್ದಿಮೆ ಎಂದೂ ಆಗಿಲ್ಲ. ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಿಯೂ, ಉತ್ತಮ ಲಾಭ ಗಳಿಸುತ್ತಿರುವ ಜನಮೆಚ್ಚಿದ ಅಪರೂಪದ ಸಮರ್ಥ ಇಲಾಖೆ ಇದು. ಕಳೆದ ಐದು ವರ್ಷಗಳಲ್ಲಿ ಈ ಸಂಸ್ಥೆ ಟೆಲಿಫೋನ್ ಸಂಖ್ಯೆಯಲ್ಲಿ ಶೇ. ೩೦೦ ರಷ್ಟು ಬೆಳವಣಿಗೆ ಸಾಧಿಸಿ, ಈಗ ಕೇಳಿದಾಗ ಟೆಲಿಫೋನ್ ಕೊಡಬಲ್ಲ ಪರಿಸ್ಥಿತಿಗೆ ಬಂದಿದೆ. ಟೆಲಿಫೋನ್ ಇಲ್ಲದೆ ಆರ್ಥಿಕ ಕ್ಷೇತ್ರದ ಬೆಳವಣಿಗೆಗೆ ಧಕ್ಕೆಯುಂಟಾಗುತ್ತಿದೆ ಎಂಬ ಹುರುಳಿಲ್ಲದ ವಾದಕ್ಕೆ ಈಗ ಕಾಲವಿಲ್ಲ. ಈ ಇಲಾಖೆಯ ವಿರುದ್ಧ ನಿರಂತರ ಪ್ರಚಾರ ಮಾಡುತ್ತಿರುವ ಆಸಕ್ತ ಬಂಡವಳಿಗರ ಪ್ರಚಾರ ಮಾಧ್ಯಮದಲ್ಲೇ ಈ ವಿಷಯ ಪ್ರಸ್ತಾಪವಾಗಿದೆ. ಹೀಗಿದ್ದೂ ಈ ಉದ್ದಿಮೆಯ ಖಾಸಗೀಕರಣದತ್ತ ಮೊದಲ ಹೆಜ್ಜೆ ಇಡುತ್ತಿರುವ ಸರ್ಕಾರ ಸ್ವದೇಶೀ-ವಿದೇಶೀ ಬಂಡವಳಿಗರ ಕೈಗೊಂಬೆಯಾಗಿರುವುದು ಈಗ ಮತ್ತಷ್ಟು ಸ್ಪಷ್ಟವಾಗುತ್ತಿದೆಯೇ ವಿನಾ ಇದರಲ್ಲಿ ಕಿಂಚಿತ್ತೂ ಸ್ವದೇಶ ಪ್ರೇಮ ಜಾಗರಣೆ ಕಂಡುಬರುತ್ತಿಲ್ಲ. ಇತ್ತೀಚೆಗೆ ಇಂಗ್ಲೆಂಡಿನಲ್ಲಿ ೩ ಜಿ-ತಂತ್ರಜ್ಞಾನದ ಸೆಲ್ಯೂಲಾರ್ ವ್ಯವಸ್ಥೆಗೆ ಹರಾಜು ನಡೆಸಿದಾಗ ಬಂದ ಹಣ ೨೨ ಬಿಲಿಯನ್ ಪೌಂಡೆಂದು ವರದಿಯಾಗಿದೆ. ಅಂದಮೇಲೆ ವಿಶಾಲವಾದ ಭಾರತದಲ್ಲಿ ಈ ಕ್ಷೇತ್ರದಲ್ಲಿ ಇವರು ಲೂಟಿ ಮಾಡಹೊರಟಿರುವ ಸಂಪತ್ತಿನ ಪ್ರಮಾಣದ ಅರಿವಾದೀತು : ಅದರ ಐದರಷ್ಟು.

ಸರ್ಕಾರ ನಿಯೋಜಿಸಿದ ವಿದೇಶಿ ಕಂಪೆನಿಯೊಂದು ದೂರ ಸಂಪರ್ಕ ಇಲಾಖೆಯ ಆಸ್ತಿಪಾಸ್ತಿಯ ಬೆಲೆ ಸುಮಾರು ೨,೫೦,೦೦೦ ಕೋಟಿ ರೂಪಾಯಿಗಳೆಂದು ಅಂದಾಜು ಮಾಡಿದೆ. ನಿಜಕ್ಕೂ ಇದು ಸುಮಾರು ೭ಲಕ್ಷ ಕೋಟಿಗೂ ಮೀರಿದ್ದೆಂಬ ಗುಮಾನಿಯಿದೆ. ಕಂಪೆನಿಯ ಲೆಕ್ಕಾಚಾರದ ವರದಿಯನ್ನು ಕೂಡಲೇ ಸಾರ್ವಜನಿಕರ ಅವಗಾಹನೆಗೆ ಬಿಡುಗಡೆ ಮಾಡಬೇಕು. ಈ ಅಂದಾಜು ಸರಿಯಾದರೆ, ಬಜೆಟ್ ಕೊರತೆ ನೀಗಿಸಲು ಈ ಒಂದು ಇಲಾಖೆಯನ್ನು ಮಾರಿದರೆ ಸಾಕು ಎಂದೆನಿಸುವುದಿಲ್ಲವೆ ! ಇದರ ವಾರ್ಷಿಕ ಆದಾಯ ಸುಮಾರು ೩೦ ಸಹಸ್ರ ಕೋಟಿಗಳಷ್ಟಿತ್ತು. ಇತ್ತೀಚೆಗೆ ವಿಶ್ವವ್ಯಾಪಾರ ಸಂಸ್ಥೆ ಮತ್ತು ಅಮೆರಿಕದ ಒತ್ತಾಯದಿಂದಾಗಿ ಇದರ ಆದಾಯ ಕಡಿಮೆಯಾಗುವಂತೆ ಬೆಲೆ ಇಳಿಸುವ ಕ್ರಮಗಳನ್ನು ಕೈಗೊಳ್ಳಲಾಯಿತು. ಮಾರಲಿರುವ ಆಸ್ತಿಯ ಬೆಲೆಯನ್ನು ಮಾರಾಟಕ್ಕೆ ಇಡುವ ಮುನ್ನ ಇನ್ನಷ್ಟು ಅಗ್ಗ ಮಾಡುವ ಈ ತಂತ್ರ ಖಾಸಗೀ ಕ್ಷೇತ್ರದ ಅದಾವ ವ್ಯಾಪಾರಿ ತಾನೇ ಮಾಡಿಯಾನು?

ಮಾಹಿತಿ, ದೂರ ಸಂಪರ್ಕ ಮತ್ತು ಮನೋರಂಜನೆಯ ತಾಂತ್ರಿಕ ಮಾಧ್ಯಮಗಳು ಕ್ರೋಡೀಕೃತವಾಗುತ್ತಿವೆಯಾದರೂ ಇವುಗಳನ್ನು ಕುರಿತ ಸಾರ್ವಜನಿಕ ನೀತಿಯ ಧೋರಣೆ ಏಕಸೂತ್ರವಾಗಬೇಕೆಂಬುದು ಚರ್ಚಾಸ್ಪದ. ವ್ಯಾಪಾರ, ವಾಣಿಜ್ಯ, ಲಾಭದೃಷ್ಟಿಯಿಂದ ಸಾಮಾಜಿಕ ಪರಿಣಾಮ, ಅಗತ್ಯ, ಇತಿಮಿತಿಗಳನ್ನು ನೋಡಲಾಗದು. ಆದರೂ ನ್ಯಾಯವಾದಿ ಸೋಲಿ ಸೊರಾಬ್ಜಿಯವರ ನೇತೃತ್ವದಲ್ಲಿ ಏಕಸೂತ್ರ ಮಾಧ್ಯಮ ನೀತಿಯೊಂದನ್ನು ರಚಿಸಲಾಗುತ್ತಿದೆ. ಮತ್ತೊಂದು ಮಂತ್ರಿಗಳ ಸಮಿತಿ ಇದೇ ವಿಷಯವಾಗಿ ತನ್ನ ಸಲಹೆಗಳನ್ನು ಕೇಂದ್ರ ಸಂಪುಟಕ್ಕೆ ಆಗಸ್ಟ್ ೧೫ರೊಳಗೆ ನೀಡಲಿದೆ. ಪರದೇಶಿ ಕಂಪೆನಿಯೊಂದು ದೂರ ಸಂಪರ್ಕ ಇಲಾಖೆಯನ್ನು ಹಂತಹಂತವಾಗಿ ಖಾಸಗಿ ಉದ್ದಿಮೆಯಾಗಿಸುವ ರೂಪುರೇಷೆಗಳನ್ನು ತಯಾರಿಸುತ್ತಿದೆ. ಇವೆಲ್ಲಾ ತೀರಾ ಮಹತ್ವದ ಜಟಿಲವಾದ ವಿಷಯಗಳು. ಇಲ್ಲಾಗುವ ಸಂಗತಿಗಳು ಸರ್ಕಾರದ ಮತ್ತು ದೇಶದ ಇತರ ಕ್ಷೇತ್ರಗಳಲ್ಲೂ ವ್ಯಾಪಕ ಪರಿಣಾಮ ಉಂಟುಮಾಡುವಂಥವು. ಎಲ್ಲಾ ವರದಿಗಳನ್ನೂ ಸಾರ್ವಜನಿಕ ಚರ್ಚೆಗೆ ಸಾಕಷ್ಟು ಸಮಯ ಕೊಟ್ಟು ಬಿಡುಗಡೆ ಮಾಡದೆಯೇ ಬರುವ ಅಕ್ಟೋಬರ್ ೧ರ ಒಳಗೆ ದೂರ ಸಂಪರ್ಕ ಇಲಾಖೆಯನ್ನು ಸಾರ್ವಜನಿಕ ಉದ್ದಿಮೆಯಾಗಿಸುವ ಘೋಷಣೆ ಹೊರಡಿಸಲು ಸರ್ಕಾರ ಸನ್ನದ್ಧವಾಗುತ್ತಿದೆ. ನಾಲ್ಕು ತಿಂಗಳಲ್ಲಿ ಸಾಧ್ಯವಾಗದ್ದು ನಲವತ್ತು ವರ್ಷದಲ್ಲೂ ಆಗದು ಎಂದು ಸಂಚಾರ ಮಂತ್ರಿಗಳು ಹೇಳಿದ್ದಾರೆ. ಆದರೆ ಪಕ್ವವಾಗುವುದಕ್ಕೆ ಮುಂಚೆ ಕಿತ್ತರೆ ಅದು ಗರ್ಭಪಾತವೆನಿಸಿಕೊಳ್ಳುವುದೇ ವಿನಾ ಆರೋಗ್ಯಕರ ಸಾಧನೆಯಲ್ಲ ಅಥವಾ ಈ ಸರ್ಕಾರ ತಾನು ಬಹಳ ಕಾಲ ಉಳಿಯಲಾರೆವೆಂಬ ಅಂತರಂಗದ ಅಳುಕು, ಹೀಗೆ ಅವರನ್ನೂ ಓಡಿಸುತ್ತಿದೆಯೋ ಏನೋ ! ಈ ಅವಸರದಲ್ಲೆಲ್ಲೋ ಮನೆ ಮುರುಕುತನದ ಮತ್ತೊಂದು ಅನೀತಿಯ ತೆರೆಮರೆಯ ಹಗರಣವಿದೆ ಎಂದೆನಿಸಿದರೆ, ಇದಕ್ಕೆ ಸರ್ಕಾರವೇ ಹೊಣೆ.

ಒಂದು ಇಲಾಖೆಯನ್ನು ಸಾರ್ವಜನಿಕ ಉದ್ದಿಮೆಯಾಗಿಸುವುದೆಂದರೆ, ಅದು ರಾಜಕೀಯ ಮತ್ತು ಅಧಿಕಾರಶಾಹಿಯ ಹಸ್ತಕ್ಷೇಪವಿಲ್ಲದ, ಲೋಕಸಭೆಗೆ ಮಾತ್ರ ಉತ್ತರದಾಯಿತ್ವದ ಹೊಣೆ ಹೊತ್ತ, ಸ್ವಾಯತ್ತ ಆರೋಗ್ಯಕರ ಉದ್ದಿಮೆಯಾಗಿಸುವುದು ಎಂದಾಗಬೇಕು. ಹೀಗಲ್ಲದೆ ಇದರ ಅಪಾರ ಆಸ್ತಿಯನ್ನು ಸ್ವದೇಶೀ-ಪರದೇಶೀ ಬಂಡವಳಿಗರಿಗೆ ಅಗ್ಗದಲ್ಲಿ ಮಾರಿಕೊಳ್ಳುವ ಹವಣಿನ ಮೊದಲ ಹೆಜ್ಜೆ ಈ ಕ್ರಮವೆಂದು ಭಾವಿಸಿದರೆ ಅದಕ್ಕೆ ಜನತೆಯ ಸಂಪೂರ್ಣ ವಿರೋಧವಿದೆ. ಇಲಾಖೆಯ ನೌಕರರೂ, ಸ್ವದೇಶೀ ಸ್ವಾಯತ್ತತೆಯ ಸ್ವಯಂ ಜಾಗೃತರೂ, ಪ್ರಗತಿಪರ ಶಕ್ತಿಗಳೂ ಇದನ್ನು ಹಣಾಹಣಿ ವಿರೋಧಿಸದೇ ಇದ್ದರೆ, ಭಾರತದ ಸರ್ಕಾರ ದಿವಾಳಿ ಏಳುವ ಕಾಲ ಸನ್ನಿಹಿತವಾದಂತೆಯೇ ಸರಿ. ಟೆಲಿಕಾಂ ಇಲಾಖೆ ಸಾರ್ವಜನಿಕ ಕಾರ್ಪೊರೇಷನ್ ಆದ ಮೇಲೆ, ಅದನ್ನು ಮುಂದುವರಿಸಿ ಖಾಸಗೀಕರಣಗೊಳಿಸುವುದಿಲ್ಲವೆಂದು ಲೋಕಸಭೆಯು ಕಾನೂನಿನ ಮೂಲಕ ಸ್ಪಷ್ಟ ಆಶ್ವಾಸನೆ ನೀಡಬೇಕೆಂದು ಭಾರತದ ಜನತೆ ಒತ್ತಾಯಿಸುತ್ತದೆ.

- ಪಾರ್ಥ

ತಿಂಗಳ ಪತ್ರಿಕೆ
ಹೊಸತು
ನಿಮ್ಮರಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ✆ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ✆ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ✆ : ೪೨೪೦೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ✆ : ೨೪೩೦೨

### ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ನಿಲುವು

ಜೂನ್ ತಿಂಗಳ ಪತ್ರಿಕೆಯಲ್ಲಿ ''ಆಲಮಟ್ಟಿ ಹೋರಾಟ - ಚೈತನ್ಯದ ಜೊತೆ ಚೆಲ್ಲಾಟ''ವೆಂಬ ಡಾ॥ ಸಿದ್ದನಗೌಡ ಪಾಟೀಲರ ಲೇಖನದಲ್ಲಿ ನನ್ನ ಹಾಗೂ ನನ್ನ ಪಾರ್ಟಿಯ ಕುರಿತು ಉಲ್ಲೇಖಿಸಿದ್ದು ಅದಕ್ಕೆ ಸ್ಪಷ್ಟೀಕರಣ ಅಗತ್ಯ. ಪ್ರಧಾನ ಮಂತ್ರಿ ವಾಜಪೇಯಿಯವರು ಚಂದ್ರಬಾಬು ನಾಯ್ಡು ಅವರ ಒತ್ತಡಕ್ಕೆ ಮಣಿದು ಆಲಮಟ್ಟಿ ಅಣೆಕಟ್ಟಿನ ಎತ್ತರದ ಕುರಿತು ಹೊಸ ಅಫಿಡಾವಿತ್ ಸಲ್ಲಿಸಿದಾಗ ಅದರ ವಿರುದ್ಧ ಪ್ರತಿಭಟನೆ ಮಾಡಿದವ ನಾನು. ಅನಂತರ ವಾಜಪೇಯಿ ಸಲ್ಲಿಸಿದ ಅಫಿಡಾವಿತ್ತನ್ನು ವಾಪಸು ಪಡೆಯಬೇಕೆಂದು ಒತ್ತಾಯಿಸಲು ಸರ್ವಪಕ್ಷಗಳ ಹೋರಾಟ ನಡೆಸಬೇಕೆಂಬ ಉದ್ದೇಶದಿಂದ ಸಭೆ ಕರೆದವರು ನಾವು: ಕೇಂದ್ರ ಸರಕಾರ ಸುಪ್ರೀಂಕೋರ್ಟಿಗೆ ಹೊಸತಾಗಿ ಸಲ್ಲಿಸಿರುವ ಅಫಿಡಾವಿತ್ತನ್ನು ವಾಪಸು ಪಡೆಯುವಂತೆ ಒತ್ತಾಯ ತರಬೇಕೆಂಬ ಒಂದೇ ಒಂದು ಉದ್ದೇಶದಿಂದ ಮಾತ್ರ. ಇದನ್ನು ಡಾ॥ ಸಿದ್ದನಗೌಡರು ತಿಳಿದುಕೊಳ್ಳಬೇಕು. ಆಲಮಟ್ಟಿ ಎತ್ತರದ ಕುರಿತಾದ ದಾವೆ ಸುಪ್ರೀಂ ಕೋರ್ಟಿನ ಮುಂದಿರುವುದರಿಂದ ಅದರ ವಿರುದ್ಧ ಹೋರಾಟ ಸರಿಯಿಲ್ಲವೆಂಬುದೇ ನಮ್ಮ ನಿಲುಮೆ. ಮೆರವಣಿಗೆಯಲ್ಲಿ ಹೋಗಿ ಜಿಲ್ಲಾಧಿಕಾರಿಗಳಿಗೆ ಮನವಿ ಅರ್ಪಿಸಬೇಕೆಂಬುದೇ ಆ ಸಭೆಯ ನಿರ್ಣಯ. ಕೆಲವೇ ಜನ ನಮ್ಮನ್ನೊಳಗೊಂಡ ಹೋರಾಟ ಸಮಿತಿಯ ಅಭಿಪ್ರಾಯವನ್ನು ಕಡೆಗಣಿಸಿ ರೈಲ್‌ರೋಕೋ, ಬಂದ್ ಆಚರಿಸಿದರು.

'ಎ' ಸ್ಕೀಮಿನಲ್ಲಿ ಆಲಮಟ್ಟಿಯ ಎತ್ತರ ೫೧೯ ಮೀ. ಮಾತ್ರ. 'ಬಿ' ಸ್ಕೀಮಿನಲ್ಲಿ ಹೆಚ್ಚುವರಿ ನೀರಿನ ಪಾಲಿನಿಂದ ೫೨೪ ಮೀ. ಎತ್ತರದಲ್ಲಿ ನೀರು ನಿಲ್ಲಿಸಿ ಪೂರ್ಣ ಪ್ರಮಾಣದ ವಿದ್ಯುತ್ ಉತ್ಪಾದಿಸಬಹುದಾಗಿದೆ. ಬಚಾವತ್ ಆಯೋಗದ ಶಿಫಾರಸ್‌ಗಳನ್ನು ಅಭ್ಯಾಸ ಮಾಡದೆ ಮನಬಂದಂತೆ ಪ್ರಚೋದನಕಾರಿ ಭಾಷಣಗಳಿಂದಾಗಿ ಹೋರಾಟದ ಮಹತ್ವಕ್ಕೆ, ಸತ್ಯಾಗ್ರಹದ ಟೆಂಟಿಗೆ ಕಳಂಕ ಉಂಟಾಯಿತೆಂದು ನನ್ನ ಹಾಗೂ ಬಹು ಜನ ವಿಚಾರವಂತರ ಅಭಿಪ್ರಾಯ. ವೈಜನಾಥ ಪಾಟೀಲರ ಕರಸೇವೆ, ಘೋಷಣೆ ಎಷ್ಟು ಹಾಸ್ಯಾಸ್ಪದ. ಸತ್ಯಾಗ್ರಹ ನಡೆಸುವ ಮುಖಂಡರು ಅದಕ್ಕೂ ಮಣಿದರು.

ನನ್ನ ಕಿರುಹೊತ್ತಿಗೆ ''ಕೃಷ್ಣೆಯ ನೀರು ರೈತರ ಕಣ್ಣೀರು'' ಬಚಾವತ್ ಆಯೋಗದ ಮುಖ್ಯಾಂಶಗಳನ್ನೊಳಗೊಂಡಿರುವುದರಿಂದ 'ಎ' ಮತ್ತು 'ಬಿ' ಸ್ಕೀಮಿನ ಕುರಿತು ಜನರಲ್ಲಿ, ಹೋರಾಟ ಸಮಿತಿಯಲ್ಲಿದ್ದವರಲ್ಲಿ, ಗೊಂದಲ ಇದ್ದುದರಿಂದ ನಿಜವಾದ ಸಂಗತಿಗಳನ್ನು ಪರಿಚಯಿಸಬೇಕು; ಅದಕ್ಕೆ ಸತ್ಯಾಗ್ರಹ ಟೆಂಟೇ ಯೋಗ್ಯವೆಂದು ಗೆಳೆಯರು ಒತ್ತಾಯ ಮಾಡಿದ್ದರಿಂದ ಪುಸ್ತಕದ ಬಿಡುಗಡೆ ಟೆಂಟಿನಲ್ಲಿ ಮಾಡಲಾಯಿತಲ್ಲದೆ ಸಿದ್ದನಗೌಡರು ಹೇಳುವಂತೆ ಆಗ ಹೋರಾಟ ಸಂವಿಧಾನ ಬದ್ಧವಾಗಿತ್ತು, ಆಮೇಲೆ ದಿಕ್ಕು ಬದಲಾಯಿತೆಂದು ಹೇಳುವುದು ಸರಿಯಲ್ಲ. ೬ ರಂದು ಸತ್ಯಾಗ್ರಹ ಪ್ರಾರಂಭಿಸುವಾಗಲೇ ಅದು ಅನಗತ್ಯವೆಂದು ಕಮಿಟಿಯಲ್ಲೂ ಹೇಳಿದ್ದೇನೆ. ಪತ್ರಿಕಾ ಪ್ರಕಟಣೆಯನ್ನು ಮಾಡಿದ್ದೇನೆ. ಇಲ್ಲಿ ಚೈತನ್ಯದ ಪ್ರಶ್ನೆ ಎಲ್ಲಿದೆ ? ಅದರ ಜೊತೆ ಹೋರಾಟ ಎಲ್ಲಿದೆ ? ಇದು ಸುಪ್ರೀಂ ಕೋರ್ಟಿನ ವಿರುದ್ಧ ಹೋರಾಟ. ಕರಸೇವೆಯ ನಾಟಕ ಹಾಸ್ಯಾಸ್ಪದ.

''ಕೃಷ್ಣೆಯ ನೀರು ರೈತರ ಕಣ್ಣೀರು'' ಲೇಖನಗಳ ಸಂಗ್ರಹವಲ್ಲ. ಅದು ಕಿರುಹೊತ್ತಿಗೆ.

*ಬಿಜಾಪುರ* — ***ಎನ್. ಕೆ. ಉಪಾಧ್ಯಾಯ***

ಜುಲೈ ಸಂಚಿಕೆಯ ಮುಖಪುಟ ತುಂಬಾ ಸೊಗಸಾಗಿ ಮೂಡಿಬಂದದ್ದು, ಆ ಹೊಯ್ಸಳ ದೇವಾಲಯ ಯಾವ ಸ್ಥಳದಲ್ಲಿದೆ ಹಾಗೂ ಈ ಬಗ್ಗೆ ಒಂದು ಪುಟ್ಟ ಲೇಖನ ಪ್ರಕಟಿಸಿದ್ದರೆ ಸೊಗಸಾಗಿರುತ್ತಿತ್ತು. ಯಾವುದೇ ಮುಖಪುಟವಿದ್ದರೂ ಅದರ ಬಗ್ಗೆ ಒಂದು ಲೇಖನವಿರುವುದು ಪತ್ರಿಕೆಗೆ ಶೋಭೆ ತರುತ್ತದೆ.




*ಮಂಡ್ಯ* — ***ಎನ್. ಶ್ರೀನಿವಾಸ್***

'ಅಂಡಮಾನಿನ ಕಡಲ ಗರ್ಭದೊಳಗೆ' ಪ್ರವಾಸ ಕಥನವನ್ನು ಚೆನ್ನಾಗಿ ಮಾತ್ರವಲ್ಲದೆ ನವ್ಯವಾದ ರೀತಿಯಲ್ಲಿ ನಿರೂಪಿಸಿದ್ದಾರೆ. ಹೋದ ಬಂದ ಕಥೆಗಳಂತಲ್ಲ.

ಒಂದೊಂದು ಕಡೆಯಲ್ಲಿ ಪುಟ್ಟದಾದ ಹಾಸ್ಯ ಘಟನೆಯನ್ನು ನೆನಪಿಸಿದ್ದರಿಂದ ಈ ಲೇಖನ ಓದುಗನಿಗೆ ಬೋರ್ ಹೊಡಿಸದೆ ಓದಿಸಿಕೊಂಡು ಹೋಗುತ್ತದೆ.

*ಆನೆಗುಂಡಿ* — ***ಎ. ಆರ್. ಸಾಲಿಯಾನ್***

ಜುಲೈ ತಿಂಗಳ ಸಂಚಿಕೆಯಲ್ಲಿ ನನಗಿಷ್ಟವಾದ ಲೇಖನಗಳು, ಬೇಡ ಬಿಡಿ, ಹೆಸರಿಸಿದರೆ ಎಲ್ಲ ಲೇಖನಗಳನ್ನೂ ಹೆಸರಿಸಬೇಕಾದೀತು. ಪತ್ರಿಕೆಯ ಧ್ಯೇಯ ಹಾಗೂ ಆಶಯ 'ನೆಮ್ಮದಿಯ ನಾಳೆ ನಮ್ಮದು' ನಿಜಕ್ಕೂ ಸಾರ್ಥಕವಾಗಿದೆ. ಮೇಲ್ನೋಟಕ್ಕೆ ಇದೊಂದು ಎಡಪಂಥೀಯ ಒಲವುಳ್ಳ ಪತ್ರಿಕೆಯೆಂದು ಕೆಲವರಿಗೆ ಅನ್ನಿಸಬಹುದಾದರೂ, ಇದರ ಜನಪರ ಕಾಳಜಿಯನ್ನು ಯಾರೂ ಅಲ್ಲಗಳೆಯುವಂತಿಲ್ಲ. ಒಂದು ಮೌಲಿಕ, ಚಿಂತನಶೀಲ ಓದಿನ ಖುಷಿಯನ್ನು ನೀಡುವ ಪತ್ರಿಕೆ 'ಹೊಸತು' ಎಂಬ ಪ್ರೀತಿಯಿಂದ ಇದನ್ನು ಪ್ರತಿ ತಿಂಗಳೂ ಎತ್ತಿಕೊಳ್ಳುತ್ತಿದ್ದೇನೆ.

*ಮೂಡಂಬೈಲು* — ***ಸಿ. ಎಚ್. ಕೃಷ್ಣಶಾಸ್ತ್ರಿ***

ಜುಲೈ ತಿಂಗಳ ಸಂಚಿಕೆಯ ಮುಖಪುಟದಲ್ಲಿ ದಿಟ್ಟೆದೆಯ ವೀರ (ಫಿಡಲ್ ಕ್ಯಾಸ್ಟ್ರೋ)ನ ಭಾವಚಿತ್ರ ಕಂಡು ತುಂಬಾ ಸಂತೋಷವಾಯಿತು. ಪ್ರಬಲ ರಾಷ್ಟ್ರಗಳು ತೃತೀಯ ಜಗತ್ತಿನ ದುರ್ಬಲ ರಾಷ್ಟ್ರಗಳನ್ನು ಉದಾರೀಕರಣದ ನೆಪದಲ್ಲಿ ಹೇಗೆ ನಡೆಸುತ್ತಿವೆ ಎಂಬುದನ್ನು ಸರಿಯಾಗಿಯೇ ತಿಳಿಸಿದ್ದಾರೆ. ಧನ್ಯವಾದ.

*ಬೈಕಂಪಾಡಿ* — ***ಆಶಾ.ಜಿ.***

ಜುಲೈ ತಿಂಗಳ 'ಹೊಸತು'ವಿನ ಮುಖಪುಟ ಚೆನ್ನಾಗಿ ಮೂಡಿ ಬಂದಿದೆ. ನರ್ಮದ ಅಣೆಕಟ್ಟಿನ ಬಗ್ಗೆ ಇಬ್ಬರು ಲೇಖಕರು ಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಮಹಾನ್ ಕ್ರಾಂತಿಕಾರಿ ಫಿಡಲ್ ಕ್ಯಾಸ್ಟ್ರೋ ಹಾಗೂ ಮೂವರು ಮಾನವತಾವಾದಿಗಳ ಬಗ್ಗೆ ಡಾ॥ ನಾಡಕರ್ಣಿಯವರ ಲೇಖನ ಕಂಡು ಆನಂದವಾಯಿತು.

*ಮಂಗಳೂರು* — ***ಗಣೇಶ್ ಕುಮಾರ್***

ಜುಲೈ ತಿಂಗಳ 'ಹೊಸತು'ವಿನ ಮುಖಪುಟ ಮೋಹಕವಾಗಿತ್ತು. ದೇವಾಲಯದ ಚಿತ್ರ ಮನಸೂರೆಗೊಂಡಿತು. ವಸುಮತಿ ಉಡುಪರ 'ಖಾಲಿಸೈಟಿನ ಆತ್ಮಕಥೆ' ಚೆನ್ನಾಗಿತ್ತು. ಭೂಮಿ ತನ್ನತನವನ್ನು ಕಳೆದುಕೊಂಡು ಎಂತೆಂಥ ಪರಿಸ್ಥಿತಿಗೆ ಸಿಲುಕಿತು ಎಂಬುದನ್ನು ಲೇಖಕಿ ಎಳೆ ಎಳೆಯಾಗಿ ಚಿತ್ರಿಸಿದ್ದಾರೆ. ಲೇಖಕಿಗೆ ಅಭಿನಂದನೆಗಳು.

*ಚಿಕ್ಕರೂಗಿ* — ***ಪ್ರಕಾಶ ಜಹಗೀರದಾರ***

ದಲಿತರ ಮೇಲೆ ದೌರ್ಜನ್ಯ ಹೆಚ್ಚುತ್ತಿರುವ ಹಾಗೂ ದಲಿತ ಸಂಘಟನೆಗಳು ಸ್ವಾರ್ಥ ಸಾಧಕರ ಕೈಯಲ್ಲಿ ನರಳುತ್ತಿರುವ ಈ ಕಾಲದಲ್ಲಿ ನಾಡಕರ್ಣಿಯವರ ಲೇಖನ ದಲಿತರ ಬಲಸಂವರ್ಧನೆಗೆ ಆತ್ಮವಿಮರ್ಶೆಗೆ ದಾರಿಯಾಗುವಂತಿದೆ.

*ಹನಿಯ* — ***ಶಿವರಾಮ ಕಾರಗಡಿ***

### ತಿದ್ದುಪಡಿ

ಕಳೆದ ಸಂಚಿಕೆಯ ಕನಸು-ಆತ್ಮ ಲೇಖನದ ಮೊದಲ ಪ್ಯಾರಾದ ೪ನೇ ಸಾಲನ್ನು ಧೂಳಿನ ಕಣದ ಭಾರ ಇತ್ಯಾದಿಗಳ ವಿವರಗಳನ್ನು ವಿಜ್ಞಾನದ ಬೆಳವಣಿಗೆಯಿಂದಾಗಿ **ನಾವು ತಿಳಿದುಕೊಳ್ಳಲು ಸಾಧ್ಯವಾಗಿದೆ. ಸಾಧ್ಯವಾಗಬೇಕೆಂಬ ಇನ್ನೂ ಹಲವು ಪ್ರಕೃತಿಯ ರಹಸ್ಯಗಳಿಗೆ** ವಿಜ್ಞಾನ ಸಜ್ಜುಗೊಳ್ಳುತ್ತದೆ.

೩ನೇ ಪ್ಯಾರಾದ ಮೊದಲ ಸಾಲು ಶರೀರಶಾಸ್ತ್ರ ಕುರಿತು **ತಿಳಿದಿರದ** ... ಎಂದು ಓದಿಕೊಳ್ಳಬೇಕಾಗಿ ವಿನಂತಿ.

# ಸಮಕಾಲೀನ ಸಂದರ್ಭದಲ್ಲಿ ಸೌಹಾರ್ದತೆಯ ಸಾಧ್ಯತೆಗಳು

ಸಮಕಾಲೀನತೆಯೆಂಬುದನ್ನು ವ್ಯಾಖ್ಯಾನಿಸುವುದೇ ಒಂದು ಕಷ್ಟದ ವಿಷಯ. ಏಕೆಂದರೆ ''ಕುವೆಂಪು ಅವರ ಸಮಕಾಲೀನರಾಗಿ ಬಾಳುವುದೇ ಹೆಮ್ಮೆಯ ವಿಷಯ'' ಎಂದು ಕೆಲವು ಸಾಹಿತಿಗಳು ಹೇಳಿದ್ದನ್ನು ಕೇಳಿದ್ದೇನೆ. ಅದು ಕುವೆಂಪು ಅವರ ಕುರಿತು ಇಟ್ಟುಕೊಂಡ ಅಭಿಮಾನವಾಗಿರಬಹುದು. ಆದರೆ ಸಮಕಾಲೀನತೆ ಎಂದರೆ ಏನೆಂದು ಗೆರೆಕೊರೆದು ಹೇಳಲು ಸಾಧ್ಯವೇ? ಸಮಕಾಲೀನತೆಯೆಂದರೆ ಒಂದು ದಶಕವೇ ಒಂದು ಶತಮಾನವೇ ಎಂಬುದು ನನಗಿರುವ ಆತಂಕ. ಸರಳವಾಗಿ ಅರ್ಥೈಸುವುದಾದರೆ ಅದನ್ನು ''ವರ್ತಮಾನ'' ಎಂದು ಕರೆಯಬಹುದೇನೋ. ವರ್ತಮಾನವು ಭೂತದಂತೆ ನಿಖರವಾಗಿ ಅಳೆಯಲು ಬಾರದ್ದು. ವರ್ತಮಾನವೆನ್ನುವುದು ಭೂತದ ಕೊನೆಯ ಮತ್ತು ಭವಿಷ್ಯತ್ತಿನ ಮೊದಲ ಕ್ಷಣದ ನಡುವಿನ ಅಮೂರ್ತ ಬಿಂದು. ನಮ್ಮ ಆಂತರಿಕ ಒತ್ತಡಗಳು, ಬಾಹ್ಯ ಸಮಾಜದ ರೀತಿ ನೀತಿಗಳು ಮತ್ತು ವ್ಯಕ್ತಿಗಳ ಮಧ್ಯದ ಸಂಘರ್ಷಗಳು ಸಂದರ್ಭವನ್ನು ಸೃಷ್ಟಿಸುತ್ತವೆ. ಆದ್ದರಿಂದ ಈ ಸಂದರ್ಭಗಳೇ ನಮಗೆ ಸಮಕಾಲೀನತೆಯನ್ನು ನಿರ್ಧರಿಸಲು ಸಹಾಯ ಮಾಡಬಹುದು. ಇತಿಹಾಸದ ಘಟನೆಗಳನ್ನು ವಿವೇಚಿಸಿದಾಗ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ತೀವ್ರವಾದಿ ಹೋರಾಟಗಾರರು ಶಿಲುಬೆಗೆ ಏರಿದ್ದರ ಸುಳಿವು ಸಿಗದಂತೆ ಮುಚ್ಚಿಹಾಕಿರುವುದು ಕಂಡುಬರುತ್ತದೆ. ಅಂತೆಯೇ ಸ್ವಾತಂತ್ರ್ಯ ಹೋರಾಟವನ್ನು ಒಂದೇ ಕೋಮಿನವರು ನಡೆಸಿದ ಸಂಘರ್ಷವೆಂದು ನಿರೂಪಿಸುವ ಪ್ರಯತ್ನಗಳು ವಿಫಲವಾಗುತ್ತಿರುವುದು ನಮ್ಮ ದೇಶದ ಅದೃಷ್ಟ. ಅದಕ್ಕೆ ಇಲ್ಲಿ ಒಂದೆರಡು ಉದಾಹರಣೆಗಳನ್ನು ನೋಡಬಹುದು. ೧೯೩೦ರಲ್ಲಿ ''ಖುದಾಯಿ ಖಿದ್ಮತ್‌ಗಾರ್'' ಎಂಬ ಸಂಸ್ಥೆಯ ಮೂಲಕ ಗಡಿನಾಡಿನ ಗಾಂಧಿಯೆನಿಸಿದ ಖಾನ್ ಅಬ್ದುಲ್ ಗಫಾರ್ ಖಾನ್ ಸ್ವಾತಂತ್ರ್ಯ ಚಳುವಳಿಗಾಗಿ ಪಠಾಣರನ್ನು ಸಂಘಟಿಸಿದರು. ಅವರ ಸಹೋದರ ಡಾ|| ಖಾನ್‌ರ ನೇತೃತ್ವದಲ್ಲಿ ಕೆಂಪಂಗಿ ಯೋಧರು ಬ್ರಿಟಿಷ್ ಸೈನಿಕರ ಎದೆ ನಡುಗಿಸಿದ್ದರು.

ಭಾರತೀಯ ಮುಸ್ಲಿಂ ಮಹಿಳೆಯರೂ ಈ ವಿಷಯದಲ್ಲಿ ಹಿಂದೆ ಬಿದ್ದಿರಲಿಲ್ಲ. ಮೈಜಾದಾ ಹಸೀನಾ ಬೇಗಮ್ ಎಂಬಾಕೆ ಕಲಕತ್ತಾದ ಕಸ ಗುಡಿಸುವವರ ಹಕ್ಕುಗಳಿಗಾಗಿ ದಿಟ್ಟತನದಿಂದ ಹೋರಾಡಿದವಳು. ಜೈಲುವಾಸ ಅನುಭವಿಸಿದ ನಂತರವೂ ಪೊಲೀಸ್ ದಬ್ಬಾಳಿಕೆ ಮತ್ತು ಸಾಮಾಜಿಕ ವೇದನೆಗಳ ವಿರುದ್ಧ ನಿರಂತರ ಹೋರಾಟ ಮಾಡಿದ ಇವಳು ಮುಸ್ಲಿಂ ಜನಾಂಗದಲ್ಲಿ ಜಾತಿ ಮೂಲಭೂತವೆನಿಸಿರುವ ಮೌಲವಿಗಳ ಮಡಿವಂತಿಕೆ ವಿರುದ್ಧ ಮತ್ತು ಮುಸ್ಲಿಂ ಲೀಗಿನ ಜಾತಿವಾದದ ವಿರುದ್ಧ ೩೦-೪೦ರ ದಶಕಗಳಲ್ಲಿ ಕಟ್ಟಾಳಾಗಿ ನಿಂತು ಸೆಣಸಿದಳು. ೧೯೧೯ ಏಪ್ರಿಲ್ ೧೩ರ ಜಲಿಯನ್‌ವಾಲಾಬಾಗ್ ಹತ್ಯಾಕಾಂಡದಲ್ಲಿ ೫೩ಕ್ಕೂ ಹೆಚ್ಚಿನ ಮುಸ್ಲಿಂರು ಅಸುನೀಗಿದರು. ಈ ಮೇಲಿನ ಉದಾಹರಣೆಗಳು ನಮಗೆ ಕೋಮು ಸೌಹಾರ್ದದ ನೆಲೆಗಳನ್ನು ಎತ್ತಿ ತೋರುತ್ತವೆ.

''ಕೋಮುವಾದ'' ಎಂಬ ಶಬ್ದದ ನಿಶ್ಚಿತ ಸ್ವರೂಪವಾದರೂ ಏನು? ಒಂದು ಧರ್ಮದ ವ್ಯಕ್ತಿ ತನ್ನ ಧರ್ಮವನ್ನು ಸಮರ್ಥಿಸುವುದು ಕೋಮುವಾದವೇ? ಇನ್ನೊಬ್ಬರ ಮೇಲೆ ಒತ್ತಾಯದಿಂದ ಧರ್ಮ ಹೇರುವುದು ಕೋಮುವಾದವೇ? ಒಬ್ಬ ವ್ಯಕ್ತಿ ತನ್ನ ಜಾತಿ ಜನರನ್ನು ಸಂಘಟಿಸುವುದು ಕೋಮುವಾದವೆ? ತನ್ನ ಜಾತಿಯವರ ಅವಶ್ಯಕತೆಗಳನ್ನು ಸೌಲಭ್ಯಗಳನ್ನು ಆಗ್ರಹಿಸಿ ಸರಕಾರಕ್ಕೆ ತರಾಟೆಗೆ ತೆಗೆದುಕೊಳ್ಳುವುದು ಕೋಮುವಾದವೇ? ಇಲ್ಲ ತನ್ನ ಧರ್ಮ ಆತಂಕದಲ್ಲಿದೆ, ಅದನ್ನು ಅನ್ಯಧರ್ಮೀಯರು ಶೋಷಿಸುತ್ತಿದ್ದಾರೆ, ಧರ್ಮಕ್ಕೆ ''ರಕ್ಷಣೆ'' ಬೇಕಾಗಿದೆ, ಅದಕ್ಕಾಗಿ ನನ್ನ ಕೈ ಬಲಪಡಿಸಿರಿ ಎಂದೆಲ್ಲ ಹೇಳುವುದರ ಮೂಲಕ ಧಾರ್ಮಿಕ ಭಾವನೆಗಳನ್ನು ಉದ್ರೇಕಿಸಿ ಹಿಂಸೆಯನ್ನು ಪ್ರಚೋದಿಸುವುದು ಕೋಮುವಾದವೇ? ಕೊನೆಯಲ್ಲಿ ಉಲ್ಲೇಖಿಸಿದ ಗ್ರಹಿಕೆಯೇ ಕೋಮುವಾದಕ್ಕೆ ಹತ್ತಿರವಾದ ವ್ಯಾಖ್ಯಾನವಾಗಬಹುದೆಂದು ನನ್ನ ನಂಬಿಕೆ. ಶ್ರೀ ಜಿ. ರಾಜಶೇಖರ ಅವರು 'ರಾಷ್ಟ್ರೀಯತೆ ಮತ್ತು ಮುಸ್ಲಿಂರು' ಎಂಬ ಪುಸ್ತಕಕ್ಕೆ ಬರೆದ ಮುನ್ನುಡಿಯಲ್ಲಿ ವಿಶ್ಲೇಷಿಸಿರುವಂತೆ,

''ಹಿಂದು ಮುಸ್ಲಿಂ ಸಿಖ್ ಎಲ್ಲ ಮತಗಳ ಸ್ವಯಂ ಘೋಷಿತ ಮುಖಂಡರುಗಳೆಲ್ಲಾ ಕತ್ತಿ ಮಸೆಯುತ್ತಾ ತೋಳಗಳಂತೆ ಊಳಿಡುತ್ತಿರುವ ಸನ್ನಿವೇಶದಲ್ಲಿ ಸಜ್ಜನರು ಮೌನ ತಾಳಿದರೆ ಅದಕ್ಕಿಂತ ದೊಡ್ಡ ದುರಂತವಿಲ್ಲ. ಆದರೆ ನಾವು ಹತಾಶರಾಗಲು ಕಾರಣವಿಲ್ಲ. ಈ ನಾಡಿನಲ್ಲಿ ಕೋಮುದ್ವೇಷದ ರಾಜಕೀಯ ಎಷ್ಟೇ ಪ್ರಬಲವಾಗಿದ್ದರೂ ಅದರ ವಿರುದ್ಧ ಸಾಮರಸ್ಯ ಸಹಬಾಳ್ವೆಗಳನ್ನು ಪ್ರತಿಪಾದಿಸುವ ಶಕ್ತಿಗಳು ಅಷ್ಟೇ ಪ್ರಬಲವಾದ ಪ್ರತಿರೋಧವನ್ನು ಸಂಘಟಿಸಿದ್ದಾರೆ.''

ದೇಶದ ಒಂದು ದುರಂತವೆಂದರೆ, ಸುಶಿಕ್ಷಿತ ಜನತೆಯೇ ದೇಶದ ಉದ್ಧಾರಕರು ಎಂಬ ನಂಬಿಕೆ ಜನಮಾನಸದಲ್ಲಿ ಬೇರೂರಿರುವುದು. ಇದೇ ಸುಶಿಕ್ಷಿತ ನೌಕರಶಾಹಿ ಮಧ್ಯಮ ವರ್ಗದ, ಪಟ್ಟಣಗಳಲ್ಲಿ ವಾಸಿಸುತ್ತಿರುವ ಸುಶಿಕ್ಷಿತರಿಂದ ಕೋಮು ಗಲಭೆಗಳು ಪ್ರಾರಂಭವಾಗುವುದು. ಅದರೊಂದಿಗೆ ಇಲ್ಲಿ ಓಣಿಗೊಂದು ಮಸೀದಿ, ಮಂದಿರಗಳು ಸಾರ್ವಜನಿಕ ರಸ್ತೆಯಲ್ಲಿಯೇ ಅವತಾರ ತಾಳಿ ಇಲ್ಲದ ಗಲಭೆಗಳನ್ನು ಪ್ರಚೋದಿಸುತ್ತವೆ. ಪರಸ್ಪರ ಅಪನಂಬಿಕೆಗೆ ಎಣೆಯಿಲ್ಲ. ಇದನ್ನು ಡಾ|| ರಾಮ ಮನೋಹರ ಲೋಹಿಯಾ ಹೀಗೆ ಗುರುತಿಸುತ್ತಾರೆ: ''ಹಿಂದು ಎಷ್ಟೇ ಉದಾರವಾದಿಯಾದರೂ ತನ್ನ ರಾಮ, ಕೃಷ್ಣರನ್ನು ಪ್ರವಾದಿ ಮೊಹಮ್ಮದರಿಗಿಂತ ತುಸು ಮಿಗಿಲೆಂದೇ ಭಾವಿಸುವನು. ಹಾಗೆಯೇ ಮುಸಲ್ಮಾನ ಎಷ್ಟೇ ಉದಾರಿಯಾದರೂ ತನ್ನ ಪ್ರವಾದಿ ಮೊಹಮ್ಮದರು, ರಾಮ ಕೃಷ್ಣರಿಗಿಂತ ಕೊಂಚವಾದರೂ ಮಿಗಿಲು ಎನ್ನುವವನೇ. ಆದರೆ ಈ ಭೇದ ಭಾವ ಅತಿಯಾಗಬಾರದು. ಅದು ಹತ್ತೊಂಬತ್ತು ಇಪ್ಪತ್ತರ ಪ್ರಮಾಣ ಮೀರದಿದ್ದರೆ ಇಬ್ಬರ ಮನೋಧರ್ಮಗಳು ಸರಿಯಾಗಿರುತ್ತವೆ.''

''ಕರ್ನಾಟಕದ ಗಡಿನಾಡಿನ ಗ್ರಾಮಗಳಿಗೆ ಹೋಗಿ ನೋಡಿದರೆ ಶ್ರಮಜೀವಿ ರೈತರು ಕಾರ್ಮಿಕರು ಮೊದಲಾದವರ ವೇಷಭೂಷಣಗಳು, ಭಾಷೆ, ನಡೆವಳಿಕೆಗಳು, ಅವರು ಯಾವ ಕೋಮಿನವರು ಎಂದು ಗುರುತಿಸಲಾರದ ಹಾಗೆ ಇರುತ್ತದೆ. ಗಡ್ಡ ಬಿಟ್ಟು ಚೊಣ್ಣ ತೊಟ್ಟ ಮುಸ್ಲಿಮರು ಕಾಣುವುದಿಲ್ಲ. ಜುಟ್ಟನ್ನು ಎತ್ತಿ ಕಟ್ಟಿದ ಸಿಖ್ಖರೂ ಇರುವುದಿಲ್ಲ. ಲಿಂಗಧಾರಣೆ ಮಾಡಲಾರದ ವೀರಶೈವರು, ನಾಮಧಾರಣೆ ಮಾಡಲಾರದ ಶ್ರೀ ವೈಷ್ಣವರು ಇವರನ್ನೆಲ್ಲ ಕಂಡಾಗ ಇವರು ಕೇವಲ ಮನುಷ್ಯರು, ನಿಸ್ಸಂಕೋಚವಾಗಿ ನಾವು ಅವರ ಜೊತೆ ಸೇರಬಹುದು ಎಂಬ ನಂಬಿಕೆ ಬರುತ್ತದೆ'' ಎನ್ನುತ್ತಾರೆ ಶ್ರೀ ಎಚ್. ಜಿ. ಸಣ್ಣಗುಡ್ಡಯ್ಯ.

ಇಲ್ಲಿ ಬದುಕಿನ ಬೇಸರ ಕಳೆಯಲು ಮತ್ತು ''ಬಾಳಿಗೊಂದು ನಂಬಿಕೆ'' ಪಡೆಯಲು ಇವರು ಧರ್ಮವನ್ನು, ಧಾರ್ಮಿಕ ಸಂಪ್ರದಾಯಗಳನ್ನು ಆಚರಿಸುತ್ತಾರೆ. ಇಲ್ಲಿನ ಧರ್ಮದ ಆಚರಣೆಗಳಲ್ಲಿ ಕಂಡುಬರುವ ಜಾತೀಯತೆ, ಅಸ್ಪೃಶ್ಯತೆ, ಲಿಂಗಭೇದ ಮತ್ತು ವರ್ಣಭೇದಗಳು ಅವರ ಅಜ್ಞಾನ ಮತ್ತು ಮೂಢನಂಬಿಕೆಯಿಂದ ಬಂದವುಗಳಾದ್ದರಿಂದ ಅವು ಪಟ್ಟಣದ ಕೋಮುವಾದಿಗಳಷ್ಟು ಅಪಾಯಕಾರಿಯಾಗಲಾರವು. ಅದರೊಂದಿಗೆ ಇಲ್ಲಿ ನಡೆಯುವ ಉತ್ಸವ, ಮೊಹರಂ, ಪಲ್ಲಕ್ಕಿ (ಅಡ್ಡಪಲ್ಲಕ್ಕಿ ಅಲ್ಲ), ನಂದಿಧ್ವಜ ಕುಣಿತ, ಶಸ್ತ್ರಧಾರಣೆ, ಅಗ್ನಿ ಹಾಯುವುದು, ಇಂತಹ ಸಾಂಪ್ರದಾಯಿಕ ಆಚರಣೆಗಳಲ್ಲಿಯೂ ಹತ್ತಿ ಉರಿಯುವ ಕೋಮುವಾದ ಇರುವುದಿಲ್ಲ. ಇದರೊಂದಿಗೆ ನಡೆಯುವ ಜಾನಪದ ಕಲಾ ಪ್ರಕಾರಗಳಲ್ಲಂತೂ ಜಾತಿ ಕೋಮುಗಳ ವಾಸನೆಯೂ ಇರುವುದಿಲ್ಲ. ಈ ಸಂದರ್ಭದಲ್ಲಿ ನಡೆಯುವ ಬಯಲಾಟ, ಡೊಳ್ಳಿನ ಪದ, ಗೀಗೀ ಪದ, ಹಲಗೆಮೇಳ, ಹೆಜ್ಜೆ ಕುಣಿತ, ಮುಂತಾದವುಗಳು ಶ್ರೇಷ್ಠ ಕಲಾವಿದರನ್ನು ಕೊಟ್ಟಿವೆ. ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಲೇಬೇಕಾದ ಎರಡು ಹೆಸರುಗಳೆಂದರೆ ಜಮಖಂಡಿ ಅಪ್ಪಾಲಾಲ ಮತ್ತು ಗಜಲ್ ಗುಂಡಮ್ಮ. ಬಾಲ್ಯ ಕಾಲದಿಂದಲೂ ನನಗೆ ಇವರಿಬ್ಬರೂ ನಮ್ಮ ಸಾಂಸ್ಕೃತಿಕ ಲೋಕದ ದಿಗ್ಗಜರೆನಿಸಿಕೊಂಡ ಭೀಮಸೇನ ಜೋಷಿ ಮತ್ತು ಬಿಸ್ಮಿಲ್ಲಾ ಖಾನ್ ಇವರಿಬ್ಬರಿಗಿಂತ ಶ್ರೇಷ್ಠರೆನಿಸಿದ್ದಾರೆ. ತನ್ನ ಉಪಜೀವನಕ್ಕಾಗಿ ಕೃಷ್ಣನ ಹತ್ತಾವತಾರಗಳನ್ನೆಲ್ಲ ಎಳೆ ಎಳೆಯಾಗಿ ಬಿಡಿಸಿ ಬಿಚ್ಚಿಡುವ ಜಮಖಂಡಿ ಅಪ್ಪಾಲಾಲನಿಗೆ ಮುಸ್ಲಿಂ ಕಲಾವಿದನೆಂದು ಕರೆಯಬಹುದೇ? ಅವನು ಪ್ರದರ್ಶಿಸುವ ಕಲೆ ಮುಸ್ಲಿಂ ಜಾನಪದವೇ? ಅಥವಾ ರಾಯಚೂರಿನ ಗುಂಡಮ್ಮ ಹಾಡಿದ ಗಜಲ್‌ಗಳು ಮುಸ್ಲಿಂ ಜಾನಪದವೇ?

ನಾವಿಂದು ಸೌಹಾರ್ದತೆಯ ಸಾಧ್ಯತೆಗಳಿಗಾಗಿ ಮರಳಿ ಹಳ್ಳಿಗಳ ಜಾನಪದ ಆಚರಣೆಗಳತ್ತ ಮರಳಬೇಕಾಗಿದೆ. ಅಲ್ಲಿ ನಮಗೆ ರಾಮ ಲಕ್ಷ್ಮಣರಂತೆ ಹಸನ-ಹುಸೇನರೆಂಬ ಆದರ್ಶ ಅಣ್ಣ ತಮ್ಮಂದಿರ ಪಾತ್ರಗಳು ಸಿಗುತ್ತವೆ.

ಡಿ. ಎಂ. ನದಾಫ
೯೯, ರೇವಣಸಿದ್ದೇಶ್ವರ ಕಾಲನಿ, ಅಫಜಲಪುರ - ೫೮೫ ೩೦೧

# ಸ್ವಾತಂತ್ರ್ಯ ಹೋರಾಟದಲ್ಲಿ ನನ್ನ ಕೆಲ ಅನುಭವಗಳು



೧೯೪೨ರ ಆಗಸ್ಟ್ ೯ರ ಮುಂಜಾನೆಯೇ ಬೊಂಬಾಯಿನಲ್ಲಿ ಮಹಾತ್ಮಾ ಗಾಂಧಿ ಮತ್ತು ಕಾಂಗ್ರೆಸ್ ನಾಯಕರನ್ನು ಬ್ರಿಟಿಷ್ ಸರ್ಕಾರ ಬಂಧಿಸಿದ್ದು, ಮಹಾತ್ಮಾ ಗಾಂಧಿ 'ಬ್ರಿಟಿಷರೇ ತೊಲಗಿರಿ', 'ಇದು ಅಂತಿಮ ಚಳುವಳಿ' ಮುಂತಾದ ಹೃದಯಸ್ಪರ್ಶಿ ಘೋಷಣೆಗಳನ್ನು ಭಾರತೀಯರಿಗೆ ನೀಡಿದ್ದು ಕಾಳ್ಗಿಚ್ಚಿನಂತೆ ಭಾರತದಲ್ಲಿ ಎಲ್ಲೆಡೆ ಹಬ್ಬಿತು. ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದ ಅವಧಿಯಲ್ಲಿ ರಾಷ್ಟ್ರೀಯ ಭಾವನೆಗಳನ್ನು ಬೆಳೆಸಿಕೊಂಡು ಕಾಂಗ್ರೆಸ್ ಸಂಸ್ಥೆಯ ಧೋರಣೆಗಳನ್ನು ಒಪ್ಪಿಕೊಂಡಿದ್ದೆ. ಅನೇಕ ರಾಜಕೀಯ ಸಭೆಗಳಲ್ಲಿ ಕಾಂಗ್ರೆಸ್ ನಾಯಕರಾದ ಶ್ರೀ ಕೆ. ಟಿ. ಭಾಷ್ಯಂ, ಚೆಂಗಲ್‌ರಾಯ ರೆಡ್ಡಿ, ಟಿ. ಸಿದ್ಧಲಿಂಗಯ್ಯ ಮುಂತಾದ ಮೈಸೂರು ಕಾಂಗ್ರೆಸ್ಸಿನ ಧುರೀಣರ ಭಾಷಣಗಳನ್ನು ಕೇಳಿ ಸ್ಫೂರ್ತಿ ಪಡೆದಿದ್ದೆ. ನಮ್ಮ ಕಾಲೇಜಿನ ವಿದ್ಯಾರ್ಥಿ ಸಂಘವು ಅಖಿಲ ಭಾರತ ನಾಯಕರಾದ ಸಿ. ರಾಜಗೋಪಾಲಾ ಚಾರಿ, ಶರತ್‌ಚಂದ್ರ ಬೋಸ್, ಕೆ. ಎಫ್. ನಾರಿಮನ್ ಅವರುಗಳನ್ನು ಕಾಲೇಜಿಗೆ ಆಹ್ವಾನಿಸಿದ್ದು ನಮಗೆಲ್ಲ ರೆಕ್ಕೆ ಬಲಿಯಲು ಸಹಕಾರಿಯಾಯಿತು.

ಆಗಸ್ಟ್ ೯ರಂದು ಭರಿಸಲಾರದ ಸಂಕಟದೊಡನೆ ಕಾಲೇಜಿಗೆ ಹೋಗಿ ವಿದ್ಯಾರ್ಥಿಗಳನ್ನು ಸಂಘಟಿಸಲು ತೊಡಗಿದೆ. ಶಾಲಾಕಾಲೇಜುಗಳ ಬಹಿಷ್ಕಾರಕ್ಕೆ ಒತ್ತಾಯಿಸಿದೆ. ವಿದ್ಯಾರ್ಥಿಗಳೊಡನೆ ಹಿಂದೂಸ್ತಾನ್ ವಿಮಾನ ಕಾರ್ಖಾನೆಯ ಕಾರ್ಮಿಕರು, ಬಿನ್ನಿ ಮತ್ತು ಮಹಾರಾಜಾ ಮಿಲ್‌ಗಳ ಕಾರ್ಮಿಕರು ಜೊತೆಗೂಡಿ ಪ್ರತಿದಿನ ಮೆರವಣಿಗೆ ಹೋಗಿ ಸೆಂಟ್ರಲ್ ಕಾಲೇಜಿನ ಕ್ರಿಕೆಟ್ ಮೈದಾನದಲ್ಲಿ ಸಭೆ ಸೇರಿ ಬ್ರಿಟಿಷರು ಭಾರತ ಬಿಟ್ಟು ಹೋಗಬೇಕೆಂದು ಒತ್ತಾಯಪೂರ್ವಕ ನಿರ್ಣಯಗಳನ್ನು ತೆಗೆದುಕೊಳ್ಳುತ್ತಿದ್ದವು.

ಚಳುವಳಿಯನ್ನು ಮುಂದುವರಿಸಲು, ಪಿಕೆಟಿಂಗ್ ಮಾಡಲು, ತಂಡಗಳನ್ನು ನಿರ್ಮಿಸಲಾಯಿತು. ಹಲವರು ಭೂಗತರಾಗಿ ಕೆಲಸ ಮಾಡಬೇಕೆಂದು ತೀರ್ಮಾನಿಸಲಾಯಿತು. ಹೀಗೆ ವಿದ್ಯಾರ್ಥಿ ನಾಯಕ ವಸಂತಯ್ಯ ಭೂಗತರಾಗಿ ನಿರ್ದೇಶಿಸುತ್ತಿದ್ದರು. ನನ್ನ ಅಣ್ಣ ವಾಸುದೇವ ರಾವ್ ವಸಂತಯ್ಯನಿಗೆ ಪರ್ಯಾಯವಾಗಿ ವಿದ್ಯಾರ್ಥಿ ನಾಯಕನಾಗಿ ವಿದ್ಯಾರ್ಥಿಗಳನ್ನು ಹುರಿದುಂಬಿಸುತ್ತಿದ್ದ. ಪೆವಿಲಿಯನ್‌ನಲ್ಲಿ ಸುಮಾರು ೧೦ ದಿನ ಸಭೆಗಳನ್ನು ಮಾಡಲು ಪೊಲೀಸರು ಅವಕಾಶ ನೀಡಿದರು. ಅನಂತರ ಪ್ರತಿಬಂಧಕಾಜ್ಞೆ ಜಾರಿ ಮಾಡಿ ಪೆವಿಲಿಯನ್‌ನಲ್ಲಿ ಪೊಲೀಸ್ ಪಡೆಯು ನೆಲೆಸಿ ವಿದ್ಯಾರ್ಥಿಗಳಿಗೆ ಒಳಗೆ ಹೋಗಲು ಅವಕಾಶ ನೀಡಲಿಲ್ಲ. ಪ್ರತಿಬಂಧಕಾಜ್ಞೆಯನ್ನು ಅಲ್ಲಗಳೆದು ಒಳಗೆ ನುಗ್ಗಲು ನಾನು ಮತ್ತು ಹಲವು ಮಿತ್ರರು ನಾಯಕರಿಗೆ ಸಲಹೆ ಮಾಡಿದೆವು. ಇದನ್ನು ಅವರು ಒಪ್ಪಲಿಲ್ಲ. ಒಳಗೆ ನುಗ್ಗಿದ್ದರೆ ಅನವಶ್ಯಕವಾಗಿ ಗುಂಡು ಹಾರಿಸಿದ್ದರೆ ಬಹುಶಃ ನಾನಿಲ್ಲಿ ಲೇಖನವನ್ನು ಬರೆಯಲು ಇರುತ್ತಿರಲಿಲ್ಲ.

ವಿದ್ಯಾರ್ಥಿಗಳ ಬಗ್ಗೆ ಆಗಿನ ಸರ್ಕಾರ ಸ್ವಲ್ಪ ಸಹಾನುಭೂತಿಯಿಂದ ವರ್ತಿಸಿದ್ದುಂಟು. ರಾಜಕೀಯ ಧುರೀಣರ ಸಂಪರ್ಕದಿಂದ ವಿದ್ಯಾರ್ಥಿಗಳನ್ನು ದೂರ ಮಾಡಲು ನಮ್ಮನ್ನು ಸೆಂಟ್ರಲ್ ಜೈಲಿನಿಂದ ಅತ್ತಿಬೆಲೆ ಕ್ಯಾಂಪಿಗೆ ರವಾನಿಸಿದರು. ಅಲ್ಲಿನ ವೈದ್ಯರೊಬ್ಬರು ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ಸೌಲಭ್ಯಗಳು ಸಾಕಷ್ಟಿಲ್ಲವೆಂದು ನಾವು ೩-೪ ದಿನ ಉಪವಾಸ ಮಾಡಿ ಹಟಹಿಡಿದೆವು. ನಾವು ಅಲ್ಲೂ ಗಲಾಟೆ ಮಾಡುತ್ತಿದ್ದುದನ್ನು ಗಮನಿಸಿ ಸರ್ಕಾರ ನಮ್ಮನ್ನು ಮೈಸೂರು ಜೈಲಿಗೆ ವರ್ಗಾಯಿಸಿತು. ಅಲ್ಲಿ ಬಂಧನದಲ್ಲಿದ್ದ ನಮ್ಮ ವಿದ್ಯಾರ್ಥಿ ಮಿತ್ರರನ್ನು ಬ್ಯಾರಕ್ಕುಗಳಲ್ಲಿ ಕೂಡಿಹಾಕಿ ಬೀಗ ಹಾಕುತ್ತಿದ್ದುದನ್ನು ನೋಡಿ ನಾವು (ಬೆಂಗಳೂರಿನ ವಿದ್ಯಾರ್ಥಿಗಳು) ಸತ್ಯಾಗ್ರಹ ಹೂಡಿದೆವು. ಸುಮಾರು ರಾತ್ರಿ ೧೧ ಘಂಟೆಗೆ ಲಾಠಿ ಛಾರ್ಜ್ ಆಗಿ ನಮ್ಮಲ್ಲಿ ಅನೇಕರಿಗೆ ವಿಪರೀತ ಗಾಯಗಳಾಯಿತು. ವಿದ್ಯಾರ್ಥಿ ಶಂಕರಪ್ಪ ಮೃತಿಹೊಂದಿದ.

ಸೆರೆಮನೆಯಲ್ಲಿದ್ದಾಗ ಸಹ ನಾವು ಅನೇಕ ರಾಜಕೀಯ ವಿಷಯಗಳ ಬಗ್ಗೆ ಚರ್ಚೆ ನಡೆಸುತ್ತಿದ್ದೆವು. ಹಿಂಸೆಯ ದಾರಿ ಅಥವಾ ಅಹಿಂಸಾ ಮಾರ್ಗ, - ಇವುಗಳಲ್ಲಿ ಯಾವುದು ಸ್ವಾತಂತ್ರ್ಯಕ್ಕೆ ದಾರಿ? ಪ್ರತಿದಿನವೂ ಪ್ರಾತಃಕಾಲದಲ್ಲಿ ಜೈಲಿನಲ್ಲೇ ಸೇವಾದಳದ ಕವಾಯಿತನ್ನು ಮಾಡುತ್ತಿದ್ದು ರಾಷ್ಟ್ರೀಯತೆಯನ್ನು ಸಾರುವ ಅನೇಕ ಹಾಡುಗಳನ್ನೂ, ಗೀತೆಗಳನ್ನೂ ಅಭ್ಯಾಸ ಮಾಡುತ್ತಿದ್ದುದು ಜೈಲಿನಲ್ಲಿ ಕಾಲವನ್ನು ಕಳೆಯುವ ವಿಧಾನವೇ ಆಗಿತ್ತು. ಸೆಂಟ್ರಲ್ ಜೈಲಿನಲ್ಲಿ ಗಂಗಿರೆಡ್ಡಿ ತೆಲುಗಿನಲ್ಲಿ ಗೀತೆಗಳನ್ನು ಹಾಡಿದಾಗ ಇಡೀ ಜೈಲಿನಲ್ಲಿ ಪ್ರತಿಧ್ವನಿಯಾಗುತ್ತಿತ್ತು. ಇದಲ್ಲದೆ ಗ್ರಾಮೀಣ ಪ್ರದೇಶದಿಂದ ಬಂದಿದ್ದ ವಿದ್ಯಾರ್ಥಿಮಿತ್ರರು ಗೀಗೀ ಹಾಡುಗಳನ್ನೂ, ಜಿ ಜೀ ಎನ್ನ ಮಣಿಯೇ, ಇತ್ಯಾದಿ ನಾಡ ಪದಗಳನ್ನೂ ಸುಶ್ರಾವ್ಯವಾಗಿ ಹಾಡಿ ನಮಗೆ ಗ್ರಾಮೀಣ ಸಂಸ್ಕೃತಿಯ ಪರಿಚಯ ಮಾಡಿಸುತ್ತಿದ್ದರು.

ನವೆಂಬರ್ ಮಾಸದಲ್ಲಿ ಬಹುತೇಕ ವಿದ್ಯಾರ್ಥಿಗಳನ್ನು ಜೈಲಿನಿಂದ ಬಿಡುಗಡೆ ಮಾಡಲಾಯಿತು. ಸರ್ಕಾರ ನಿರೀಕ್ಷಿಸಿದ್ದಂತೆ ಅನೇಕ ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಿಗೆ ಹಿಂತಿರುಗಿ ವ್ಯಾಸಂಗದಲ್ಲಿ ತೊಡಗಿದರು. ನಾನು, ನರಸಿಂಹಯ್ಯ ಮತ್ತಿತರರು ಚಳುವಳಿಯನ್ನು ಮುಂದುವರಿಸಲು ಪ್ರಯತ್ನಿಸಿದೆವು. 'ಕ್ವಿಟ್ ಇಂಡಿಯಾ' ಚಳುವಳಿ ಅನೇಕ ರಾಜ್ಯಗಳಲ್ಲಿ ಕ್ಷೀಣಿಸಿದ್ದುದು ನಮಗೆ ಖೇದ ಉಂಟುಮಾಡಿತು. ನೇತಾಜಿ ಸುಭಾಷ್‌ಚಂದ್ರ ಬೋಸರು ಕಟ್ಟಿದ ಇಂಡಿಯನ್ ನ್ಯಾಷನಲ್ ಆರ್ಮಿಯ (ಐ.ಎನ್.ಎ.) ಪ್ರಗತಿ ಸ್ವಲ್ಪ ಮಟ್ಟಿಗೆ ಚಳುವಳಿಗೆ ಬೆಂಬಲ ನೀಡಿದಂತಾಯಿತು. ಏನಾದರೂ ಮಾಡಿ ಕಾಲೇಜು ಗಳನ್ನು ಮುಚ್ಚಿಸಬೇಕೆಂಬ ಹಂಬಲ ನಮ್ಮಲ್ಲಿ ಹಲವರಲ್ಲಿ ಮೂಡಿತು. ಅಲ್ಲಲ್ಲಿ ರೈಲ್ವೆ ಹಳಿಗಳನ್ನು ತೆಗೆಯಲಾಯಿತು. ಟೆಲಿಫೋನ್ ತಂತಿಗಳನ್ನು ಕತ್ತರಿಸಲಾಯಿತು. ನಾಡಬಾಂಬುಗಳನ್ನು ಸ್ಫೋಟಿಸಲಾಯಿತು. ಕೆ. ಎಸ್. ಕಣ್ಣನ್ ಅವರ ವಾಸದ ಕೊಠಡಿಯಿಂದ ಆಮ್ಲ ತುಂಬಿದ ಸ್ಫೋಟಕ ವಸ್ತುವನ್ನು ನನ್ನ ತಮ್ಮ ತಂದಿದ್ದು ನನಗೆ ಚೆನ್ನಾಗಿ ಜ್ಞಾಪಕವಿದೆ. ನನ್ನ ತಮ್ಮ ಸೆಂಟ್ರಲ್ ಕಾಲೇಜಿನ ಗ್ರಂಥಾಲಯದಲ್ಲಿ ಬಾಂಬನ್ನಿಟ್ಟು ಬಂದು ನನಗೆ ತಿಳಿಸಿದ. ಗ್ರಂಥಾಲಯದಲ್ಲಿ ಬಾಂಬನ್ನಿಡುವುದರ ಬಗ್ಗೆ ನನ್ನ ಒಪ್ಪಿಗೆ ಇರಲಿಲ್ಲ.

ಒಮ್ಮೆ ಕಾಲೇಜನ್ನು ಮುಚ್ಚಿಸುವ ಪ್ರಯತ್ನದಲ್ಲಿ ತೊಡಗಿದ್ದಾಗ ಆಗಿನ ವಿದ್ಯಾಮಂತ್ರಿಗಳಾದ ಜೆ. ಮಹಮದ್ ಇಮಾಮ್ ಅವರು ಸೆಂಟ್ರಲ್ ಕಾಲೇಜಿಗೆ ಕಾಲ್ನಡಿಗೆಯಲ್ಲಿ ಬಂದು ನಮ್ಮೊಡನೆ ಚರ್ಚೆ ನಡೆಸಿದರು. ವಿದ್ಯಾರ್ಥಿ ಮುಖಂಡರು ಅವರೊಡನೆ ಕಾಲೇಜುಗಳನ್ನು ಮುಚ್ಚಿಸುವ ಬಗ್ಗೆ ಒತ್ತಾಯಿಸಿದ್ದರು. ಸ್ವಲ್ಪ ಸಮಯವಾದ ನಂತರ, ''ನೀವೆಲ್ಲ ರಾಷ್ಟ್ರೀಯವಾದಿಗಳು, ಸ್ವಾತಂತ್ರ್ಯಕ್ಕೋಸ್ಕರ ಹೋರಾಡುವವರು, ಆದರೆ ಇಷ್ಟು ಹೊತ್ತು ಇಂಗ್ಲಿಷ್‌ನಲ್ಲೇ ಮಾತಾಡುತ್ತಿದ್ದೀರಲ್ಲಾ'' ಎಂದು ಇಮಾಮ್‌ರವರು ಹೇಳಿದಾಗ ನನಗೆ ಅವಮಾನವಾಯಿತು. ಆ ಸ್ಥಳ ಬಿಟ್ಟು ದೂರ ಹೋದೆ.

೧೯೪೨ರ ಡಿಸೆಂಬರ್ ತಿಂಗಳಿನಲ್ಲಿ ಮತ್ತೆ ಎರಡನೇ ಸಲ ಜೈಲಿಗೆ ತೆರಳಿದಾಗ, ನಮಗೆ ಸದ್ಯದಲ್ಲಿ ಬಿಡುಗಡೆಯಾಗಲಾರದೆಂಬ ಭೀತಿ ಆವರಿಸಿತ್ತು. ಸ್ವಾತಂತ್ರ್ಯ ಚಳುವಳಿಯ ಸಮಾಚಾರಗಳೂ ಅಷ್ಟೇನೂ ಉತ್ತೇಜನಕಾರಿಯಾಗಿರಲಿಲ್ಲ. ಫ್ಯಾಸಿಸ್ಟ್ ಹಿಟ್ಲರನ ವಿರುದ್ಧ ಸಮರದಲ್ಲಿ ಬ್ರಿಟನ್ ಮತ್ತು ಮಿತ್ರ ದೇಶಗಳೊಡನೆ ಸೋವಿಯತ್ ಒಕ್ಕೂಟ ಸೇರಿದಾಗ, ನಮ್ಮ ಕಮ್ಯುನಿಸ್ಟ್ ಮಿತ್ರರು ಚಳುವಳಿಯಿಂದ ಹಿಂತೆಗೆದು, ಮಹಾಯುದ್ಧವನ್ನು 'ಜನತಾ ಯುದ್ಧ'ವೆಂದು ಘೋಷಿಸಿ ಬ್ರಿಟನ್ನಿಗೆ ನೆರವಾದರು. 'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿ ಧುಮುಕಿದ ನಾನು ಮತ್ತು ನನ್ನ ಗೆಳೆಯರು ಪ್ರತಿದಿನವೂ ಸ್ವಾತಂತ್ರ್ಯ ಸಮರದಲ್ಲಿ ಕ್ರಿಯಾಶೀಲರಾಗುವುದರ ಅಗತ್ಯತೆಯನ್ನು ಕುರಿತು ಕಮ್ಯುನಿಸ್ಟ್, ರ್‍ಯಾಡಿಕಲ್ ಡೆಮೊಕ್ರೆಟಿಕ್ ಪಾರ್ಟಿ ಮತ್ತಿತರ ಪಕ್ಷಗಳ ಯುವಕರೊಡನೆ ವಿಪುಲವಾದ ಚರ್ಚೆಗಳನ್ನು ನಡೆಸುತ್ತಿದ್ದುದು ಇಂದಿಗೂ ನೆನಪಿನಲ್ಲಿದೆ. ಚಳುವಳಿಗೆ ಹೊರತಾದ ಪಕ್ಷಗಳ ಪತ್ರಿಕೆಗಳು ನೇತಾಜಿ ಸುಭಾಷಚಂದ್ರ ಬೋಸರನ್ನು 'ದೇಶ ದ್ರೋಹಿ' ಎಂದು

ಪ್ರೊ|| ಎಂ. ಎ. ಸೇತುರಾವ್

ವಾಚಾಮಗೋಚರವಾಗಿ ಬೇಕಾದಷ್ಟು ತೆಗಳಿದ್ದನ್ನು ನಾನು ಮರೆಯಲಾರೆ. ಅಂದು ಅವರನ್ನು 'ದೇಶದ್ರೋಹಿ' ಎಂದು ಬೈದ ಜನರು ಇಂದು ಅವರ ಶತಮಾನೋತ್ಸವ ವನ್ನು ಹುರುಪಿನಿಂದ ಆಚರಿಸುತ್ತಿದ್ದಾರೆ ! ರಾಜಕೀಯದಲ್ಲಿ ಒಮ್ಮೊಮ್ಮೆ ನಿಲುವನ್ನು ಚಾರಿತ್ರಿಕ ಕಾರಣಗಳಿಂದ ಬದಲಾಯಿಸಬೇಕಾಗಬಹುದು. ಇದನ್ನು ಗ್ರಹಿಸಿದ ವ್ಯಕ್ತಿಗಳು, ಪಕ್ಷಗಳು ವೈಯಕ್ತಿಕ ಆರೋಪಗಳನ್ನು ಮಾಡು ವಾಗ ಎಚ್ಚರದಿಂದಿರಬೇಕು.

ವಿಮಾನ ಕಾರ್ಖಾನೆಯ ಕಾರ್ಮಿಕರು, ಕೋಲಾರ ಚಿನ್ನದ ಗಣಿಯ ಕಾರ್ಮಿಕರು, ಬೆಂಗಳೂರಿನ ಬಿನ್ನಿಮಿಲ್, ಮಿನರ್ವ್ ಮಿಲ್ ಹಾಗೂ ಮಹಾರಾಜಾ ಮಿಲ್ ಕಾರ್ಮಿಕರು ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಸಕ್ರಿಯ ಪಾತ್ರ ವಹಿಸಿದ್ದರು. ಅನೇಕ ಕಾರ್ಮಿಕರು ತಮ್ಮ ಕೆಲಸವನ್ನು ಕಳೆದುಕೊಳ್ಳಬೇಕಾಯಿತು. ಕಾರ್ಮಿಕ ಮುಖಂಡರಲ್ಲಿ ಪರಶುರಾಮ, ಪ್ರಭುದೇವ್, ಕುಮಾರನ್ ಮುಂತಾದ ವರನ್ನು ನೆನೆಸಿಕೊಳ್ಳಬೇಕು. ಪ್ರಭುದೇವ ಭೂಗತರಾಗಿದ್ದು ಕಾರ್ಮಿಕರ ಚಟುವಟಿಕೆಗಳನ್ನು ನಿರ್ದೇಶಿಸುತ್ತಿದ್ದರು. ಅವರನ್ನು ಪೊಲೀಸರು ಬಂಧಿಸಿ ಸೆಂಟ್ರಲ್ ಜೈಲಿನಲ್ಲಿಟ್ಟರು. ನಮ್ಮ ಮಿತ್ರರಾದ ವೇಣುಗೋಪಾಲ್ ಅವರನ್ನು ಬಿಡಿಸಲು ಸಂದರ್ಶನಕ್ಕೆ ಬಂದಾಗ ಹಿಂದಿನ ರಾತ್ರಿಯೇ ಪ್ರಭುದೇವ ಜೈಲಿನ ಗೋಡೆ ಹಾರಿ ತಪ್ಪಿಸಿಕೊಂಡಿದ್ದರು. ರಿವಾಲ್ವರ್ ತಂದಿದ್ದ ವೇಣುಗೋಪಾಲ್ ಜೈಲಿನ ಅಧಿಕಾರಿಗಳಿಗೆ ಸಿಕ್ಕಿಬಿದ್ದು ಕೈಕಾಲುಗಳಿಗೆ ಸರಪಳಿಯನ್ನು ಹಾಕಿಸಿಕೊಂಡು ಏಕಾಂತದ ಸೆರೆಮನೆವಾಸ ಅನುಭವಿಸಬೇಕಾಯಿತು. ವೇಣು ಗೋಪಾಲ್ ಅವರು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ಸೈನ್ಯಕ್ಕೆ ಸೇರಿ ಕಮಾಂಡರ್ ಆಗಿ ನಿವೃತ್ತಿ ಹೊಂದಿದರು.

ಸ್ಫೋಟಕ ವಸ್ತುಗಳನ್ನು ಹೊಂದಿದ್ದೇವೆಂದು ನನ್ನನ್ನು, ನನ್ನ ತಮ್ಮ ಮತ್ತು ಅಣ್ಣ (ವಾಸುದೇವ ರಾವ್) ಅವರನ್ನು ಬಂಧಿಸಿ ಪೊಲೀಸರು ಕ್ರಿಮಿನಲ್ ಮೊಕದ್ದಮೆಯನ್ನು ಹಾಕಿದರು. ಜೈಲಿನಿಂದ ನಮ್ಮನ್ನು ಖೈದಿಗಳಂತೆ ವಾರಕ್ಕೊಮ್ಮೆ ಸಿಟಿ ಮ್ಯಾಜಿಸ್ಟ್ರೇಟ್ ಕೋರ್ಟಿಗೆ ಕರೆದೊಯ್ಯುತ್ತಿದ್ದರು. ಸೆಂಟ್ರಲ್ ಕಾಲೇಜ್ ಮೂಲಕವೇ ಹೋಗಿದ್ದೂ ಉಂಟು. ಹೀಗೆ ಕೋರ್ಟಿಗೆ ಕರೆದುಕೊಂಡು ಹೋಗುವಾಗ ಒಬ್ಬರು ತಪ್ಪಿಸಿಕೊಂಡರೆಂಬ ನೆಪವನ್ನು ಹೂಡಿ ನಮಗೂ ಕೈಗೆ ಕೋಳಗಳನ್ನು ಹಾಕಲು ಪ್ರಯತ್ನಿಸಲಾಯಿತು. ನಮ್ಮ ಜೊತೆಯಲ್ಲಿದ್ದ ಭೀಮರಾವ್ ಎಂಬುವರು ಕೆ. ವಿ. ಐಯ್ಯರ್ ಅವರ ಶಿಷ್ಯರು. ಕಸರತ್ತು ಮಾಡಿದವರು. ಕೋಳಗಳು ಅವರ ಮಣಿಕಟ್ಟಿಗೆ ಹಾಕಲು ಸಾಧ್ಯವಾಗದೇ ಈ ಪ್ರಯತ್ನವನ್ನು ಪೊಲೀಸರು ಬಿಟ್ಟುಬಿಟ್ಟರು. ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ಮೊಕದ್ದಮೆ ವಿಚಾರಣೆಗೆ ಬಂದಾಗ ಮ್ಯಾಜಿಸ್ಟ್ರೇಟ್ ರಾಮಚಂದ್ರರಾಯರು ನಮ್ಮ ಮನೆಯಿಂದ ಶೋಧಿಸಿ ತಂದ ಆಕ್ಷೇಪಾರ್ಹ ಲೇಖನ ಗಳನ್ನು ಕುರಿತು ದಫೇದಾರ್‌ಗೆ ಪ್ರಶ್ನಿಸಿದರು. ಲೇಖನಗಳು ಇಂಗ್ಲಿಷ್‌ನಲ್ಲಿದ್ದವು. ರಾಜ್ಯದ ಹಿತಕ್ಕೆ ಧಕ್ಕೆಯುಂಟು ಮಾಡುವ ಲೇಖನದ ಭಾಗವನ್ನು ಓದಲು ದಫೇದಾರ್‌ಗೆ ಆಜ್ಞಾಪಿಸಿದರು. ದಫೇದಾರ್ ಸುಮ್ಮನೆ ನಿಂತುಕೊಂಡನು. ಓದಲಾಗಲಿಲ್ಲ. ಕಾರಣ, ಆತನಿಗೆ ಇಂಗ್ಲಿಷ್ ಓದಲು ಬರುತ್ತಿರಲಿಲ್ಲ. ಮ್ಯಾಜಿಸ್ಟ್ರೇಟ್ ಅವನಿಗೆ ಹಾಗೂ ಪೊಲೀಸ್ ಇಲಾಖೆಗೆ ಛೀಮಾರಿ ಹಾಕಿದ್ದನ್ನು ನಾನು ಮರೆಯಲಾರೆ.

೧೯೪೨ರ ಕ್ವಿಟ್ ಇಂಡಿಯ ಚಳುವಳಿಯಲ್ಲಿ ಬೆಂಗಳೂರಿನ ಮಹಾರಾಣಿ ಕಾಲೇಜಿನ ವಿದ್ಯಾರ್ಥಿನಿಯರ ಪಾತ್ರ ಅವಿಸ್ಮರಣೀಯ. ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿ ಮೆರವಣಿಗೆಯಲ್ಲಿ ಅನೇಕ ಶಾಲಾಕಾಲೇಜಿನ ವಿದ್ಯಾರ್ಥಿನಿಯರು ಭಾಗವಹಿಸಿದ್ದರು. ಅವರು ದಾರಿ ಯುದ್ದಕ್ಕೂ ಸುಶ್ರಾವ್ಯವಾಗಿ ರಾಷ್ಟ್ರ ಭಕ್ತಿ ಗೀತೆಗಳನ್ನು ಹಾಡುತ್ತಿದ್ದರು. ಅವರಲ್ಲಿ ಕುಂತಳ, ವಿಮಲ, ಕೋಮಲ ಮತ್ತು ಚಂದ್ರಮಣಿಯವರನ್ನು ಹೆಸರಿಸಬಹುದು. ವಿದ್ಯಾರ್ಥಿನಿಯರು ಧೈರ್ಯದಿಂದ, ಉತ್ಸಾಹದಿಂದ ಕೋರ್ಟುಗಳನ್ನು ಪಿಕೆಟ್ ಮಾಡಿ ಕಾರ್ಯಕಲಾಪಗಳನ್ನು ನಿಲ್ಲುವಂತೆ ಮಾಡಿದರು. ವಿದ್ಯಾರ್ಥಿನಿಯರ ಮೇಲೆ ದಬ್ಬಾಳಿಕೆ ನಡೆಸಿದ ಸರ್ಕಾರದ ವರ್ತನೆಯನ್ನು ಸಹಿಸಲಾರದೆ ಮಹಾರಾಣಿ ಕಾಲೇಜಿನ ಅಧ್ಯಾಪಕರಾಗಿದ್ದ ಶ್ರೀಮತಿ ಮುಲಿಯಲ್ ಮತ್ತು ಶ್ರೀಮತಿ ಕೇಶವನ್ ಅವರು ತಮ್ಮ ವೃತ್ತಿಗೆ ರಾಜೀನಾಮೆ ನೀಡಿದರು. ೧೯೪೩ರಲ್ಲಿ ನಂಜನಗೂಡಿನಲ್ಲಿ ವಿದ್ಯಾರ್ಥಿ ಚಳುವಳಿಗಾರರೆಲ್ಲ ಸಭೆ ಸೇರಿ ಅಖಿಲ ಮೈಸೂರು ವಿದ್ಯಾರ್ಥಿ ಕಾಂಗ್ರೆಸ್ಸನ್ನು ಸ್ಥಾಪಿಸಿದರು. ಭೂಗತರಾಗಿದ್ದ ಅಚ್ಯುತ್ ಪಟವರ್ಧನ್ ಸ್ವಲ್ಪ ಸಮಯ ಹಾಜರಿದ್ದು ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡಿದರು. ಚಳುವಳಿ ತಣ್ಣಗಾಗಿ ವಿದ್ಯಾರ್ಥಿಗಳು ಕಾಲೇಜುಗಳಿಗೆ ಹಿಂತಿರುಗಿದ ಮೇಲೆ ರಾಷ್ಟ್ರೀಯ ಭಾವನೆಯನ್ನು ಉಳಿಸಿಕೊಳ್ಳಲು ಸ್ಪಷ್ಟ ಕಾರ್ಯಕ್ರಮ ಗಳಿರಲಿಲ್ಲ. ಹರ್ಡೀಕರ್ ಸ್ಥಾಪಿಸಿದ ಸೇವಾದಳ ಅಷ್ಟು ವ್ಯಾಪಕವಾಗಿರಲಿಲ್ಲ. ಆಗ ಬೆಂಗಳೂರಿನಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಸಂಚಾಲಕರು ತಮ್ಮ ಸಂಘಕ್ಕೆ ವಿದ್ಯಾರ್ಥಿಗಳನ್ನು ಎಳೆಯಲು ಉದ್ಯುಕ್ತರಾದರು. ಅವರೊಡನೆ ನಿತ್ಯ ಚರ್ಚೆಯಲ್ಲಿ ತೊಡಗಿ ನಮ್ಮ ಮಿತ್ರರನ್ನು ಸಂಘದಿಂದ ದೂರವಿರಿಸಲು ಸಾಕಷ್ಟು ಪ್ರಯತ್ನವನ್ನು ನಡೆಸಿದೆ. ಯಾದವರಾವ್ ಜೋಷಿ ಮತ್ತು ಇತರರೊಂದಿಗೆ ಬಿರುಸಾದ ವಾಗ್ಯುದ್ಧ ನಡೆಸುತ್ತಿದ್ದೆ. 'ಹಿಂದುತ್ವ' ಎಂದರೇನು ಎಂಬ ನಮ್ಮ ಸವಾಲಿಗೆ ಅವರಿಂದ ಸೂಕ್ತ ವಿವರಣೆ ದೊರಕಲಿಲ್ಲ. ಈಗಲೂ ಆರ್. ಎಸ್. ಎಸ್. ನಾಯಕರಿಂದ ಅಷ್ಟೇನೂ ಸಮಂಜಸವಾದ ಉತ್ತರ ಈ ಪ್ರಶ್ನೆಗೆ ದೊರಕಿಲ್ಲವೆಂಬುದು ತಿಳಿದೇ ಇದೆ.

ಪ್ರೊ॥ ಎಂ. ಎ. ಸೇತುರಾವ್
ನಂ. ೪೨೧೯, ಸುಬ್ರಹ್ಮಣ್ಯನಗರ, ಮುನೇಶ್ವರ ದೇವಸ್ಥಾನದ ರಸ್ತೆ, ಬೆಂಗಳೂರು - ೫೬೦ ೦೨೧

## ಸಾದರ ಸ್ವೀಕಾರ

**ಮಕ್ಕಳಿಗಾಗಿ ಪರಿಸರ ಕತೆಗಳು**
*ವಳಕಳ ಸೀತಾರಾಮಭಟ್ಟ*
**ಪುಟ :** ೬೦ **ಬೆಲೆ : ರೂ.** ೨೦
**ಶಿಶು ಸಾಹಿತ್ಯ ಮಾಲೆ,** ಮಿತ್ತಬೈಲು : ದ.ಕ. ೫೭೪ ೨೨೬

**ಹೆಂಡತಿ** (ಹಾಸ್ಯ ಹನಿಗವನ)
*ಕೋ. ಲ. ರಂಗನಾಥರಾವ್*
**ಪುಟ :** ೯೬ **ಬೆಲೆ : ರೂ.** ೩೫
**ಗುರುರಾಜ ಪ್ರಕಾಶನ,** ಸಿ-೨, ಸಿ.ಪಿ.ಡಬ್ಲ್ಯು.ಡಿ. ಕ್ವಾರ್ಟರ್ಸ್, ವಿಜಯನಗರ, ಬೆಂಗಳೂರು - ೪೦

**ರಾಮಾಶ್ವಮೇಧ**(ಕಾವ್ಯ)
*ಹು.ಬ. ಶಿವರುದ್ರಯ್ಯ ಬಾಪುರಿ*
**ಪುಟ :** ೨೩೨ **ಬೆಲೆ : ರೂ.** ೫೦

**ಮುಗ್ಧೆ ಶಬರಿ ಗೀತ**(ಕಾವ್ಯ)
*ಹು.ಬ. ಶಿವರುದ್ರಯ್ಯ ಬಾಪುರಿ*
**ಪುಟ :** ೫೮ **ಬೆಲೆ : ರೂ.** ೨೦
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು :*
**ಕುಸುಮ ಪ್ರಕಾಶನ,** ೬೩೫, ೬ನೇ ಮುಖ್ಯರಸ್ತೆ, ಹನುಮಂತನಗರ, ಬೆಂಗಳೂರು -೫೬೦ ೦೧೯

**ಕಜ್ಜೂರ** (ಕವನ ಸಂಕಲನ)
*ಮುಕ್ಕಣ್ಣಕರಿಗಾರ, ಗಬ್ಬೂರು*
**ಪುಟ :** ೫೬ **ಬೆಲೆ : ರೂ.** ೨೫
**ಬೂದಿಬಸವ ಪ್ರಕಾಶನ,** ಗಬ್ಬೂರು - ೫೮೪ ೧೧೩, ದೇವದುರ್ಗ ತಾ. ರಾಯಚೂರು (ಜಿ)

**ಸಾರ್ವಜನಿಕ ಭಾಷಣ ಕಲೆ** (ಲೇಖನ ಸಂಕಲನ)
*ಪ್ರೊ॥ ಬಿ. ಎಂ. ಹೆಗ್ಡೆ*
*ಅನು : ಡಾ॥ ಮಹಾಬಲೇಶ್ವರ ರಾವ್*
**ಪುಟ :** ೫೬ **ಬೆಲೆ : ರೂ.** ೩೦

**ಹೃದಯ ಸಂವಾದ**(ಲೇಖನ ಸಂಕಲನ)
*ಡಾ॥ ಬಿ. ಎಂ. ಹೆಗ್ಡೆ*
*ಅನು : ಡಾ॥ ಮಹಾಬಲೇಶ್ವರ ರಾವ್*
**ಪುಟ :** ೬೦ **ಬೆಲೆ : ರೂ.** ೩೦
*ಈ ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು :*
**ನವಪ್ರಕಾಶನ,** ಉಡುಪಿ - ೫೭೬ ೧೦೧

**ಪುಷ್ಪಾರ್ಚನೆ** (ಕಥಾ ಸಂಕಲನ)
*ಬಿ. ಸಿ. ನಿರ್ಮಲ ಕುಮಾರ್ ಜೈನ್*
**ಪುಟ :** ೫೬ **ಬೆಲೆ : ರೂ.** ೧೮
**ಓಂ ಚೈತನ್ಯ ಪ್ರಕಾಶನ,** ೧೪, ಮೊದಲನೆಯ ತಿರುವು, ಚನ್ನಪ್ಪ ಲೇಔಟ್, ಶಿವಮೊಗ್ಗ - ೫೭೭ ೨೦೧

**ಉಗಿ**(ಕವನ ಸಂಕಲನ) *ಕೆ. ಎನ್. ದೊಡ್ಡಮನಿ*
**ಪುಟ :** ೫೮ **ಬೆಲೆ : ರೂ.** ೪೦
**ಕಲಾಗಂಗಾಧರ ಪ್ರಕಾಶನ,** ಚಡಚಣ-ಗಾಂಧಿಚೌಕ ಧಾರವಾಡ.

# ಅಖಂಡ ಕರ್ನಾಟಕದ ಸಮಗ್ರತೆ ಪ್ರಶ್ನಾತೀತ

ರಾ. ನಂ. ಚಂದ್ರಶೇಖರ

ಕರ್ನಾಟಕ ಏಕೀಕರಣವಾಗಿ ೪೫ ವರ್ಷಗಳು ಕಳೆದ ನಂತರವೂ ಪ್ರಾದೇಶಿಕ ಸಾಮಾಜಿಕ ಅಸಮಾನತೆಗಳು ಅಳಿದಿಲ್ಲ. ಅಭಿವೃದ್ಧಿಯಲ್ಲಿ ರಾಷ್ಟ್ರದ ಸರಾಸರಿಗಿಂತ ಉನ್ನತ ಸ್ಥಾನದಲ್ಲಿದ್ದ ಕರ್ನಾಟಕವು ಸಾವಕಾಶವಾಗಿ ಸರಾಸರಿಗಿಂತ ಕೆಳಗಿಳಿಯುತ್ತಿರುವ ಸಂದರ್ಭದಲ್ಲಿಯೇ ಆಂತರಿಕ ಅಸಮಾನತೆ ವಿರೋಧಿಸಿ ಉತ್ತರ ಕರ್ನಾಟಕ, ಕೊಡಗು ಜಿಲ್ಲೆಗಳಲ್ಲಿ ಕರ್ನಾಟಕದ ಏಕತೆಗೆ ಧಕ್ಕೆ ಬರುವಂತಹ ದನಿಗಳು ಕೇಳಿಬರುತ್ತಿವೆ. ಇಂತಹ ಗಂಭೀರ ಸನ್ನಿವೇಶದಲ್ಲಿ 'ಅಖಂಡ ಕರ್ನಾಟಕದ ಸಮಗ್ರತೆ' ಪ್ರಶ್ನಾತೀತ ಎಂದು ಸಾರಲು, ಸಾವಿರ ಸಾವಿರ ಕೈಗಳು ಕೂಡಿ ಕಟ್ಟಿದ ಕರ್ನಾಟಕವನ್ನು ಕೆಲವು ಕೈಗಳು ನಿರ್ನಾಮ ಮಾಡಲಾರವು ಎಂಬುದನ್ನು ಹೇಳಲು ನಾವೆಲ್ಲಾ ಜೊತೆಗೂಡಬೇಕಾಗಿದೆ.

ಅಸಮಾನತೆ ಎಂಬುದು ಇಂದು ವಿಶ್ವವ್ಯಾಪಿ ಪಿಡುಗಾಗಿದೆ. ಪ್ರತ್ಯೇಕತೆಯ ಮಾತುಗಳೂ ಸಾಮಾನ್ಯವಾಗಿದೆ. ಪ್ರತ್ಯೇಕತೆಯು ಪ್ರಗತಿಗೆ, ಅಸಮಾನತೆಯ ನಿವಾರಣೆಗೆ ಪರಿಹಾರವಲ್ಲ ಎಂಬುದು ಸಾಬೀತಾಗಿರುವ ಸಂಗತಿ.

ಪ್ರಚಲಿತ ಅಂಕಿ-ಅಂಶಗಳು ಕರ್ನಾಟಕದಲ್ಲಿ ಅಸಮಾನತೆಯಿರುವುದನ್ನು ಸೂಚಿಸುತ್ತವೆ. ವಲಯ ಮಟ್ಟದಲ್ಲಿ ನೋಡಿದರೆ ಕಲ್ಯಾಣ ಕರ್ನಾಟಕ ತೀರ ಹಿಂದುಳಿದಿದೆ. ಬೆಂಗಳೂರಿನ ಬೆಳವಣಿಗೆಯಂತೂ ಎಲ್ಲರ ಕಣ್ಣು ಕುಕ್ಕುವಂತೆ ಮಾಡಿದೆ. ಎಲ್ಲ ಅಧಿಕಾರ ಬೆಂಗಳೂರಿನಲ್ಲಿಯೇ ಕೇಂದ್ರೀಕೃತವಾಗಿದೆ. ಸರ್ಕಾರಗಳ ಇತ್ತೀಚಿನ ಕೆಲವು ನಿರ್ಧಾರಗಳಿಂದ ನೊಂದ ಉತ್ತರ ಕರ್ನಾಟಕದ ಕೆಲವರು ಪ್ರತ್ಯೇಕತೆಯ ಮಾತನ್ನಾಡಿದ್ದಾರೆ. ಎಚ್. ಕೆ. ಪಾಟೀಲರು ಬರೆದಿರುವ 'ಚಲುವ ಕನ್ನಡ ನಾಡು - ನನಸಾಗದ ಕನಸು' ಈ ನಿಟ್ಟಿನಲ್ಲಿ ಸಾಕಷ್ಟು ಪ್ರಚೋದನೆ ನೀಡಿದೆ. ಪುಸ್ತಕದಲ್ಲಿನ ಅಂಕಿ ಅಂಶಗಳು ಸರಿಯಿವೆ. ಸಾಮಾನ್ಯವಾಗಿ ಸರ್ಕಾರ ರೂಪಿಸುವ ಎಲ್ಲ ಅಭಿವೃದ್ಧಿ ಕೆಲಸಗಳಲ್ಲಿ ಜನಸಾಂದ್ರತೆಗೆ ಒತ್ತು ಕೊಡುವುದು ಸಹಜವೂ ಹೌದು. ನ್ಯಾಯಯುತವು ಕೂಡ. ಇದು ಅಂತರರಾಷ್ಟ್ರೀಯ ಮಟ್ಟದಲ್ಲಿಯೂ ಮಾನ್ಯತೆ ಪಡೆದ ನೀತಿ. ಇದಕ್ಕೆ ವಿರುದ್ಧವಾಗಿ ಭೌಗೋಲಿಕ ಪ್ರದೇಶವನ್ನೇ ಆಧಾರವಾಗಿ ನೋಡಿರುವುದು ಪಾಟೀಲರ ಪುಸ್ತಕದ ಕೊರತೆ.

ಕರ್ನಾಟಕದ ಇಂದಿನ ಪ್ರಗತಿಯನ್ನು ವಿಶ್ಲೇಷಣೆ ಮಾಡುವಾಗ ಏಕೀಕರಣ ಪೂರ್ವದ ಸ್ಥಿತಿಯನ್ನು ತೌಲನಿಕವಾಗಿ ನೋಡಿದರೆ ಮಾತ್ರ ಪ್ರಗತಿಯ ವಾಸ್ತವ ಸ್ಥಿತಿ ತಿಳಿಯುತ್ತದೆ.

'ಕೈಗಾರಿಕೀರಣ, ಇಲ್ಲವೆ ನಾಶ' ಎಂಬ ಧ್ಯೇಯದಿಂದ ಪ್ರಾತಃಸ್ಮರಣೀಯ ಡಾ|| ಎಂ. ವಿಶ್ವೇಶ್ವರಯ್ಯನವರು ಮೈಸೂರು ಪ್ರಾಂತ್ಯವನ್ನು ಕೊಂಡೊಯ್ದಿದ್ದರು. ತಾಂತ್ರಿಕ ಕಾಲೇಜು, ಅಣೆಕಟ್ಟುಗಳು, ವಿದ್ಯುತ್ ಯೋಜನೆ, ಸಂಪರ್ಕಗಳನ್ನು ನಿರ್ಮಿಸಿ ನಮ್ಮ ರಾಜ್ಯ ಭಾರತ ದೇಶಕ್ಕೆ ಮಾದರಿಯಾಗಿತ್ತು. ಏಕೀಕರಣ ಪೂರ್ವದಲ್ಲಿಯೇ ಬೆಂಗಳೂರಿನಲ್ಲಿ ಎಚ್. ಎ. ಎಲ್., ಬಿ. ಇ. ಎಲ್., ಐ. ಟಿ. ಐ., ಎಚ್.ಎಮ್.ಟಿ.ಗಳಂತಹ ಪ್ರತಿಷ್ಠಿತ ಉದ್ದಿಮೆಗಳು ನೆಲೆಯೂರಿದ್ದುವು. ಗಾಂಧೀಜಿ ಮೈಸೂರು ಪ್ರಾಂತ್ಯವನ್ನು ನನ್ನ ಕನಸಿನ ರಾಮರಾಜ್ಯಕ್ಕೆ ಮಾದರಿ ಎಂದು ಹೇಳಿ ಸ್ವತಂತ್ರ ಭಾರತಕ್ಕೆ ಮೈಸೂರು ಪ್ರಾಂತ್ಯವೇ ಮಾದರಿ ಎಂದಿದ್ದರು. ಇದಕ್ಕೆ ವಿರುದ್ಧವಾಗಿ ಮುಂಬೈ ಮತ್ತು ಹೈದರಾಬಾದ್ ಆಡಳಿತಕ್ಕೆ ಸೇರಿದ್ದ ಕನ್ನಡ ಪ್ರದೇಶಗಳಲ್ಲಿ ಹೇರಳವಾದ ಸಂಪನ್ಮೂಲಗಳಿದ್ದರೂ, ಆಳುವವರು ಇಂದಲ್ಲ ನಾಳೆ ಇವು ಕರ್ನಾಟಕಕ್ಕೆ ಸೇರುತ್ತವೆ ಅನ್ನುವ ದೃಷ್ಟಿಯಿಂದ ಅಭಿವೃದ್ಧಿ ಕೆಲಸಗಳನ್ನು ಸರಿಯಾಗಿ ಕೈಗೊಳ್ಳಲಿಲ್ಲ. ಧಾರವಾಡದಲ್ಲಿ ಮೊದಲ ಕಾಲೇಜು ೧೯೧೬ರಲ್ಲಿ ಪ್ರಾರಂಭವಾಯಿತು. ಅಷ್ಟು ಹೊತ್ತಿಗೆ ಮೈಸೂರು ಪ್ರಾಂತ್ಯದಲ್ಲಿ ವಿಶ್ವವಿದ್ಯಾನಿಲಯವೇ ಪ್ರಾರಂಭವಾಗಿತ್ತು. ಬೆಳಗಾವಿಯ ಲಿಂಗರಾಜ ಕಾಲೇಜು ಪ್ರಾರಂಭವಾದದ್ದು ೧೯೩೩ರಲ್ಲಿ. ಇಂತಹ ಹಲವು ಸಂಗತಿಗಳನ್ನು ಬಿ.ಡಿ. ಜತ್ತಿಯವರು 'ಮೈಸೂರು-ಏಕೀಕರಣಕ್ಕೆ ಮುಂಚೆ ಮತ್ತು ಅನಂತರ' ಎಂಬ ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ.

ಏಕೀಕರಣದ ನಂತರ ಅಧಿಕಾರಕ್ಕೆ ಬಂದ ಸರ್ಕಾರಗಳು ಈ ಅಸಮಾನತೆಗಳನ್ನು ತಗ್ಗಿಸಲು ಪ್ರಯತ್ನಿಸಿವೆ ಎಂಬುದು ೧೯೫೭ರಲ್ಲಿ ಇದ್ದ ಪರಿಸ್ಥಿತಿಯನ್ನು ಇಂದಿನ ಪರಿಸ್ಥಿತಿಯೊಂದಿಗೆ ಹೋಲಿಸಿದಾಗ ವೇದ್ಯವಾಗುತ್ತದೆ. ಪ್ರಕೃತಿ ವಿಕೋಪಗಳಾದಾಗ ಬರ, ನೆರೆಗಳೆರಡೂ ಉತ್ತರ ಕರ್ನಾಟಕದಲ್ಲಿಯೇ ಪುನರಾವರ್ತನೆಗೊಂಡಿದ್ದರೂ ಮತ್ತು ಸರ್ಕಾರದ ಅವೈಜ್ಞಾನಿಕ ದೃಷ್ಟಿಯ ನಡುವೆಯೂ ಅಸಮಾನತೆ ಕಮ್ಮಿಯಾಗಿದೆ. ಆದರೆ ಸಂಪೂರ್ಣ ಕ್ಷಯಿಸಿ ಹೋಗಿಲ್ಲ!

ರಾಜ್ಯದ ಒಟ್ಟು ವಿಸ್ತೀರ್ಣದಲ್ಲಿ ಶೇ. ೫೨ರಷ್ಟು ಉತ್ತರ ಕರ್ನಾಟಕವಿದ್ದರೆ ಶೇ. ೪೮ರಷ್ಟು ದಕ್ಷಿಣ ಕರ್ನಾಟಕವಿದೆ. ಜನಸಂಖ್ಯೆಯ ದೃಷ್ಟಿಯಿಂದ ಶೇ ೫೭ರಷ್ಟು ದಕ್ಷಿಣ ಕರ್ನಾಟಕದಲ್ಲೂ ಶೇ. ೪೩ರಷ್ಟು ಉತ್ತರ ಕರ್ನಾಟಕದಲ್ಲೂ ಇದೆ. ಎಲ್ಲವನ್ನೂ ನಾವು ಇದೇ ಆಧಾರದಲ್ಲಿ ನೋಡಬೇಕು. ಬೆಂಗಳೂರು ನಗರವನ್ನು ಬಿಟ್ಟು ಉಳಿದ ಎಲ್ಲ ಪ್ರದೇಶದ ಬೆಳವಣಿಗೆಯನ್ನು ಗಮನಿಸಿದರೆ ಅಸಮಾನತೆ ಹೆಚ್ಚಾಗಿಲ್ಲ.

ನೀರಾವರಿ ದೃಷ್ಟಿಯಿಂದ ೧೯೫೭ರಲ್ಲಿ ರಾಜ್ಯದ ನೀರಾವರಿ ಪ್ರದೇಶದಲ್ಲಿ ಶೇ. ೭೦ರಷ್ಟು ಮೈಸೂರು ಕರ್ನಾಟಕದಲ್ಲಿತ್ತು. ಅದು ಇಂದು ಶೇ. ೫೦ಕ್ಕೆ ಇಳಿದಿದೆ. ೧೯೫೭ರಲ್ಲಿ ರಾಜ್ಯದ ಶೇ. ೩೦ರಷ್ಟಿದ್ದ ಉತ್ತರ ಕರ್ನಾಟಕ ನೀರಾವರಿ ಪ್ರದೇಶ ಇಂದು ಶೇ. ೫೦ಕ್ಕೆ ಏರಿದೆ. ಕರ್ನಾಟಕವು ನೀರಾವರಿ ಯೋಜನೆಗೆ ೧೯೯೬ ಮಾರ್ಚ್‌ವರೆಗೆ ಸುಮಾರು ೫೦೦೦ ಕೋಟಿ ಖರ್ಚು ಮಾಡಿದ್ದು ಉತ್ತರ ಕರ್ನಾಟಕಕ್ಕೆ ೩,೧೧೭.೬೪ ಕೋಟಿಯನ್ನು, ದಕ್ಷಿಣ ಕರ್ನಾಟಕಕ್ಕೆ ೧೮೭೯.೭೦ ಕೋಟಿಯನ್ನು ಖರ್ಚು ಮಾಡಿದೆ. ಇದೇ ರೀತಿ ೧೯೫೭ರಲ್ಲಿ ೪೩,೧೮೨ ಕಿ.ಮೀ. ಉದ್ದ ರಸ್ತೆ ಇತ್ತು. ಆದರಲ್ಲಿ ಹಳೇ ಮೈಸೂರಿನಲ್ಲಿ ೨೯,೪೪೪ ಕಿ.ಮೀ. (ಶೇ. ೬೯) ಇದ್ದರೆ ಉತ್ತರ ಕರ್ನಾಟಕದಲ್ಲಿ ಕೇವಲ ೧೩,೭೩೮ ಕಿ.ಮೀ. (ಶೇ. ೩೧) ರಸ್ತೆಯಿತ್ತು. ಇಂದು ರಾಜ್ಯದಲ್ಲಿ ೧,೧೪,೩೧೬ ಕಿ.ಮೀ. ರಸ್ತೆಯ ಮಾರ್ಗವಿದ್ದು ದಕ್ಷಿಣ ಕರ್ನಾಟಕದಲ್ಲಿ ೬೮,೪೬೮ (ಶೇ. ೫೯) ಮತ್ತು ಉತ್ತರ ಕರ್ನಾಟಕದಲ್ಲಿ ೪೫,೭೮೫ (ಶೇ. ೪೧) ಕಿ.ಮೀ. ರಸ್ತೆ ಮಾರ್ಗವಿದೆ. ಜನಸಂಖ್ಯೆ ದೃಷ್ಟಿಯಿಂದ ಪಡಿತರ ವಿತರಣ

ಅಂಗಡಿಗಳು ಬೆಂಗಳೂರು ವಿಭಾಗದಲ್ಲಿ ಸರಾಸರಿಗಿಂತ ಕಮ್ಮಿಯಿದೆ.

ಈ ಕೆಲ ಅಂಕಿ ಅಂಶಗಳನ್ನು ಮಾತ್ರವೇ ಇಲ್ಲಿ ಕೊಟ್ಟಿದೆ. ಎಲ್ಲ ಅಂಕಿ, ಅಂಶಗಳನ್ನು ಜನಸಂಖ್ಯೆಯ ಆಧಾರದ ಮೇಲೆ ನೋಡಿದಾಗ ಉತ್ತರ ಕರ್ನಾಟಕಕ್ಕೆ ಆಗಿರುವ ಅನ್ಯಾಯದ ಪ್ರಮಾಣ ನಾವು ಅಂದುಕೊಂಡಷ್ಟು ಆಗಿಲ್ಲ ಎಂಬುದು ಸ್ಪಷ್ಟವಾಗುತ್ತದೆ, ಕಲ್ಯಾಣ ಕರ್ನಾಟಕಕ್ಕೆ ಇನ್ನೂ ಹೆಚ್ಚು ಗಮನ ಕೊಡಬೇಕಿತ್ತು ಎಂಬುದು ಮನವರಿಕೆಯಾಗುತ್ತದೆ. ಪ್ರತಿ ಶಾಸಕ ಕ್ಷೇತ್ರಕ್ಕೂ ರಸ್ತೆಗಾಗಿ ಸರ್ಕಾರ ೨೦ ಲಕ್ಷ ಕೊಡುತ್ತದೆ. ಕೆಲಸ ಆಗಿಲ್ಲ ಅಂದರೆ ಶಾಸಕರೇ ಕಾರಣ ವೆಂಬುದನ್ನು ಗಮನಿಸಬೇಕು. ಜಿಲ್ಲಾ ಮಟ್ಟದಲ್ಲಿ ನೋಡಿದಾಗ ಕರ್ನಾಟಕದ ಕೊನೆಯ ಏಳು ಸ್ಥಾನಗಳಲ್ಲಿರುವ ಜಿಲ್ಲೆಗಳು ರಾಯಚೂರು, ಬೀದರ್, ಗುಲ್ಬರ್ಗಾ, ಕೋಲಾರ, ತುಮಕೂರು, ಬಿಜಾಪೂರ ಮತ್ತು ಬೆಂಗಳೂರು ಗ್ರಾಮಾಂತರ. ಉಪಕುಲಪತಿಗಳು ಹಾಗೂ ಕೆಲವು ಅಕಾಡೆಮಿ ಮತ್ತು ಅಧಿಕಾರಿಗಳ ನೇಮಕಾತಿಗಳಲ್ಲಿ ಉತ್ತರ ಕರ್ನಾಟಕಕ್ಕೆ ಆದ್ಯತೆ ದೊರೆತಿಲ್ಲ ಎಂಬುದು ನಿಜ. ೩೦ ವರ್ಷಗಳ ಹಿಂದೆ ಇವೇ ಸ್ಥಾನಗಳು ಉತ್ತರ ಕರ್ನಾಟಕಕ್ಕೆ ಹೋಗುತ್ತಿವೆ ಅನ್ನುವ ಕಾರಣ ಮುಂದು ಮಾಡಿ ಹಳೆಯ ಕರ್ನಾಟಕಕ್ಕೆ ಅನ್ಯಾಯವಾಗಿದೆ ಎಂದು ೧೯೬೬ರಲ್ಲಿ ವಿಧಾನಸಭೆ ನಡೆಯುತ್ತಿದ್ದಾಗ ಕರ್ನಾಟಕವನ್ನು ಎರಡು ರಾಜ್ಯಗಳಾಗಿ ತುಂಡರಿಸಬೇಕೆಂದು ಕೆಲವರು ಗೊತ್ತುವಳಿ ಮಂಡಿಸಿದ್ದರು. ಗೊತ್ತುವಳಿಯನ್ನು ಬೆಂಬಲಿಸಿ ಮಾತನಾಡಿದ್ದ ಮುಕ್ಕಣ್ಣಪ್ಪನವರು ತಾವು ಕನ್ನಡಿಗರೆಂದು, ಆದರೆ ಕರ್ನಾಟಕದವರಲ್ಲ – ಮೈಸೂರಿನವರೆಂದು ಹೇಳಿದರು.

ಆಂಧ್ರದಲ್ಲಿ ತೆಲಂಗಾಣ ಚಳುವಳಿ ನಡೆಯುತ್ತಿದ್ದಾಗ ಅಂದರೆ ೧೯೬೯ರಲ್ಲಿ ಅಂದಿನ ಕರ್ನಾಟಕದ ಲೋಕಸಭಾ ಸದಸ್ಯರಾಗಿದ್ದ ಎಂ. ವಿ. ಕೃಷ್ಣಪ್ಪನವರು ಹಳೆಯ ಮೈಸೂರು ಪ್ರಾಂತ್ಯಕ್ಕೆ ಅನ್ಯಾಯವಾಗಿದೆಯೆಂದು ಹೇಳಿ ವಾಸ್ತವ ಸಂಗತಿ ಅರಿಯಲು ಒಂದು ಉನ್ನತ ಮಟ್ಟದ ಸಮಿತಿ ರಚಿಸಲು ಒತ್ತಾಯಿಸಿದ್ದರು. ಕೆಂಗಲ್ ಹನುಮಂತಯ್ಯ ಇದನ್ನು ಬೆಂಬಲಿಸಿದ್ದರು. ದಯಾನಂದ ಸಾಗರ್, ಈ ಅನ್ಯಾಯಕ್ಕೆ ನಿಜವಾದ ಪರಿಹಾರವೆಂದರೆ 'ಪ್ರತ್ಯೇಕ ಮೈಸೂರು ಪ್ರಾಂತ್ಯ' ರಚನೆ ಮಾತ್ರ ಎಂದಿದ್ದರು. ಈ ಬೆಳವಣಿಗೆಯನ್ನು ವಿರೋಧಿಸಿ ಪಾಟೀಲ ಪುಟ್ಟಪ್ಪನವರ 'ಪ್ರಪಂಚ' ವಾರಪತ್ರಿಕೆ ೧೩.೭.೧೯೬೯ರ ಸಂಚಿಕೆಯಲ್ಲಿ 'ಕಟ್ಟಲು ಕೈಯಿಂದಾಗದ ಕೃಷ್ಣಪ್ಪ ಕರ್ನಾಟಕವನ್ನು ಒಡೆಯುತ್ತಾರಂತೆ' ಎಂಬ ವಿಸ್ತೃತ ಲೇಖನ ಪ್ರಕಟವಾಗಿತ್ತು. ಅದರಲ್ಲಿ ''ಹಳೆಯ ಮೈಸೂರಿಗೆ ಅನ್ಯಾಯವಾಗಿದೆ ಎನ್ನುವುದು ಸತ್ಯಕ್ಕೆ ದೂರವಾದದ್ದು. ಇದನ್ನು ಅಂಕಿ-ಸಂಖ್ಯೆಗಳು ಸೂಚಿಸುತ್ತವೆ. ಹಲವಾರು ಪ್ರಸಂಗಗಳಲ್ಲಿ ಕರ್ನಾಟಕದ ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗೆ ಹೆಚ್ಚು ಹಣ ವೆಚ್ಚವಾಗಿದ್ದರೂ ಅದು ತಪ್ಪಲ್ಲ. ಹಿಂದುಳಿದ ಪ್ರದೇಶಗಳಿಗೆ ಪ್ರಾಶಸ್ತ್ಯ ಕೊಟ್ಟು ಅವುಗಳ ಅಭಿವೃದ್ಧಿಯಾಗುವಂತೆ ನೋಡಿಕೊಳ್ಳುವುದು ಮುಂದುವರಿದ ಪ್ರದೇಶದವರ ಕರ್ತವ್ಯವಲ್ಲವೇ ?'' ಎಂದು ಕೇಳಲಾಗಿತ್ತು. ಕೃಷ್ಣಾದಂತಹ ಯೋಜನೆಗಳು ಬಿಜಾಪುರದಲ್ಲಿ ನಡೆಯುತ್ತಿದೆ ಅನ್ನುವ ಕಾರಣಕ್ಕೆ ಅದನ್ನು ಉತ್ತರ ಕರ್ನಾಟಕದ ಯೋಜನೆ ಅನ್ನುವುದು ತಪ್ಪು. ಕೃಷ್ಣಾ ಶರಾವತಿಯಂತಹ ಯೋಜನೆಗಳು ಇಡೀ ರಾಜ್ಯದ್ದು ಅನ್ನುವ ವಿಶಾಲ ಭಾವನೆ ಪ್ರದರ್ಶಿಸಬೇಕು ಎಂದು ಪತ್ರಿಕೆ ಸಂಪಾದಕೀಯದಲ್ಲಿ ಹೇಳಿದ್ದರು. ಆದಾಗಿ ೩೦ ವರ್ಷಗಳು ಕಳೆದ ನಂತರ ಇಂದು ಉತ್ತರ ಕರ್ನಾಟಕಕ್ಕೆ ಅನ್ಯಾಯವಾಗಿದೆ ಎಂದು ಹೇಳಿ ಪ್ರತ್ಯೇಕತೆಯ ಮಾತು ಕೇಳಿ ಬರುತ್ತಿರುವುದು ದೊಡ್ಡ ವಿಪರ್ಯಾಸ. ಕರ್ನಾಟಕ ಏಕೀಕರಣಕ್ಕೆ ವಿರುದ್ಧವಾಗಿದ್ದ ದೇವರಾಜ ಅರಸು ಮುಖ್ಯಮಂತ್ರಿಗಳಾದಾಗ ಬೆಳಗಾವಿಯಲ್ಲಿ ಕನ್ನಡಿಗರ ಬಲ ಹೆಚ್ಚಿಸುವ ದೃಷ್ಟಿಯಿಂದ ಎಲ್ಲ ಪ್ರಾದೇಶಿಕ ಕಚೇರಿಗಳನ್ನು ಅಲ್ಲಿಗೆ ವರ್ಗಾಯಿಸಿದರು. ಇಂದು ಅವೆಲ್ಲ ಧಾರವಾಡಕ್ಕೆ ಬಂದಿವೆ. ಇದಕ್ಕೆ ಯಾರು ಹೊಣೆ ? ದೇಹದ ಯಾವುದೇ ಅಂಗಕ್ಕೆ ಊನ ಬಂದರೂ ಅದನ್ನು ಸರಿಪಡಿಸಲು ಪ್ರಯತ್ನಿಸುತ್ತೇವೆಯೇ ವಿನಾ ತುಂಡರಿಸಿಕೊಳ್ಳುವುದಿಲ್ಲ. ನಾಡು-ನುಡಿಯ ಪ್ರೇಮಿಗಳಿಗೆ ದೇಹ ಬೇರೆಯಲ್ಲ, ನಾಡು ಬೇರೆ ಅಲ್ಲ. ಅನ್ಯಾಯಗಳಾದಾಗ ಅವನ್ನು ಸರಿಪಡಿಸಬೇಕು: ಆದರೆ ಅವನ್ನು ಪ್ರತ್ಯೇಕತೆಯಿಂದ ಸರಿಪಡಿಸುತ್ತೇವೆ ಅನ್ನುವುದು ಸರಿಯಲ್ಲ. ರಾಜ್ಯದ ಯಾವುದೇ ಭಾಗ ಮೂಲಭೂತ ಸೌಲಭ್ಯಗಳಿಂದ ವಂಚಿತವಾದರೆ ಅದು ಅವಮಾನಕಾರಿ ಎನ್ನುವ ನಿಲುವು ನಮ್ಮದಾಗಬೇಕು. ಸ್ವಾಭಿಮಾನಿ, ಸಮೃದ್ಧ ಕರ್ನಾಟಕ ಎಂದರೆ ಅಖಂಡ ಕರ್ನಾಟಕದ ಸರ್ವಾಂಗೀಣ ಬೆಳವಣಿಗೆ ಆಗಬೇಕು. ಇದು ನಮ್ಮೆಲ್ಲರ ಆದರ್ಶ-ಆಶಯ.

ಡಾ. ನಂ. ಚಂದ್ರಶೇಖರ
ನಂ. ೬, ನಾಗದೇವ ಕಾಂಪ್ಲೆಕ್ಸ್, ೨ನೆಯ ತಿರುವು
ಹೆಚ್.ಕೆ.ಆರ್. ಗಾರ್ಡನ್, ಬೆಂಗಳೂರು-೫೬೦ ೦೩೬

# ಹಂಗರಹಳ್ಳಿ ಜೀತಮುಕ್ತರ ಅಳಲು

ಕಂಬಾಲಪಲ್ಲಿಯಲ್ಲಿ ನಡೆದ ದಲಿತರ ಸಜೀವ ದಹನ ಘಟನೆ ಇನ್ನೂ ರಾಜ್ಯದ ಜನರ ಮನದಿಂದ ಮಾಸಿಹೋಗಿಲ್ಲ. ಅದರ ಬೆನ್ನ ಹಿಂದೆಯೇ ಕೂಲಿನಾಲಿ ಮಾಡಿ ಬದುಕುವ ಬಡಜೀವಿಗಳ ಕಾಲಿಗೆ ಉಕ್ಕಿನ ಸರಪಳಿ ಹಾಕಿ ದುಡಿಸಿಕೊಳ್ಳುವ ಪೈಶಾಚಿಕ ಕೃತ್ಯ.

ಹಂಗರಹಳ್ಳಿ ಮುಖ್ಯಮಂತ್ರಿ ತವರು ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನಲ್ಲಿದೆ. ಅಲ್ಲಿ ಪುಟ್ಟಸ್ವಾಮಿ ಕೂಲಿಗಳ ಕಾಲಿಗೆ ಕೋಳ ತೊಡಿಸಿ ಕ್ವಾರಿಯ ಕಲ್ಲನ್ನು ಒಡೆಸಿಕೊಳ್ಳುತ್ತಿದ್ದ. ಸತತ ಐದಾರು ವರ್ಷಗಳಿಂದ ಕ್ವಾರಿಯ ಸಂದಿಗೊಂದಿಯಲ್ಲಿ ಕಲ್ಲಲ್ಲೇ ಕಲ್ಲಾಗಿ ಹೋಗಿದ್ದ ಐದು ಕುಟುಂಬಗಳು ಈಗ ಬೆಳಕು ಕಂಡಿವೆ. ಕಾಲಿಗೆ ಹಾಕಲಾಗಿದ್ದ ೧೫ ಕೆ. ಜಿ. ತೂಕದ ಸರಪಳಿಯನ್ನು ತೆಗೆಯಲಾಗಿದೆ. ಕೆಲವು ಆರೋಪಿಗಳ ಬಂಧನವಾಗಿದೆ. ಸಂಬಂಧಿಸಿದ ಅನೇಕ ಅಧಿಕಾರಿಗಳ ಅಮಾನತ್ತಾಗಿದೆ. ವಿಭಾಗೀಯ ಅಧಿಕಾರಿಗಳ ನೇತೃತ್ವದ ತನಿಖೆಗೂ ಸರ್ಕಾರ ಆದೇಶಿಸಿದೆ. ಇದೆಲ್ಲ ಸರಿ, ಆದರೆ ಆಮೇಲೆ ಅದನ್ನೆಲ್ಲ ಮುಚ್ಚಿಹಾಕುವ ಖದೀಮ ಸರ್ಕಾರಗಳು ನಮ್ಮವು.

ಇಪ್ಪತ್ತೈದು ವರ್ಷಗಳಿಗೂ ಹಿಂದೆ ಜೀತವಿಮುಕ್ತಿಯ ಕಾನೂನು ಜಾರಿಗೆ ಬಂದು, ಈ ಅನಿಷ್ಟ ಪದ್ಧತಿಯ ವಿರುದ್ಧ ಕಠಿಣ ಕ್ರಮ ಕೈಗೊಂಡ ಸಂದರ್ಭದಲ್ಲಿಯೂ ಕರ್ನಾಟಕ ರಾಜ್ಯದ ವ್ಯಾಪ್ತಿಯಲ್ಲಿ ಈ ಬಗೆಯ ಹೃದಯ ವಿದ್ರಾವಕ ಪ್ರಕರಣ ನಡೆದಿರಲಿಲ್ಲ. ಕಾನೂನನ್ನೇ ಕಾಲಕಸ ಮಾಡಿಕೊಂಡಿದ್ದ ಕ್ವಾರಿ ಮಾಲೀಕ ಪುಟ್ಟಸ್ವಾಮಿ ಹಾಗೂ ಆತನ ಅಳಿಯ ಶ್ರೀನಿವಾಸ್ ಈಗ ಜೈಲಿನ ವಾಸಿಗಳೆಂಬುದು ಬೇರೆ ಮಾತು.

ರಾಜ್ಯದಲ್ಲಿ ಜೀತಪದ್ಧತಿ ಬೂದಿ ಮುಚ್ಚಿದ ಕೆಂಡದಂತೆ ಇನ್ನೂ ಜೀವಂತವಾಗಿದೆ. ಎಷ್ಟೋ ಹಳ್ಳಿಗಳಲ್ಲಿನ ಗೌಡ, ಕುಲಕರ್ಣಿ, ಸಾಹುಕಾರನ ಮನೆಗಳಲ್ಲಿ ಪ್ರತಿನಿತ್ಯ ತಮ್ಮೆಲ್ಲ ಮನೆಗೆಲಸ ಮಾಡಿಸಿಕೊಳ್ಳುವ ಪದ್ಧತಿ ಸಂಪ್ರದಾಯ ಬದ್ಧವಾಗಿ ನಡೆದುಕೊಂಡುಬಂದಿದೆ. ಇದನ್ನು ಜೀತ ಎಂದು ಯಾರೂ ಹೇಳೋದಿಲ್ಲ. ಏಕೆಂದರೆ, ಹೇಳಿದರೆ ಬದುಕುವ ಹಕ್ಕು ಕಳೆದುಹೋಗಬಹುದೆಂಬ ಆತಂಕ.



ಇವರಿಗೆ 'ಸ್ವತಂತ್ರ' ನಾಡಿನಲ್ಲಿ ಮುಕ್ತಿಯಿಲ್ಲದಂತೆ ಮಾಡಿರುವ 'ಹೆಮ್ಮೆ' ನಮ್ಮದು!

ಹಿಂದೆ ಅಮೆರಿಕಾದ ಕಪ್ಪು ಜನರು ಬವಣೆಗೆ ಸಿಲುಕಿ ಎಲ್ಲಿಲ್ಲದ ಹಿಂಸೆ ಅನುಭವಿಸುತ್ತಿದ್ದರೆಂಬುದನ್ನು ಇತಿಹಾಸದ ಪುಸ್ತಕದಲ್ಲಿ ಓದಿ ಮರುಗಬೇಕಾಗಿತ್ತು. ಆದರೆ ಈಗ ನಮ್ಮ ಕಾಲ ಬುಡದಲ್ಲೇ ಅದಕ್ಕಿಂತ ಹೇಯವಾದ ಕೃತ್ಯ ನಡೆದಿರುವುದನ್ನು ಕಣ್ಣಾರೆ ನೋಡಬೇಕಾದ ಸ್ಥಿತಿ ಬಂದೊದಗಿದೆ. ನಮ್ಮ ಸಾಮಾಜಿಕ ನಿರ್ವಹಣೆ ಹೀಗಿದೆ!

ಹಂಗರಹಳ್ಳಿ ಬೆಟ್ಟದಲ್ಲಿ ಕಳೆದ ಐದಾರು ವರ್ಷಗಳಲ್ಲಿ ನಡೆದದ್ದು ಕೇವಲ ಜೀತ ಪದ್ಧತಿಯಲ್ಲ, ಮಾನವೀಯತೆ,



*ಶ್ರೀ ವೆಂಕಟೇಶ್ ಒಡನೆ, ರಾಜ್ಯ ರೈತಸಂಘದ ಕಾರ್ಯಕರ್ತರು*

ಅನುಕಂಪ, ಪ್ರೀತಿ, ವಿಶ್ವಾಸಗಳ ಮೇಲೆ ಹಾಗೂ ನಾಗರಿಕ ಸಮಾಜ ವ್ಯವಸ್ಥೆಯ ಮೇಲೆ, ಮನುಷ್ಯ ಸಂಬಂಧಗಳ



*ಶ್ರೀರಂಗಪಟ್ಟಣ ತಾಲ್ಲೂಕು ಹಂಗರಹಳ್ಳಿಯಲ್ಲಿ ಜೀತ ವಿರೋಧಿಸಿ ಶುಕ್ರವಾರ ಮೈಸೂರಿನಲ್ಲಿ ಮೆರವಣಿಗೆ ಕಾಲಕ್ಕೆ ಶೋಷಣೆಯ ವೈಖರಿಯ ಪ್ರತಿರೂಪ ಪ್ರದರ್ಶನ ಮಾಡಲಾಯಿತು*

ಮೇಲೆ ನಡೆದಿರುವ ಬರ್ಬರ ಹಲ್ಲೆ ಇದು. ಈ ಕೃತ್ಯಕ್ಕೆ ರಾಜಕೀಯ ಬೆಂಬಲ, ಅಧಿಕಾರಶಾಹಿಯ ನೆರವು, ಅಷ್ಟೇ ಏಕೆ, ಕಂಡು ಕಾಣದಂತಿದ್ದ ಕುರುಡರು ವ್ಯವಸ್ಥಿತವಾಗಿ ನಡೆಸಿಕೊಂಡು ಬಂದ ಪದ್ಧತಿ ಇದಾಗಿತ್ತು.

ವೆಂಕಟೇಶ್, ವೆಂಕಟೇಶನ ಮಗ ಗೋಪಾಲ, ನಾಗರಾಜು, ವೆಂಕಟಾಚಲ ಮತ್ತು ಕೃಷ್ಣ ಎಂಬುವರೇ ಸಂಕೋಲೆಗೆ ಕಾಲುಕೊಟ್ಟ ನಿಸ್ಸಹಾಯಕರು. ಈ ರೀತಿಯಾಗಿ ಬೇಡಿ ಹಾಕಿಸಿಕೊಂಡು ಐದಾರು ವರ್ಷಗಳಿಂದ ಕಲ್ಲು ಗಣಿಗಳಲ್ಲಿ ಬಂಧಿಗಳಾಗಿದ್ದ ಇವರಿಗೆ ಖಾಸಗಿ ಬದುಕೆಂಬುದೇ ಇಲ್ಲದಂತಾಗಿತ್ತು. ಇವರಿಗೆ ಹೆಂಡರು, ಮಕ್ಕಳು, ತಂದೆ-ತಾಯಿಗಳು ಇದ್ದರೂ ಇಲ್ಲದಂತೆ; ಅವರಿದ್ದರೂ ಅವರ ನಡುವೆಯೇ ಇವರು ಬಂಧಿಗಳು. ಈ ಅಸಹಾಯಕ ಜೀವಿಗಳ ಬಂಧುಗಳೂ ಕೂಡಾ ಅಸಹಾಯಕರೇ. ಹೀಗೆ ಇವರ ಅಸಹಾಯಕತೆಯ ದುರ್ಲಾಭ ಪಡೆದ ಪುಟ್ಟಸ್ವಾಮಿಗೌಡ ೩೦ ಕುಟುಂಬಗಳನ್ನು ತನ್ನ ಹಿಡಿತದಲ್ಲಿಟ್ಟು ವ್ಯವಹಾರ ನಡೆಸುತ್ತಿದ್ದ.

ಇದನ್ನೆಲ್ಲಾ ಶೋಷಣೆ ಎಂದು ಪ್ರತಿಭಟಿಸಿದವರು ಕಲ್ಲುಗಣಿ ಬೆಟ್ಟದ ಹಿಪ್ಪೆ ಮರದಡಿ ಸಾವನ್ನಪ್ಪಿರುವುದೂ ಉಂಟು. ಎಷ್ಟೋ ಜನ ಹಿಂಸೆಗೆ ಹೆದರಿ ರಾತ್ರೋರಾತ್ರಿ ಓಡಿಹೋಗಿದ್ದಾರೆ. ಒರಿಂದ ೧೪ ವರ್ಷದೊಳಗಿನ ೨೦ ಬಾಲ ಕಾರ್ಮಿಕರು ಇಲ್ಲಿ ಜಲ್ಲಿ ಕಲ್ಲು ಒಡೆಯುತ್ತಿದ್ದರು. ಅವರಿಗೆ ಕೂಲಿ ದಿನಕ್ಕೆ ೧೦ ರೂಪಾಯಿ!

ಕಾಲಿಗೆ ಹಾಕಿದ್ದ ಕೋಳ ತೆಗೆಯಿಸುವಲ್ಲಿ ಕೆಚ್ಚೆದೆಯ ಹೋರಾಟ ಮಾಡಿದ ರಾಜ್ಯ ರೈತ ಸಂಘದ ಕಾರ್ಯ ನಿಜವಾಗಿಯೂ ಶ್ಲಾಘನೀಯ. ನಿತ್ಯ ನಿರಂತರ ಸಮಸ್ಯೆಗಳಿಗಿಂತ ಹೆಚ್ಚಾಗಿ ಸಮಾಜಕ್ಕೆ ಕಪ್ಪು ಚುಕ್ಕೆಯಾಗಿದ್ದ ಈ ಅಮಾನವೀಯ ಪದ್ಧತಿಯನ್ನು ಬಯಲಿಗೆಳೆದ ರೈತಸಂಘದ ಕಾರ್ಯಕರ್ತರಿಗೆ ಅಭಿನಂದನೆಗಳು, ಧನ್ಯವಾದಗಳು. ಅವರು ಮುಂದೆ ಇದೇ ರೀತಿಯ ಸಮಾಜ ಕಂಟಕ ಪದ್ಧತಿಗಳನ್ನು ಬಯಲಿಗೆಳೆಯುವ ದಿಟ್ಟತನದ ಕಾರ್ಯ ಮಾಡಲಿ ಎಂಬ ಅಪೇಕ್ಷೆ ನಮ್ಮದು. ಅದಕ್ಕೆ ಸಂಪೂರ್ಣ ಬೆಂಬಲವೂ ಇದೆ.

- ಲಕ್ಷ್ಮಣ

*(ಚಿತ್ರಗಳು : ಜನವಾಹಿನಿ ಕೃಪೆ)*

# ಪ್ರಾದೇಶಿಕ ವಿಭಿನ್ನತೆಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚೆನ್ನಪಟ್ಟಣ ತಾಲ್ಲೂಕಿನ ಅಪ್ಪಗೆರೆ ಎಂಬ ಹಳೆ ಮೈಸೂರಿನ ಹಳ್ಳಿಯಲ್ಲಿ ಹುಟ್ಟಿ ಬೆಳೆದು, ಮಂಡ್ಯ ಮತ್ತು ಬೆಂಗಳೂರು ನಗರಗಳಲ್ಲಿ ವಿದ್ಯಾಭ್ಯಾಸ ಮಾಡಿ, ತದನಂತರ ಬೆಂಗಳೂರು ನಗರದಲ್ಲೇ ಮೂರು ವರ್ಷ ನೌಕರಿ ಮಾಡಿ, ನಂತರ ೧೯೭೬ರಲ್ಲಿ ಗ್ರಾಮೀಣ ಬ್ಯಾಂಕೊಂದರಲ್ಲಿ ಅಧಿಕಾರಿಯಾಗಿ ಉತ್ತರ ಕರ್ನಾಟಕದ ಜಿಲ್ಲೆಗಳಿಗೆ ಹೋಗುವ ಪ್ರಸಂಗ ಬಂತು.

ಬೆಂಗಳೂರಿನಿಂದ ರಾಯಚೂರಿಗೆ ಹೊರಡುವ ಮೊದಲು ಬೆಂಗಳೂರಿನವರು ಬಳ್ಳಾರಿ-ರಾಯಚೂರಿನ ಬಿಸಿಲಿನ ಬೇಗೆಯ ಬಗ್ಗೆ ಬಗೆ ಬಗೆಯ ಕಥನಗಳನ್ನು ಹೇಳಿ ಹೆದರಿಸಿದ್ದರು. ಬಳ್ಳಾರಿಯಲ್ಲಿನ ಬಾಲ ಸೂರ್ಯನೇ ಉರಿಗಣ್ಣಿನವನೆಂದು ಕೇಳಿದ್ದೆ. ಬೆಳಿಗ್ಗೆ ೮-೯ ಗಂಟೆಗೆಲ್ಲಾ ರಸ್ತೆ ಕಾದು ಟಾರು ಕುದಿಯುತ್ತದೆ ಎಂದೆಲ್ಲಾ ಉತ್ಪ್ರೇಕ್ಷಿಸಿ ಹೇಳಿದ್ದರಿಂದ ನಾನು ಕುತೂಹಲಿಯಾಗಿ ಸಣ್ಣ ಮಕ್ಕಳು ಬಸ್ಸಿನ ಕಿಟಕಿ ಪಕ್ಕ ಕುಳಿತು ಆಕಾಶದಲ್ಲಿ ಹಾರುವ ವಿಮಾನ ನೋಡುವಂತೆ ಉತ್ಸುಕತೆಯಲ್ಲಿ ಸೂರ್ಯೋದಯ ವೀಕ್ಷಣೆಗೆ ಕಾತರನಾಗಿದ್ದೆ. ನನ್ನ ನಿರೀಕ್ಷೆ ಹುಸಿಯಾಯಿತು. ಬೆಂಗಳೂರಿನವರ ವರ್ಣನೆ ಉತ್ಪ್ರೇಕ್ಷೆಯಾಗಿಯೇ ಉಳಿಯಿತು. ಇನ್ನೂ ಒಂದು ಮಾತು ಹೇಳಿದ್ದರು. ಬಳ್ಳಾರಿ, ರಾಯಚೂರಿನಲ್ಲಿ ಬೇಸಿಗೆಯಲ್ಲಿ ಮಧ್ಯಾಹ್ನದ ವೇಳೆ ಬೀಗಗಳು ತಾವಾಗಿಯೇ ತೆರೆದುಕೊಳ್ಳುತ್ತವೆ ಎಂದು. ಇದೂ ತೀರಾ ಉತ್ಪ್ರೇಕ್ಷೆ ಎಂದು ಬೇಗ ಮನನ ಮಾಡಿಕೊಂಡೆ.

ಮೊದಲನೆ ದಿನವೇ ರಾಯಚೂರು ಮುಟ್ಟಿದ ತಕ್ಷಣ ಸೈಕಲ್ ರಿಕ್ಷಾ ನೋಡಿ ದಂಗಾದೆ : ನಾನೇನು ಕರ್ನಾಟಕದಲ್ಲಿರುವೆನೋ ಅಥವಾ ಉತ್ತರ ಭಾರತದ ಲಕ್ನೊ, ಆಗ್ರಾಗಳಲ್ಲಿರುವೆನೋ ಎಂದು. ಅಲ್ಲಿನ ಕೋಟೆ, ಬುರುಜು, ಬತೇರಿಗಳು ನನಗೆ ಸೋಜಿಗವನ್ನು ಉಂಟು ಮಾಡಿದವು. ಜನಜೀವನ ವೇಷ ಭೂಷಣಗಳಲ್ಲಿ ಮುಸ್ಲಿಂ ಶೈಲಿ. ಗಂಡಸರು ಜುಬ್ಬಾ, ಹೆಣ್ಣು ಮಕ್ಕಳು (ಹೆಂಗಸರು) ತಲೆ ಮೇಲೆ ಸೆರಗು. ಪಕ್ಕದ ಆಂಧ್ರಪ್ರದೇಶದ ಪ್ರಭಾವವು ಹೆಚ್ಚು. ತೆಲುಗು ಮಿಶ್ರಿತ ಭಾಷೆ. ಉರ್ದು ಶಬ್ದಗಳೂ ಯಥೇಚ್ಛ. ಮನೆಯ ಹೆಂಗಸರು ಮನೆಯೊಳಗಷ್ಟೇ ಸೀಮಿತ. ಗಂಡಸರದ್ದೇ ಕಾರುಬಾರು. ಅದರಲ್ಲೂ ಅವಿಭಕ್ತ ಕುಟುಂಬದಲ್ಲಿನ ಯಜಮಾನನದೇ ಎಲ್ಲಾ ಜವಾಬ್ದಾರಿ. ಆದರೆ ನೌಕರಸ್ಥರಿಗೆ ಬಹಳ ಮರ್ಯಾದೆ, ಗೌರವ. ಅದರಲ್ಲೂ ಹಳೇಮೈಸೂರಿನವರಿಗೆ ಆದರದ ಮನ್ನಣೆ. ನಾವೆಲ್ಲಾ ಅವರ ಮುಂದೆ ಉನ್ನತಸ್ತರದ ಜನರಿದ್ದಂತೆ. ಬೀದಿಯಲ್ಲಿ ಕಂಡಾಗ 'ನಮಸ್ಕಾರ್ರೀ' ಎಂದು ಕೈ ಹಿಡಿದು, ಜುಬ್ಬಾದ ಜೊಕ್ಕಣ (ಜೇಬು)ದಿಂದ ಅಡಿಕೆ, ಏಲಕ್ಕಿ, ಲವಂಗ ನೀಡಿಕೆ: ಅತಿ ತಾಪಮಾನದ ಆ ಪ್ರದೇಶಗಳಲ್ಲಿ ಅಡಿಕೆ, ಲವಂಗ, ಏಲಕ್ಕಿಯನ್ನು ಬಾಯಲ್ಲಿಟ್ಟುಕೊಂಡು ಜಗಿಯುವುದರಿಂದ ಬಾಯಲ್ಲಿ ಯಾವಾಗಲೂ ನೀರಾಡುತ್ತಾ ಬಾಯಾರಿಕೆ ಕಡಿಮೆಯಾಗುವುದೆಂದು. ಇಲ್ಲಿ 'ಜಗಿಯುವುದು' ಎಂದಾಗ ಒಂದು ನೆನಪಾಗುತ್ತದೆ. ಅಲ್ಲಿನ ಜನರು ಪ್ರತಿ ಮಾತಿಗೆ 'ಅಗದಿ' ಎಂದು ಬಳಸುತ್ತಿದ್ದರು. ಆಗ ನಾನು ಅದನ್ನು ಅಗಿಯುವುದು ಎಂದು ಭಾವಿಸಿದ್ದೆ. ಕಾರಣ ಅವರು ಯಾವಾಗಲೂ ಅಡಿಕೆಯನ್ನು ಅಗಿಯುತ್ತಿರುತ್ತಾರೆ. ಆದರೆ ಮುಂದೆ ಗೊತ್ತಾಯಿತು. 'ಅಗದಿ' ಎಂದರೆ 'ಜಾಸ್ತಿ', 'ಹೆಚ್ಚು' ಎಂದು. ಅದೇ ರೀತಿ 'ಭೇಷ್', 'ಮಸ್ತ್' ಎಂಬ ಪ್ರತ್ಯಯಗಳನ್ನು ಹೆಚ್ಚಾಗಿ ಬಳಸುತ್ತಾರೆ. ಉಳಿದುಕೊಳ್ಳಲು ರೂಮು ಕೇಳಿದಾಗ, 'ಖೋಲಿ' ಎಂದರು. ಊಟಕ್ಕೆ ವಿಚಾರಿಸಿದಾಗ 'ಖಾನಾವಳಿ' (ಊಟದ ಹೋಟೆಲ್) ಎಂದು ತಿಳಿಯಿತು. ಸ್ವಲ್ಪ ಮಟ್ಟಿನ ಮರಾಠಿ ಪ್ರಭಾವ ಇದಾಗಿರಬೇಕು.

ಖಾನಾವಳಿಯಲ್ಲಿ ಮೂರು ಕಾಲಿನ ಮಣೆಯ ಮೇಲೆ ತಾಟು (ತಟ್ಟೆ, ಅದಕ್ಕೆ ಗಂಗಾಳ ಎಂತಲೂ ಕರೆಯುವರು). ಕೈಗೆ ನೀರು ಬಿಟ್ಟು, ತೊಳೆದ ನೀರನ್ನು ದೊಡ್ಡ ಪಾತ್ರೆ (ಹರಿವಾಣ)ಗೆ ಹಾಕಬೇಕು. ಆ ಪಾತ್ರೆಗೆ ಬಾಂಡೆ ಎಂದೂ ಸಹ ಕರೆಯುತ್ತಾರೆ. ತೊಳೆದ ನಂತರ ಕೆಂಪುವಲ್ಲಿ (ಚೌಕ)ಯೊಂದನ್ನು ಕೈವರಿಸಿಕೊಳ್ಳಲು ಕೊಡುತ್ತಾರೆ. ಅದರ ಹಿಂದೆ ವಿಭೂತಿ ಉಂಡೆಯನ್ನು ಕೊಡಲು ಬರುತ್ತಾರೆ. ಊಟಕ್ಕೆ ಮೊದಲೇ ಕೆಲವರು ಕೈಕಾಲು ಮುಖ ತೊಳೆದು ಖಾನಾವಳಿಯ ಪ್ರತ್ಯೇಕ ಕೋಣೆಯೊಂದರಲ್ಲಿ ಇರುವ ಶಿವಪೂಜೆಯ ವೇದಿಕೆ(ಗಂಡಿ)ಗೆ ಹೋಗಿ ವಿಭೂತಿ ಧರಿಸಿ ಸಣ್ಣ ಪೂಜೆ ಮುಗಿಸಿ ಬಂದಿರುತ್ತಾರೆ. ಉಳಿದವರು ಅಲ್ಲಿ ಹೋಗದೆ ಕುಳಿತಲ್ಲೇ ವಿಭೂತಿ ಧರಿಸಿಕೊಳ್ಳುತ್ತಾರೆ. ಬೇಡವೆಂದವರಿಗೆ ವಿಭೂತಿಯನ್ನು ವಾಪಸ್ಸು ತೆಗೆದುಕೊಳ್ಳುತ್ತಾರೆ. ಒತ್ತಾಯವೇನಿಲ್ಲ. ಊಟದ ಮಣೆ ನಾವು ಊಟಕ್ಕೆ ಕುಳಿತಿರುವವರ ಎದೆ ಮಟ್ಟದವರೆಗೆ ಎತ್ತರವಾಗಿರುತ್ತದೆ. ಇದೆಲ್ಲವೂ ಹಳೇ ಮೈಸೂರಿನವನಾದ ನನಗೆ ಪರಿಶಾನ್ (ಕಕ್ಕಾಪಿಕ್ಕಿ) ಮಾಡಿರುತ್ತಿತ್ತು. ಆದರೂ ಮೂಕನಾಗಿ ಬೇರೆಯವರು ಏನು ಮಾಡುವರೆಂದು ಓರೆಗಣ್ಣಿನಿಂದಲೇ ಪರೀಕ್ಷಿಸುತ್ತಿದ್ದೆ. ಅದೇ ಸಮಯದಲ್ಲಿ ನೀಡಲು (ಬಡಿಸುವ ಶಬ್ದಕ್ಕಿಂತ ನೀಡುವ ಶಬ್ದದ ಬಳಕೆ ಜಾಸ್ತಿ) ಬಂದ ನಾರಿಯರು, 'ಸಾಹೇಬ್ರೆ ಬದನೆಕಾಯಿ ನೀಡಲೆ', 'ಬೇಳೆ ನೀಡಲೆ' ಎಂದು ಕೇಳುತ್ತಿದ್ದರು. ನಾನು ತಕ್ಷಣ 'ಬೇಡ' ಎನ್ನುತ್ತಿದ್ದೆ. ಕಾರಣ ರೊಟ್ಟಿ ಜೊತೆಗೆ ಮೆಲ್ಲೆಸಲು ಹಸಿ ಮೂಲಂಗಿ, ಅದರ ಸೊಪ್ಪು (ತೊಪ್ಪಲು ಎನ್ನುತ್ತಾರೆ), ಮೆಂತೆ ಪಲ್ಲೆ (ಸೊಪ್ಪಿನ ಪಲ್ಲೆ ಅಂತಲೂ ಅನ್ನುತ್ತಾರೆ, ಜೊತೆಗೆ ಮಾಂಸಕ್ಕೂ ಪಲ್ಲೆ ಎನ್ನುತ್ತಾರೆ !) ಇವುಗಳನ್ನೆಲ್ಲಾ ನೀಡುವುದನ್ನು ಗಮನಿಸುತ್ತಿದ್ದೆ. ಇನ್ನು ಅದೇ ರೀತಿ ಇವರು ಹಸಿ ಬದನೆಕಾಯಿ, ಬೇಳೆಗಳನ್ನು ನನ್ನ ತಟ್ಟೆಗೆ ಎಲ್ಲಿ ಇಡುವರೋ ಎಂದು ಬೇಡವೆನ್ನುತ್ತಿದ್ದೆ. ಆದರೆ ನನಗೆ ಮುಂದೆ ಬೇರೆಯವರಿಗೆ ಬಡಿಸಿದ ಬೇಳೆ ತೊವ್ವೆ, ಬದನೆಕಾಯಿ ಪಲ್ಯ ಬಡಿಸುತ್ತಿರಲಿಲ್ಲ. ಒಂದೆರಡು ದಿನ ಸುಮ್ಮನಿದ್ದು ಒಮ್ಮೆ ಧೈರ್ಯಮಾಡಿ ಕೇಳಿದೆ. ನನಗ[illegible] ಅವರಂತೆ ಬೇಳೆ, ಬದನೆಕಾಯಿ ಪಲ್ಯ ಮಡಗಿರೆಂದು. ಆ ನಾರಿಯರು ಕಿಸಕ್ಕೆಂದು ತಲೆಮೇಲಿನ ಸೆರಗನ್ನು ಬಾಯಿಗೆ ಮರೆಮಾಡಿ ನಗಲು ಪ್ರಾರಂಭಿಸಿ ಬೇರೆಯವರಿಗೂ ಹೇಳಿ ನಗುತ್ತಿದ್ದರು. ಏನೆಂದು ನನಗೆ ತಿಳಿಯಲಿಲ್ಲ. ಅವರಲ್ಲಿ ಸ್ವಲ್ಪ ಚೂಟಿಯಿರುವ ಹೆಣ್ಣುಮಗಳು 'ಶುರುವಿನಾಗೆ ಬೇಳೆ, ಬದನೆ ನೀಡಲೇನ್ರಿ ಅಂದಾಗ ಬೇಡಂದ್ರಿ' ಎಂದು ನಕ್ಕು ಹೇಳುತ್ತಿದ್ದರು. ಮೆಣಸಿನಕಾಯಿ ಬೋಂಡಾಕ್ಕೆ ಮೆಣಸಿನ ಕಾಯಿ (ಮಿರ್ಚಿ) ಎಂದಷ್ಟೇ ಹೇಳುವುದು ಅವರ ವಾಡಿಕೆ.

ವೆಂಕಟಯ್ಯ ಅಪ್ಪಗೆರೆ

ನಾನು ಬ್ಯಾಂಕಿನಲ್ಲಿ ಕೆಲಸ ಮಾಡುವ ಮೊದಲು ಕೆಲವು ಗ್ರಾಹಕರು 'ಖುಲ್ಲಾ' ಬೇಕೆಂದು ಕೇಳಲು ಬರುತ್ತಿದ್ದರು. ನನಗೆ ಅರ್ಥವೇ ಆಗುತ್ತಿರಲಿಲ್ಲ. ಕೊನೆಗೆ ಗೊತ್ತಾಯಿತು ಅದು 'ಚಿಲ್ಲರೆ' ಕೊಡಿ ಎಂದು. ಅಂದಾಜು ಬಡ್ಡಿ ಎಷ್ಟಾಗುತ್ತದೆ ಎನ್ನುವುದಕ್ಕೆ 'ಅಜಮಾಸು ಸೂಟಿ' ಎಷ್ಟಾಗುತ್ತದೆ ಎನ್ನುತ್ತಾರೆ. ಸಾಲದ ವಿಭಾಗಕ್ಕೆ ಬಂದು ಎತ್ತಿಗೆ ಮಾಡ್ರಿ, ಎಮ್ಮೆಗೆ ಮಾಡ್ರಿ, ಪೀಕಿಗೆ (ಬೆಳೆಸಾಲಕ್ಕೆ) ಮಾಡ್ರಿ ಎಂದು ಕೇಳುವುದು ವಾಡಿಕೆ. ನಮ್ಮಿಂದ ಕೆಲಸವಾಗಲಿಲ್ಲವೆಂದರೆ 'ಏನಾರು ಮಾಡ್ರಿ' ಎಂದು ಗಂಟು (ದುಂಬಾಲು) ಬೀಳುತ್ತಾರೆ. ಅವರಿಂದೇನಾದರೂ ತಪ್ಪಾಗಿದ್ದರೆ, ನಮಗೆ 'ಹೊಟ್ಟೆಗೆ ಹಾಕಿಕೊಳ್ಳರಿ', ಅಂದರೆ ಸುಧಾರಿಸಿಕೊಳ್ಳಿ, ಕ್ಷಮಿಸಿ ಎಂಬರ್ಥದಲ್ಲಿ.

ಕೂಡ್ಲಿಗಿಯಲ್ಲಿ ಬ್ಯಾಂಕ್ ಮ್ಯಾನೇಜರ್ ಆಗಿದ್ದಾಗ, ಒಬ್ಬಾಕೆ ಬಂದು 'ಸಾಹೇಬ್ರೆ, ನೀವು ಕೊಟ್ಟ ಎಮ್ಮೆ ಗಬ್ಬ (ಗರ್ಭ) ಕಟ್ಟಿಲ್ಲ, ಅದಕ್ಕೆ ನೀವೇನಾದ್ರು ಮಾಡ್ರಿ' ಎಂದು ಮೊರೆಯಿಟ್ಟಳು. ನಾವು ಸಿಬ್ಬಂದಿಗಳು ನಕ್ಕೆವು, ಅಷ್ಟೆ.

ಇನ್ನು 'ಹೊಟ್ಟೆಗಾಕಿಕೊಳ್ರಿ' ಎಂಬುದಕ್ಕೆ ಆ ಪ್ರದೇಶಗಳಲ್ಲಿ ಪ್ರಚಲಿತವಿರುವ ಒಂದು ಹಾಸ್ಯ ಪ್ರಸಂಗವಿದೆ.

ಬ್ಯಾಂಕಿನ ಫೀಲ್ಡ್ ಆಫೀಸರ್ (ಬಿಜಾಪುರದವ) ಮುಗ್ಧ ಸಾಲಗಾರನೊಬ್ಬನಿಗೆ ಇಂಕ್ ಪೆನ್ನು ಕೊಟ್ಟು ಸಾಲದ ಪತ್ರಗಳಿಗೆ ಸಹಿ ಮಾಡಲು ಹೇಳಿದನಂತೆ. ಇಂಕ್ ಸರಿಯಾಗಿ ಮೂಡಲಿಲ್ಲವೆಂದು ಆ ವ್ಯಕ್ತಿ ಪೆನ್ನನ್ನು ಬಲವಾಗಿ ಮುಂದಿನ ಭಾಗದಿಂದ ಎಳೆದಾಗ ಮುಂಭಾಗ ಹಿಂಭಾಗ ಪ್ರತ್ಯೇಕಗೊಂಡು ಇಂಕೆಲ್ಲಾ ಕೆಳಗೆ ಚೆಲ್ಲಿ [illegible]. ಆದಕ್ಕೆ ಸಿಟ್ಟುಗೊಂಡ ಫೀಲ್ಡ್ ಆಫೀಸರ್ ಬಿಜಾಪುರದ ಧಾಟಿಯಲ್ಲಿ 'ಲೇ ಏನಲೆ ಎಲ್ಲಾ ಹೇತುಕೊಂಡ ಬಿಟ್ಯಾ' ಎಂದು ರೇಗಿದನಂತೆ. ಅಂದರೆ [illegible]

[illegible]

ಕಟ್ಟು ಬಾಕಿದಾರನಾದ ಆ ವ್ಯಕ್ತಿ ಸಾಲ ಕಟ್ಟುವ ಮಾತನ್ನು ಬಿಟ್ಟು, 'ನನ್ನ ಮನೆಯಾಕೆಗೆ ನೀ ಎಂಗೆ ಹೆಂಗಸು ಎಂದೆ' ಎಂದು ನ್ಯಾಯ ತೆಗೆದುಕೊಂಡು ಜಗಳವಾಡಲು ಪ್ರಯತ್ನಿಸಿದ.

ಮಳವಳ್ಳಿಯವರೊಬ್ಬರು ಬಸ್ ಟಿಕೆಟ್ ಚೆಕಿಂಗ್ ಇನ್ಸ್‌ಪೆಕ್ಟರ್ ಆಗಿ ರಾಯಚೂರಿಗೆ ಬಂದಿದ್ದರು. ಒಮ್ಮೊಂದು ರಾತ್ರಿ ಗಂಗಾವತಿ ಮತ್ತು ಸಿಂಧನೂರು ಮಧ್ಯೆ ಪ್ರಯಾಣಿಸುವಾಗ ಇವರು ದಿಢೀರ್ ತಪಾಸಣೆ ಕೈಗೊಂಡರು. ಸರಿರಾತ್ರಿಯಲ್ಲಿ ಹಸಿದು ಪ್ರಯಾಣಿಸುತ್ತಿದ್ದ ವರ ಬಸ್ಸನ್ನು ನಿಲ್ಲಿಸಿ 'ಮೊದಲು ಹೆಂಗಸರೆಲ್ಲಾ ಟಿಕೆಟ್ ತೋರಿಸಿ' ಎಂದಿದ್ದೆ ತಕ್ಷಣ ಬಸ್ ಒಳಗಿದ್ದ ಮಹಿಳೆಯರೆಲ್ಲಾ ಸೇರಿ ಆತನನ್ನು ತಪ್ಪೊಪ್ಪಿಗೆ ಬರೆದು ಕ್ಷಮಾಪಣೆ ಕೇಳುವಂತೆ ಮಾಡಿದ್ದರು. ಕಾರಣ, ಅವರಲ್ಲಿ 'ಹೆಂಗಸು' ಎಂದರೆ 'ಸೂಳೆ' ಎಂಬರ್ಥ. 'ರಂಡೆ' ಎಂತಲೂ ಅರ್ಥವಿದೆ.

ಸಾಮಾನ್ಯವಾಗಿ ದೇವದಾಸಿಗಳನ್ನು 'ಯಲ್ಲವ್ವ', 'ಹುಲಿಗೆಮ್ಮ', ಹನುಮಂತ (ಕೊತ್ತಪ್ಪ) ದೇವರ ಹೆಸರಿನ ಮೇಲೆ ವಿಧಿವತ್ತಾಗಿ ಋತುಮತಿಯಾದ ಹೆಣ್ಣು ಮಕ್ಕಳನ್ನು (ಸಾಮಾನ್ಯವಾಗಿ ಮನೆಯ ಹಿರಿಮಗಳನ್ನು ದೇವರಿಗೆ ಒಪ್ಪಿಸುವುದು ವಾಡಿಕೆ) ಆಯಾ ದೇವರುಗಳಿಗೆ 'ಮದುವೆ' ಮಾಡಿಸಿ, ಬೀದಿಯಲ್ಲಿ ದಿಬ್ಬಣ (ಮೆರವಣಿಗೆ) ತೆಗೆದು ನಂತರ ಮೊದಲೇ ಗೊತ್ತಾದ 'ಗಣ್ಯ' ವ್ಯಕ್ತಿ ಅಥವಾ ಆ ದಿನದ ಖರ್ಚನ್ನು ವಹಿಸಿಕೊಂಡ ವ್ಯಕ್ತಿಗೆ 'ಮೊದಲ ರಾತ್ರಿ' ಶಾಸ್ತ್ರ ಮಾಡಿ ಒಪ್ಪಿಸುತ್ತಾರೆ. ಇದೆಲ್ಲವೂ ರಾತ್ರಿ ೯ ಗಂಟೆಯ ನಂತರ ಪ್ರಾರಂಭವಾಗಿ ಊರಿನ ಬೀದಿಯಲ್ಲಿ ಸುಮಾರು ೧೧ ಅಥವಾ ೧೨ ಗಂಟೆಯಲ್ಲಿ ಮೆರವಣಿಗೆ ಗುಟ್ಟಾಗಿ ಜರುಗುತ್ತದೆ. ಅವರಿಗೆ ದೇವರ ಹೆಸರಿನಲ್ಲಿ 'ತಾಳಿ'ಯನ್ನು ಕಟ್ಟುತ್ತಾರೆ. ದೇವಸ್ಥಾನದಲ್ಲಿ ನಡೆಯುವ ಮದುವೆ ಶಾಸ್ತ್ರದಲ್ಲಿ ಗಂಡಿನ ಸ್ಥಾನದಲ್ಲಿ 'ಒನಕೆ'ಯನ್ನಿಟ್ಟು ಆ ಕನ್ಯೆ ಅದಕ್ಕೇ ನಮಸ್ಕರಿಸಿ, ಒಂದೆರಡು ಬಾರಿ ಅದನ್ನು 'ದಾಟಿ' ಮಾಡುವ ಈ 'ಶಾಸ್ತ್ರ'ವನ್ನು ಮೇಲ್ವರ್ಗದ ಪೂಜಾರಿಗಳೇ ನಡೆಸಿಕೊಡುತ್ತಾರೆ. ಆ ಸರಿ ರಾತ್ರಿಯಲ್ಲಿ ಹೇಗೂ ಅಂತಹ ಪೂಜಾರಿಗಳಿಗೆ ಬೇಡಿದ 'ದಕ್ಷಿಣೆ' ದೊರೆಯುತ್ತದೆ.

ಇವರಿಗೆ ಸಾಮಾಜಿಕ ಸ್ಥಾನಮಾನ ಗೌರವಗಳಿವೆ. ಯಾವುದೇ ಮದುವೆ ಕಾರ್ಯಗಳಿರಲಿ, ಮೇಲ್ವರ್ಗದ (ಸವರ್ಣೀಯ)ವರ ಮದುವೆಗಳಲ್ಲಿ ಗಂಡು ಹೆಣ್ಣಿಗೆ ತಾಳಿ ಕಟ್ಟುವ ಮೊದಲು ಆ ತಾಳಿಯನ್ನು ಈ 'ನಿತ್ಯ ಸುಮಂಗಲೆ'ಯರು ಮುಟ್ಟಿ ಅನುಮತಿ ನೀಡಿದ ಮೇಲೆ ಕಟ್ಟುತ್ತಾರೆ. ಇದರಿಂದ ಗಂಡಿನ ಆಯುಷ್ಯ ಹೆಚ್ಚು, ತಾಳಿ ಭದ್ರ ಎಂದು ನಂಬಿದ್ದಾರೆ. ಅದಕ್ಕಾಗಿ 'ಲೇಸಿ'ಯರನ್ನು ಹಣ-ಕಾಣಿಕೆ ನೀಡಿ ಕರೆತರುತ್ತಾರೆ.

ಹೊಸಬರಿಗೆ ಇಲ್ಲಿ ಮೊದಲು ಕೇಳುವುದು, ನೀವು ಯಾವ ಮತಸ್ಥರೆಂದು. ಅದು ಬಹಳ ಸಂದಿಗ್ಧ ಪರಿಸ್ಥಿತಿ. [illegible] 'ಬೆಂಗಳೂರು', 'ಮಂಗಳೂರು' ಮತ್ತು '[illegible]'ನವರಿಗೆ ಸುಲಭ ಪರಿಹಾರವಿದೆ. ಅವರು [illegible] ಕೇಳಿದರೆ, [illegible] 'ನಾವು ಬೆಂಗಳೂರಿ [illegible]

ಬಂದಿದ್ದೀರಲ್ಲಾ ಎಂಬ ಆಶ್ಚರ್ಯವನ್ನು ಮುಂದುವರಿಸುತ್ತಾರೆ. ಬೆಂಗಳೂರು - ಮೈಸೂರಿನ ಪ್ರೇಕ್ಷಣೀಯ ಸ್ಥಳಗಳ ಬಗ್ಗೆ, ನಮ್ಮ 'ಮುದ್ದೆ'ಯ ಬಗ್ಗೆ ಕೇಳಲು ಪ್ರಾರಂಭಿಸುತ್ತಾರೆ. ಮಂಗಳೂರಿನವರಿಗಾದರೆ ಅವರ ಕಾಮತ್, ಪೈ, ಉಡುಪ, ಮೊಯಿಲಿ, ಹೆಬ್ಬಾರ್, ಶೆಣೈ, ನಾಯಕ್ ಇವುಗಳ ತಲೆಬುಡ ಅರ್ಥವಾಗದೆ 'ಮಂಗಳೂರಿನವರು' ಎಂದಾಕ್ಷಣ ಸುಮ್ಮನಾಗಿಬಿಡುತ್ತಾರೆ. ಬೇರೆಯವರನ್ನು ಜಾತಿ ಶೋಧಿಸುವವರೆಗೂ ಬಿಡರು. ಹೀಗಾಗಿ ಜಾತಿ - ಪದ್ಧತಿ ದಟ್ಟವಾಗಿರುವ ಆ ಪ್ರದೇಶದಲ್ಲಿ ಹಗಲು ಹೊತ್ತು ದಲಿತ ಆಳುಮಕ್ಕಳಿಗೆ ದೂರದಿಂದ ರೊಟ್ಟಿ ಬಿಸುಡುತ್ತಾರೆ. ಆದರೆ ಇವರಿಗೆ ಅದೇ ದಲಿತ ಹೆಣ್ಣು ಮಕ್ಕಳು ರಾತ್ರಿ ವೇಳೆ ಹತ್ತಿರದವರಾಗಬಹುದು !

ಒಮ್ಮೆ ಹೀಗಾಯಿತು. ನಾನು ಬಳ್ಳಾರಿಯ ಸಂಡೂರಿನ ಸಹಕಾರ ಸಂಸ್ಥೆಯಲ್ಲಿ ಬ್ಯಾಂಕಿನಿಂದ ಎರವಲು ಸೇವೆಯ ಮೇಲೆ 'ಮ್ಯಾನೇಜಿಂಗ್ ಡೈರೆಕ್ಟರ್' ಆಗಿದ್ದೆ. ನಮ್ಮ ಸೊಸೈಟಿಯ ಹಾಲು ಸಂಗ್ರಹಣಾ ಘಟಕದವರು ಹಾಲಿಗೆ ಹೆಚ್ಚು ನೀರು ಬೆರೆಸಿ ನಮಗೆ ವಿತರಣೆ ಮಾಡಲು ಬಂದವನನ್ನು 'ರೆಡ್ ಹ್ಯಾಂಡ್' ಹಿಡಿದು ನನ್ನ ಮುಂದೆ ಒಪ್ಪಿಸಿದರು. ಆ ಹುಡುಗನಿಗೆ ಬೆದರಿಸುತ್ತಾ 'ನೀನ್ಯಾಕೆ ಬಂದೆ, ನಿಮ್ಮವ್ವ ಏಕೆ ಬರಲಿಲ್ಲ'ವೆಂದೆ. ಆ ಹುಡುಗ ತಕ್ಷಣ ''ನಮ್ಮವ್ವ ನಿಮ್ಮುಡ ಗುದ್ದಾಡ್‌ಸ್ಕಳ್ಳಾರ್ರೆ ಬರಲಿಲ್ಲ'' ಎಂದ. ನಾನು ಅಪ್ರತಿಭನಾದೆ. ನೀರು ಹಾಕುವುದರಿಂದ ನನಗೆ ಮುಖ ತೋರಿಸಲು ಅಂಜಿ ಆಕೆ ಬರಲಿಲ್ಲ, ಬಯ್ಯಿಸಿಕೊಂಡರೆ ಹುಡುಗನೆ ಬಯ್ಯಿಸಿಕೊಳ್ಳಲಿ ಎಂದು ಹುಡುಗನನ್ನು ಕಳಿಸಿ ತಪ್ಪಿಸಿಕೊಂಡಳು ಎನ್ನುವುದಕ್ಕೆ ಆತನ ಆಡುಭಾಷೆ.

ನಾನು ದೈಹಿಕವಾಗಿ ಸಣ್ಣಗಿದ್ದು, ಸಣ್ಣವಯಸ್ಸಿನಲ್ಲೇ ಅಧಿಕಾರಿಯಾಗಿ ಅನುಭವಸ್ಥ ಹಿರಿಯ ಅಧಿಕಾರಿಗಳಿಗೂ ಕಡಿಮೆಯಿಲ್ಲದಂತೆ ಕೆಲಸ ನಿರ್ವಹಿಸುವುದಕ್ಕೆ ಅಲ್ಲಿನ ಸ್ಥಳೀಯರಿಂದ ನನಗೆ ದೊರೆತ ಬಿರಿದು, 'ನಾನು ಬೆರಕೆ' ಎಂದು ಬಾಯ್ತುಂಬ ಹೊಗಳಿದರು. ಅವರಲ್ಲಿ 'ಬೆರಕೆ' ಎಂದರೆ ಚಾಣಾಕ್ಷ, ಬುದ್ಧಿವಂತ ಎಂದು. ಅವರು ನನ್ನನ್ನು 'ಬೆರಕೆ ಸಾಹೇಬ್ರೆ' ಎಂದಾಗೆಲ್ಲಾ ಪಿತ್ತ ನೆತ್ತಿಗೇರುತ್ತಿತ್ತು. ಆದರೂ ಸಾವರಿಸಿಕೊಳ್ಳುತ್ತಿದ್ದೆ.

ರಾಯಚೂರಿನ ದೇವದುರ್ಗ ತಾಲ್ಲೂಕಿನ 'ಗಬ್ಬೂರು' ಎಂಬ ಗ್ರಾಮೀಣ ಬ್ಯಾಂಕಿನ ಶಾಖೆಯಲ್ಲಿ ಮ್ಯಾನೇಜರ್ ಆಗಿದ್ದೆ. ಆ ಊರಿನ ಸುತ್ತಮುತ್ತಲು ಕೊಲೆ (ಖೂನಿ)ಗಳು ಜಾಸ್ತಿ. ವಾರಕ್ಕೊಂದು ಸಾಮಾನ್ಯ. ಹತ್ತಿರದ ಸಬ್ ಇನ್ಸ್‌ಪೆಕ್ಟರ್ ನಮ್ಮ ಬ್ಯಾಂಕಿನ ಆವರಣಕ್ಕೆ ಅಪರಾಧಿಗಳನ್ನು ಕರೆಸಿ ವಿಚಾರಿಸುವುದು ಸರ್ವೇ ಸಾಮಾನ್ಯ. ನಾನು ಅಲ್ಲಿಗೆ ಹೋದ ಹೊಸದರಲ್ಲಿ ಈ ಕೊಲೆಗಳ ಬಗ್ಗೆ ಬಹಳ ಭೀತಿ ತುಂಬಿಕೊಂಡಿದ್ದೆ. ಅದೇ ದುಗುಡಿನಲ್ಲಿ ಕಟ್ಟು ಬಾಕಿದಾರರ ಯಾದಿಯಿಂದ ಹೆಸರನ್ನು ಹೇಳಿ ಆ ಊರಿನವರಲ್ಲಿ ವಿಚಾರಿಸಿದಾಗ 'ಅವ ಎಲ್ಲರಿಗೂ ಖೂನ್ ಇದ್ದಾನು, ಅವ್ನ ಖೂನ್ ಯಾರಿಗೆ ಗೊತ್ತಿಲ್ಲ' ಎನ್ನುತ್ತಿದ್ದರು. ನನ್ನ ಎದೆಗುಂಡಿಗೆ ಢವಢವಗುಟ್ಟುತ್ತಾ, ಮನಸಿನಲ್ಲಿ ಹಿಂದಿನ ಮ್ಯಾನೇಜರ್‌ರವರು ಇಂತಹ ಖೂನಿ (ಕೊಲೆಗಡುಕ)ಗಳಿಗೆ ಏಕೆ ಸಾಲಕೊಟ್ಟರು, ನಾನು ಹೇಗೆ ವಸೂಲಿ ಮಾಡಬೇಕೆಂದು ಚಿಂತಿಸುತ್ತಿದ್ದೆ. ಅದೇ ರೀತಿ ಊರಿನ ಗಣ್ಯರ ಬಗ್ಗೆ ವಿಚಾರಿಸಿದಾಗೆಲ್ಲಾ ಈ 'ಖೂನ್' ಟೈಟ್ಲ್ ಕೊಟ್ಟೇ ಪರಿಚಯ ಹೇಳುತ್ತಿದ್ದರು. ಅಬ್ಬಾ, ಈ ಊರಿನ ತುಂಬೆಲ್ಲಾ 'ಖೂನಿ'ಗಳೇ ತುಂಬಿದ್ದಾರೆ, ಎಂದು ಬಹಳ ಹೆದರಿದ್ದೆ. ಆದರೆ ಸ್ವಲ್ಪ ದಿನದಲ್ಲೇ ಗೊತ್ತಾಯಿತು. ಅವರೆಲ್ಲಾ 'ಗಣ್ಯ'ರೆಂದು. ಸ್ಥಳೀಯವಾಗಿ ಜನಾನುರಾಗಿಯಾಗಿರುವವರಿಗೆ 'ಎಲ್ಲರಿಗೂ ಖೂನ್' ಇರುವ ವ್ಯಕ್ತಿಯೆಂದು ನಾಮಕರಣ. ಖೂನ್ ಎಂದರೆ ಎಲ್ಲರಿಗೂ ಬೇಕಾದವನು, ಪರಿಚಯಸ್ಥ ಎಂಬ ಗುಣವಾಚಕ!

ಇದೇ ಶಾಖೆಯಲ್ಲಿ ಒಮ್ಮೆ ಒಂದು ಬ್ಯಾಚ್ ಮಾಡಿ, ದಿನಾಂಕ ಗೊತ್ತುಪಡಿಸಿ ಆ ದಿನ ಅವರು ತಪ್ಪದೆ ಬಂದು ಸಾಲ ಪಡೆಯಲು ಹೇಳಿದ್ದೆ. ಆ ದಿನ ಫೀಲ್ಡ್ ಆಫೀಸರ್ ರಜೆ ಹಾಕಿದ್ದ ಕಾರಣ, ದಿನವನ್ನು ಮುಂದೂಡದೆ ಕೊಟ್ಟಮಾತಿನಂತೆ ನಾನೇ ಮ್ಯಾನೇಜರ್ ಸೀಟ್ ತೊರೆದು ಫೀಲ್ಡ್ ಆಫೀಸರ್ ಕೊಠಡಿಯಲ್ಲಿ ಕುಳಿತು ಒಬ್ಬೊಬ್ಬರನ್ನಾಗಿ ಕರೆದು ಎಲ್ಲಾ ಸಾಲದ ಪತ್ರವನ್ನು ತುಂಬಿ ಸಹಿ ಪಡೆದು ಹಣಕೊಟ್ಟು ಕಳಿಸುವ ತವಕದಲ್ಲಿದ್ದೆ. ೧೫ ನಿಮಿಷಗಳಲ್ಲಿ ಒಬ್ಬನ ಸಾಲದ ಕೆಲಸವನ್ನು ಚುಕ್ತ ಮಾಡುವ ಹವಣಿಕೆ ನನ್ನದಾಗಿತ್ತು. ಆ ಶಾಖೆಯಲ್ಲಿ ಅದೇ ಮೊದಲಿನ ಸಾಲ ನನ್ನ ಅಧಿಕಾರದಲ್ಲಿ ಮಂಜೂರಾಗುತ್ತಿರುವ ದಿನ, ಮೊದಲಿನ ಬ್ಯಾಚ್. ಅದನ್ನು ವಿಶಿಷ್ಟವಾಗಿ ಪ್ರಾರಂಭಿಸುವ ಹುಮ್ಮಸ್ಸು, ಉತ್ಸಾಹ. ಧಾವಂತದಿಂದ ಮೊದಲನೆಯವನನ್ನು ಕರೆದೆ, ಆತನ ಪಾಸ್‌ಬುಕ್ ನಂಬರು, ಹೆಸರು ವಿಳಾಸವೆಲ್ಲವನ್ನು ಸಾಲದ ಅರ್ಜಿಯಲ್ಲಿ ಬರೆದು, ಉದ್ದೇಶದ ಕಾಲಂನಲ್ಲಿ ನಿನಗೆ ಯಾವ ಉದ್ದೇಶಕ್ಕೆ ಸಾಲ ಬೇಕೆಂದೆ. ಆತ ನಿರುಮ್ಮಳನಾಗಿ 'ಕಷ್ಟಕ್ಕೆ' ಎಂದ. ಆತನಿಗೆ ಅರ್ಥವಾಗಿಲ್ಲವೆಂದು ನಿನ್ನ ಯಾವ ಉದ್ಯೋಗಕ್ಕೆ ಎಂದು ಕೇಳಿದೆ. ಆಗಲೂ 'ಕಷ್ಟಕ್ಕಾಗಿ' ಅಂದ. ಒಳ್ಳೆ ಫಜೀತಿ ಎಂದು ನಿನ್ನ ಕಸುಬೇನೆಂದು ವಿಚಾರಿಸಿದೆ. ಆಗಲೂ 'ಕಷ್ಟ'ವೆಂದ. ನಿನ್ನ ಕೆಲಸವೇನೆಂದರೂ 'ಕಷ್ಟ'ವೆಂದ. ಅವರ ಆಡುಭಾಷೆ ಕೆಲಸಕ್ಕೆ 'ದಗ್ದ' ಏನೆಂದರೂ 'ಕಷ್ಟ'ವೆಂದ. ಈಗ ನನಗೆ ಕಷ್ಟವಾಯಿತು. ನಾನು ರೋಸಿಹೋಗಿ ಸರಿಯಾಗಿ ಹೇಳು, ಕಷ್ಟ ಎಲ್ಲಾರೂ ಮಾಡುವುದು, ಆದರೆ ಕಷ್ಟಕ್ಕೆಂದು ಸಾಲ ಮಂಜೂರುಮಾಡುವುದಿಲ್ಲವೆಂದೆ. ಆಗ ಆತ ಅಂಗಲಾಚಿ, 'ಸಾಹೇಬ್ರೆ, ನಾನು ಮಾಡುವುದು ಕಷ್ಟ, ನಮ್ಮಪ್ಪ ಮಾಡುತ್ತಿದ್ದದ್ದು ಕಷ್ಟ, ನನ್ನ ಮಗ ಮಾಡುವುದು ಕಷ್ಟ, ಇಡೀ ನನ್ನ ಪೀಳಿಗೆ ಮುತ್ತಾತನ ಕಾಲದಿಂದಲೂ ನಾವು ಕಷ್ಟಾನೇ ಮಾಡುವುದು. ನೀವು ಬಂದು ನೋಡಿದರೂ ನಾನು ಮಾಡುವುದು ಕಷ್ಟ' ಎಂದ. ನನಗೆ ಮೈ ಪರಚಿಕೊಳ್ಳುವಂತಾಯಿತು. ಆತನ ಮೇಲೆ ರೇಗಿ ಅರ್ಜಿಯನ್ನು ಹರಿದು ಹಾಕಿ, ವಾಪಸ್ಸು ಕಳಿಸಿ, ಮತ್ತೊಬ್ಬನನ್ನು ಕರೆದೆ. ಆತನೂ 'ಕಷ್ಟ' ವೆನ್ನಬೇಕೆ. ಇದನ್ನೆಲ್ಲಾ ನೋಡಿ ಮೋಜು ಸವಿಯುತ್ತಿದ್ದ ಉತ್ತರ ಕರ್ನಾಟಕದ ಸಹೋದ್ಯೋಗಿಗಳು ನಗು ತಡೆಯಲಾರದೆ ಹೇಳಿದರು. ಕಷ್ಟವೆಂದರೆ ಕ್ಷೌರಿಕ ವೃತ್ತಿ. ಅದು ಸ್ಥಳೀಯ ಶಬ್ದ. ಆ ದಿನ ಕ್ಷೌರಿಕರ ಗುಂಪಿಗೆ ಸಾಲ ನೀಡುವ ಪಾಳಿ.

ಮುಂದೆ ನಾನೇ ಕ್ಷೌರಿಕ ಶಾಪಿಗೆ ಹೋಗಿ 'ನನಗೆ ಕಷ್ಟ ಮಾಡಪ್ಪ' ಎನ್ನುವುದು ರೂಢಿಗತವಾಯಿತು.

ರಾಯಚೂರಿನ ಒಂದು ಹಳ್ಳಿಗೆ ಅಮೆರಿಕದ ವಿದ್ವಾಂಸನೊಬ್ಬ ತನ್ನ ಡಾಕ್ಟರೇಟ್ ಪದವಿ ಪ್ರಬಂಧ 'ಭಾರತದಲ್ಲಿನ ಬಡತನ'ವನ್ನು ಸ್ಥಳ ಅಧ್ಯಯನ ಮಾಡಿ ಬರೆಯಲು ಬಂದಿದ್ದ. ಆಯ್ಕೆ ಮಾಡಿದ ಹಳ್ಳಿಗೆ ರಾಯಚೂರಿನಿಂದ ದಿನಾಲೂ (ಮುಂಜಾನೆಯಲ್ಲೇ) ಹೋಗಿ ರಾತ್ರಿಗೆ ಹಿಂತಿರುಗುತ್ತಿದ್ದ. ಪ್ರಬಂಧ ಮಂಡನೆಯಾಗಿ ಅದರ ಪ್ರತಿಯೊಂದನ್ನು ರಾಯಚೂರಿನಲ್ಲಿದ್ದ ಸಂಪರ್ಕ ವ್ಯಕ್ತಿಗೆ ಕಳಿಸಿದ್ದ. ಅದರಲ್ಲಿದ್ದ ಆಶ್ಚರ್ಯವೆಂದರೆ, 'ಭಾರತದಲ್ಲಿನ ಹಳ್ಳಿಗಳಲ್ಲಿ ಬಡತನ ಎಷ್ಟು ಮಟ್ಟದಲ್ಲಿದೆ ಎಂದರೆ ತಿಂಡಿ ತಿಂದು ಎಸೆಯುವ ಪೇಪರ್ ಪ್ಲೇಟನ್ನೂ ಸಹ ಬಿಡದೆ ತಕ್ಷಣ ಎತ್ತಿಕೊಂಡು ತಿಂದುಬಿಡುತ್ತಾರೆ. ಅದಕ್ಕೆ ಪೈಪೋಟಿ ನಡೆಯುತ್ತದೆ. ಇದನ್ನು ನಾನು ಕಣ್ಣಾರೆ ಕಂಡು ಸ್ವ ಅನುಭವ ಹೊಂದಿದ್ದೇನೆ. ನಾನು ಎಸೆಯುವ ಅಂತಹ ಪ್ಲೇಟಿಗೆ ಊರಿನ ಹುಡುಗರು ಕಾದು ನಿಂತಿರುತ್ತಿದ್ದರು. ನಾನು ಎಸೆದಾಕ್ಷಣ ಗಬಕ್ಕೆಂದು ಎತ್ತಿ ತಿನ್ನುತ್ತಿದ್ದರೆಂದು' ದಾಖಲಿಸಿದ್ದ. ಇದೇನೆಂದು ವಿಚಾರಿಸಲಾಗಿ, ಬೆಳಿಗಿನ ಹೊತ್ತು 'ದಗ್ದ'ಕ್ಕೆ ಹೋಗುವ ಮೊದಲು ಮನೆ ಮುಂದೆ ಬೀದಿಗೆ ಕಾಣುವಂತೆ ಕುಕ್ಕರಗಾಲಿನಲ್ಲಿ ಕುಳಿತು ಹಳ್ಳಿಗರು ಬರಿಗೈಯಲ್ಲಿ ರೊಟ್ಟಿ ಹಿಡಿದು ಮೇಲೆ ಪುಂಡಿಪಲ್ಯ, ಗುರೆಳ್ಳು (ಹುಚ್ಚೆಳ್ಳು ಪುಡಿ). ಶೇಂಗಾಪುಡಿ. ಅದಕ್ಕೆಲ್ಲಾ ಒಂದಿಷ್ಟು ಮೊಸರನ್ನ ಕಲಿಸಿ ತಿನ್ನುವುದು ಸಾಮಾನ್ಯ. ಅದೇ ರೀತಿ ಈ ವಿದೇಶಿ ಕುಳಿತು, ಅವರು ತಿನ್ನುವುದನ್ನು ತೋರಿಸಿ ತನಗೂ ನೀಡಲು ಕೇಳುತ್ತಿದ್ದನಂತೆ. ಬೀದಿ ಬೀದಿಯಲ್ಲಿ ಮನೆ ಮುಂದೆ ಕುಳಿತ ವಿದೇಶಿಯನಿಗೆ ರೊಟ್ಟಿ ನೀಡಿ ಅದರ ಮೇಲೆ ಪಲ್ಯೆಗಳನ್ನು ಬಡಿಸಿ ಹೆಣ್ಣುಮಕ್ಕಳು ಸಂಕೋಚದಿಂದ ಮನೆಯೊಳಗೆ ಹೊರಟು ಹೋಗುತ್ತಿದ್ದರು. ಈತ ರೊಟ್ಟಿ ಮೇಲಿರುವ ಪಲ್ಯೆಯನ್ನಷ್ಟೇ ತಿಂದು ಮುಗಿಸಿ ಮುಖ-ಮೂತಿ ಕೆಂಪಗೆ ಮಾಡಿಕೊಂಡು, ಕಣ್ಣು ಮೂಗಿನಲ್ಲಿ ನೀರಿಳಿಸುತ್ತಾ ಹಿಡಿದುಕೊಂಡ ರೊಟ್ಟಿಯನ್ನು ಹೊರಗೆ ಎಸೆಯುತ್ತಿದ್ದನಂತೆ. ಆತನ ವಿಚಿತ್ರ ವೇಷ ಭೂಷಣಕ್ಕೆ ಆಕರ್ಷಿತರಾದ ಹುಡುಗರು ಆತನ ಹತ್ತಿರಕ್ಕೆ ಬಂದು ನಿಲ್ಲುತ್ತಿದ್ದರಂತೆ. ಆಗ ಈತ ಎಸೆದ ಆ ರೊಟ್ಟಿಯನ್ನು ಹಿಡಿದು ತಿನ್ನುತ್ತಿದ್ದರು. ಆಗ ಆ ವಿದೇಶಿ ಇನ್ನೊಂದನ್ನು ಕೇಳಿ ಮನೆಯವರಿಂದ ಪಡೆದು ರೊಟ್ಟಿ ಮೇಲಿನ ಪಲ್ಯವನ್ನಷ್ಟೇ ತಿಂದು, ರೊಟ್ಟಿಯನ್ನು ಪೇಪರ್ ಪ್ಲೇಟೆಂದು ಎಸೆದು ಬಿಡುತ್ತಿದ್ದನಂತೆ ! ಕೊನೆಗೂ ಆತನಿಗೆ ಅದು ತಿನ್ನುವ ರೊಟ್ಟಿ ಎಂದು ಗೊತ್ತಾಗಲೇ ಇಲ್ಲವಂತೆ.




ನಮ್ಮ ರಾಗಿ ಮುದ್ದೆಯನ್ನು ಕರಿ ಸಗಣಿ ಉಂಡೆಯೆನ್ನುತ್ತಿದ್ದರು. ನಾನು ಮದುವೆಯಾಗಿ ಸಂಸಾರ ಹೂಡಿದ ಮೇಲೆ ಸ್ಥಳೀಯ ಡಾಕ್ಟರ್ ಮತ್ತು ಇಂಜಿನಿಯರ್ ಈರ್ವರನ್ನು ಅವರು ಅಪೇಕ್ಷಪಟ್ಟಂತೆ ಮುದ್ದೆ ಊಟಕ್ಕೆ ಆಹ್ವಾನಿಸಿದ್ದೆ. ಮುದ್ದೆ ಚೆಕ್ಕೆಯನ್ನು ಒತ್ತುಕೊಟ್ಟು ಮುದ್ದೆ ಒಂದುಕಡೆ, ಸಾರು ಒಂದು ಕಡೆ ಮಾಡಿ ಬಡಿಸಿದ್ದೇ ಒಂದು ವಿಚಿತ್ರವಾಗಿ ಅವರಿಗೆ ಕಂಡಿತು. ಇನ್ನು ತಿನ್ನಲು ಪ್ರಾರಂಭಿಸಿದಾಗ ಅವರ ಪಡಿಪಾಟಲು ಅಷ್ಟಿಷ್ಟಲ್ಲ. ರೊಟ್ಟಿಯಂತೆ ಅಗಿಯಲು ಹೋಗಿ ದವಡೆ, ಅಂಗಳು ಎಲ್ಲಾ ಅಂಟಿಕೊಂಡುಬಿಟ್ಟಿದೆ, ಬಿಡಿಸಿ ಬನ್ನಿ, ಎಂದು ಬೊಬ್ಬೆಯಿಟ್ಟರು. ಎಷ್ಟು ಹೇಳಿ ನುಂಗಬೇಕು, ತಿನ್ನಬಾರದೆಂದರೂ ಅವರ ಸರ್ವ ಪ್ರಯತ್ನಕ್ಕೆ ಯಶಸ್ಸು ದೊರೆಯಲೇ ಇಲ್ಲ. ಬೇಕಾದರೆ ಎಡ್ಮಂಡ ಹಿಲೇರಿ, ತೇನ್‌ಸಿಂಗ್‌ರಂತೆ ಗೌರಿಶಿಖರವೇರಿ ಬಂದೇವು, ಈ ಮುದ್ದೆಯನ್ನು ಉಂಡೆ ಮಾಡಿ ನುಂಗಲು ಅಸಾಧ್ಯವೆಂದು ಘೋಷಿಸಿಬಿಟ್ಟರು. ಮುದ್ದೆ ತೆಗೆಸಿ, ತಟ್ಟೆ ಬದಲಾಯಿಸಿ ಅನ್ನ ಸಾರು, ಪಲ್ಯೆ ಬಡಿಸಿ ಉಣ್ಣಿಸಿ ಸಾಗಹಾಕಬೇಕಾಯಿತು. ಆದರೆ ಇತ್ತೀಚಿನ ದಿನಗಳಲ್ಲಿ ವೈದ್ಯಕೀಯ ಸಲಹೆ ಮೇರೆಗೆ ರಾಗಿ ಮುದ್ದೆ ಉಪಯೋಗಿಸಲು ಶುರು ಮಾಡಿದ್ದಾರೆ.

ಇಪ್ಪತ್ತೈದು ವರ್ಷಗಳ ಹಿಂದೆ ಅಲ್ಲಿ ಎಳನೀರು ಸಿಗುತ್ತಿರಲಿಲ್ಲ. ತೆಂಗಿನ ಮರಗಳೇ ಕಾಣಸಿಗುತ್ತಿರಲಿಲ್ಲ. ಒಕ್ಕರು ಎಳನೀರಿಗೆ 'ತೆಂಗಿನ ಹಾಲು' ಎಂದು ಕರೆದು ಅದನ್ನು ಕೊಚ್ಚಲು ಬಾರದೆ ಕತ್ತಿಯಿಂದ ಒಂದೇ ಕಡೆ ನೀರು ಬರುವವರೆಗೂ ಕೆತ್ತುತ್ತಿದ್ದರು. ಅದನ್ನು ಕುಡಿಯುವುದೇ ಗೊತ್ತಿರಲಿಲ್ಲ, ಈಗ ಎಲ್ಲಾ ಕಡೆ ಸಿಗುತ್ತದೆ. ಅದರಂತೆ ಕಲ್ಲಂಗಡಿ. ಹಲಸಿನ ಹಣ್ಣು ಗೊತ್ತಿರಲಿಲ್ಲ, ಈಗ ಬಳಕೆಗೆ ಬರುತ್ತಿವೆ. ನುಗ್ಗೆಕಾಯಿ, ಸೊಪ್ಪು ತಿನ್ನುವುದು ಗೊತ್ತಿಲ್ಲದೆ ದನಗಳಿಗೆ ಕಡಿದು ಹಾಕುತ್ತಿದ್ದರು. ಬಾಳೆ ತೊಳೆ (ಹಲಸಿನ ಹಣ್ಣು) ತಿನ್ನಲು ಗೊತ್ತಿಲ್ಲದೆ, ಹಳೇ ಮೈಸೂರಿನವರು ಅದನ್ನು ತಿನ್ನುವುದನ್ನು ಹೇಳಿ ಕೊಟ್ಟಿದ್ದಾರೆ. ಅದರಂತೆ ಅವರ ಪುಂಡಿ ಸೊಪ್ಪು, ಹೊಲದಲ್ಲಿ ಬೆಳೆಯುವ ಕರ್ಚಿಕಾಯಿ. ಶಾವಿಗೆ ಪಲ್ಲೆ (ಸೊಪ್ಪು), ಚವುಳೆಕಾಯಿ ನಮಗೆ ಗೊತ್ತಿರಲಿಲ್ಲ. ಅವರಿಂದ ಕಲಿತಿದ್ದೇವೆ. ಅವರ ಹುಣಿಸೆ ಚಟ್ನಿ ವರ್ಷಕ್ಕಿಡೀ ಆಗುವಷ್ಟು ನಾವು ಮಾಡಿಕೊಳ್ಳುತ್ತಿದ್ದೇವೆ. ಅವರ ರೊಟ್ಟಿ ಊಟದ ರುಚಿ ನಾಲಿಗೆಗೆ ಹಿಡಿಸಿದೆ. ನಿವೃತ್ತಿ ನಂತರ ಅವರ ರೊಟ್ಟಿ ಊಟ ತಪ್ಪುವುದೆಂಬ ಚಿಂತೆ ಕಾಡುತ್ತಿದೆ. ಖಾರ ಖಾರವಾಗಿ ತಿಂದ ನಾಲಿಗೆಗೆ ಈಗ ನಮ್ಮ ಹಳೇ ಮೈಸೂರಿನ ಊಟವೇ ಸಪ್ಪೆಯಾಗಿ ಕಾಣುತ್ತಿದೆ.

ಆ ಗಂಡು ಮೆಟ್ಟಿನ ಸೀಮೆಯ 'ಬಿಸಿಲ ಬದುಕು' ಸಹ್ಯವಾಗಿ, ಬೆಂಗಳೂರಿನ ಬಿಸಿಲು ನೀರಸವಾಗುತ್ತಿದೆ. ಎಷ್ಟೇ ಆದರೂ, ನಾವು ಮುದ್ದೆ ಮರೆತಿಲ್ಲ. ರೊಟ್ಟಿ ಬಡಿಯುವುದನ್ನು ಕಲಿತಿಲ್ಲ. ಇದೊಂದೆ ಅಂತರ ಉಳಿದಂತೆ ಸಾಮೀಪ್ಯ-ಸಾಮ್ಯತೆ ಕಂಡುಬರುತ್ತಿವೆ. ಪ್ರಾದೇಶಿಕ ವಿಭಿನ್ನತೆ ಮರೆತು ಶಿಕ್ಷಣ ಸಂಬಂಧ, ವಿವಾಹ ಸಂಬಂಧಗಳು ಏರ್ಪಡುತ್ತಿವೆ. ಇವು ಸ್ವಾಗತಾರ್ಹ ಲಕ್ಷಣಗಳು.

ವೆಂಕಟಯ್ಯ ಅಪ್ಪಗೆರೆ

# ನಾನು ಅಮೆರಿಕೆಯ ಬೇಹುಗಾರಳಾಗಬೇಕೆ?

*ಪ್ರಪಂಚಕ್ಕೆ ಮಾದರಿ ರಾಷ್ಟ್ರವೆಂದರೆ ಅಮೆರಿಕಾ ಎಂಬ ಪ್ರತೀತಿ ವಿಪುಲವಾಗಿ ಹಬ್ಬಿದೆ. ಪ್ರಜಾಪ್ರಭುತ್ವಕ್ಕೆ ಅಡಿಗಲ್ಲೆಂಬ ರೀತಿಯಲ್ಲಿ ಆ ದೇಶವನ್ನು ಉದಾಹರಿಸಲಾಗುತ್ತದೆ. ಅಲ್ಲಿನ ಸಂಪತ್ತಿನ ಶೇಖರಣೆ ಬಗ್ಗೆ ಆಳವಾದ ಅಧ್ಯಯನಗಳು ಪ್ರಕಟವಾಗುವುದು ಕಡಿಮೆ. ೨೫ ವಯಸ್ಸಿನ ಭಾರತದ ಯುವತಿಯೊಬ್ಬರು ಅಮೆರಿಕಾದ ಅತಿಥಿಯಾಗಿ ತೆರಳಿ, ತಾವು ಪಡೆದ ಅನುಭವ ಮತ್ತು ತಿಳುವಳಿಕೆಯನ್ನು 'ಹೊಸತು'ವಿಗಾಗಿಯೇ ಬರೆದ ಈ ಲೇಖನದಲ್ಲಿ ಹಂಚಿಕೊಂಡಿದ್ದಾರೆ. ಅವರ ಲೇಖನವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದವರು ಡಾ|| ಎನ್. ಗಾಯತ್ರಿ. ಲೇಖಕಿ ತನು ಮುಂಬೈಯಲ್ಲಿ ವಕೀಲರಾಗಿದ್ದಾರೆ. ಹಲವು ಸಂಘಟನೆಗಳಲ್ಲಿ ಸಕ್ರಿಯ ಕಾರ್ಯಕರ್ತೆ ಆಗಿದ್ದಾರೆ.*

'ನ್ಯಾಯಾಂಗದ ಸುಧಾರಣೆಯಲ್ಲಿ ಸರ್ಕಾರೇತರ ಸಂಸ್ಥೆಗಳ ಪ್ರಸ್ತಾವ'ವನ್ನು ಕುರಿತ ಒಂದು ಕಾರ್ಯಕ್ರಮದ ಅಂಗವಾಗಿ ನನಗೆ ಅಮೆರಿಕಾ ಯಾತ್ರೆಯ ಅವಕಾಶ ಒದಗಿ ಬಂತು. ೧೯೯೯ರ ಆಗಸ್ಟ್ ೧೪ರಿಂದ ಸೆಪ್ಟೆಂಬರ್ ೪ರ ವರೆಗಿನ ಅವಧಿಯ ಈ ಅಮೆರಿಕಾ ಯಾತ್ರೆಯನ್ನು ಡೆಲ್ಫಿ ಇಂಟರ್‌ನ್ಯಾಷನಲ್ ಸಂಸ್ಥೆ ಸಂಪೂರ್ಣವಾಗಿ ಪ್ರಾಯೋಜಿಸಿತ್ತು. ಅವರಿಗೆ ಅಮೆರಿಕಾ ಸಂಯುಕ್ತ ಸಂಸ್ಥಾನದ ವಾರ್ತಾ ಏಜೆನ್ಸಿಯು ಧನಸಹಾಯ ನೀಡಿತ್ತು. (ಈ ಏಜೆನ್ಸಿಯು ಜಗತ್ತಿನೆಲ್ಲೆಡೆ ಅಮೆರಿಕಾ ಸರ್ಕಾರದ ವಾರ್ತಾ ಸಂಸ್ಥೆಯು ನಡೆಸುವ ಕೇಂದ್ರಗಳ ಮಾತೃ ಸಂಸ್ಥೆಯಾಗಿದೆ).

ಡೆಲ್ಫಿ ಇಂಟರ್‌ನ್ಯಾಷನಲ್ ಎಂಬುದು ತನ್ನ ತಿಳುವಳಿಕೆ ಪತ್ರದಲ್ಲಿ ಹೇಳಿಕೊಂಡಿರುವಂತೆ ''ಇಂದಿನ ಜಗತ್ತಿನ ತುರ್ತು ಸವಾಲುಗಳನ್ನು ಎದುರಿಸಲು ಜಾಗತಿಕ ಸಹಕಾರ ಮತ್ತು ಸೌಹಾರ್ದಕ್ಕಾಗಿ ರೂಪುಗೊಂಡ ಸಂಸ್ಥೆ.'' ಮಾನವ ಸಮುದಾಯದ ಪರಿಧಿಯನ್ನು ವಿಸ್ತರಿಸಲು 'ಪ್ರಜಾನೇತಾರ'ರನ್ನು ಒಟ್ಟಿಗೆ ಕಲೆಹಾಕಿ, ಅವರಲ್ಲಿ ಆತ್ಮ ಗೌರವ, ಒಗ್ಗಟ್ಟು, ಪರಸ್ಪರ ಸೌಹಾರ್ದತೆ ಮೂಡಿಸಿ, ಸಮುದಾಯದ ವೃತ್ತವನ್ನು 'ವಿಸ್ತರಿಸುವ' ಉದ್ದೇಶ ಹೊಂದಿದೆ. ಆದ್ದರಿಂದಲೇ ನಮ್ಮ ಕಾರ್ಯಕ್ರಮದ ಸಂಘಟಕರು ಡೆಲ್ಫಿ. ಈ ಸಂಸ್ಥೆಯನ್ನು ಅಮೆರಿಕಾ ಸರ್ಕಾರವು ತನ್ನ 'ಆದರ್ಶ' ಧ್ಯೇಯಗಳ ಸಾಧನೆಗಾಗಿ ಹಣ ಸುರಿದು ಪ್ರಾಯೋಜಿಸುತ್ತಿದೆ. ಅಮೆರಿಕಾ ತಲುಪಿದ ನಂತರ ಅಲ್ಲಿನ ವಿಮಾನ ನಿಲ್ದಾಣದಲ್ಲಿ ಆಗಂತುಕರ ಕೌಂಟರ್‌ನಲ್ಲಿ ನಿಂತಿದ್ದಾಗ ನಮ್ಮ ಒಟ್ಟು ಪ್ರವಾಸದ ವೆಚ್ಚ ಎಷ್ಟಿರಬಹುದು ಎಂಬುದರ ಕಲ್ಪನೆ ನಮಗೆ ಬಂತು. ವೀಸಾ ಬಿಡುಗಡೆ ಮಾಡುವ ಅಧಿಕಾರಿಗಳಿಗೆ ಕೊಡಲೆಂದು ನಮಗೆ ಕೊಟ್ಟಿದ್ದ ಮುಚ್ಚಿದ ಲಕೋಟೆಯ ಮೇಲೆ ಬರೆದಿತ್ತು 'ಪ್ರಾಯೋಜಿತ ಹಣ' ಎಂದು. ಅದು ನಮ್ಮ ದೇಶದ ಹಣದ ಲೆಕ್ಕದಲ್ಲಿ ಸುಮಾರು ನಾಲ್ಕೂವರೆ ಲಕ್ಷ ರೂಪಾಯಿಗಳು.

ನನಗೆ ಮತ್ತು ನನ್ನೊಡನೆ ಬಂದಿದ್ದ ನನ್ನ ಐದು ಸಹ ಪ್ರಯಾಣಿಕರಿಗೆ ವಿದೇಶೀ ಸರ್ಕಾರವೊಂದು ಅಷ್ಟೊಂದು ಹಣ ಸುರಿಯುವ ಅವಶ್ಯಕತೆಯಾದರೂ ಏನಿರಬಹುದೆಂದು ಅಚ್ಚರಿ ತಂದಿತ್ತು. ಭಾರತದ ಆರು ಜನ ಅಪರಿಚಿತರಿಗೆ ಸಂಬಳ ಸಹಿತ ರಜೆ ಅನುಭವಿಸುವ ಅವಕಾಶವೊದಗಿತ್ತು. ಈ ಸಂದರ್ಭದಲ್ಲಿ ಈ ಪ್ರವಾಸಕ್ಕೆ ನಾನು ಆಯ್ಕೆಯಾದದ್ದಾದರೂ ಹೇಗೆ ಎಂಬುದನ್ನು ನಿಮಗೆ ತಿಳಿಸುತ್ತೇನೆ. ಮೊದಲು ನನಗೆ ಮುಂಬೈಯಿಯ ಅಸಿಸ್ಟೆಂಟ್ ಸಾಲಿಸಿಟರ್ ಜನರಲ್‌ರವರ ಶಿಫಾರಸ್ಸಿತ್ತು. ಅಮೆರಿಕಾ ಸರ್ಕಾರದ ವಾರ್ತಾ ಸಂಸ್ಥೆಯ ಅಧಿಕಾರಿಗಳೊಂದಿಗೆ ಸಂದರ್ಶನ ನಡೆದ ನಂತರ ಭಾರತದಲ್ಲಿನ ಅಮೆರಿಕಾದ ರಾಯಭಾರಿ ನನ್ನನ್ನು ಆಯ್ಕೆ ಮಾಡಿದ್ದರು.

ಈ ಒಟ್ಟು ಪ್ರವಾಸ ಒಂದು 'ಸಂಬಳ ಸಹಿತ ರಜೆ' ಎಂದು ಏಕೆ ಹೇಳಿದೆನೆಂದರೆ, ಈ ಒಟ್ಟು ಪ್ರವಾಸ ಮಾಡಿದ್ದಕ್ಕಾಗಿ ನಾನು ಮಾಡಬೇಕಾದ್ದು ಏನೂ ಇರಲಿಲ್ಲ.



ಪೆನ್ಸಿಲ್ವೇನಿಯಾದ ಫಿಲೆಡೆಲ್ಫಿಯಾದಲ್ಲಿರುವ ಸರ್ವೋಚ್ಚ ನ್ಯಾಯಾಲಯದ ಪೀಠ

ಅಲ್ಲಿ ಹೋಗಿ ನಾವು ಯಾರೂ ಪ್ರಬಂಧ ಮಂಡಿಸಬೇಕಿರಲಿಲ್ಲ. ಇಲ್ಲಿ ಬಂದ ನಂತರ ಯಾರೊಡನೆಯೂ ಯಾವುದೇ ಚರ್ಚೆ, ಸಂವಾದದಲ್ಲಿ ತೊಡಗಬೇಕಿರಲಿಲ್ಲ. ಅಲ್ಲಿ ನಾವು ಹೋದದ್ದಕ್ಕೂ ಯಾವುದೇ ಪ್ರಚಾರವಾಗಲಿ, ಅಲ್ಲಿನ ಯಾವುದೇ ಸಂಘಟನೆಗಳೊಂದಿಗೆ ಸಂಪರ್ಕವಾಗಲಿ, ಎಂಥದೂ ನಡೆಯಲಿಲ್ಲ. ಸುಮ್ಮನೆ ಹೋದೆವು, ಸಾಕಷ್ಟು ಸುತ್ತಾಡಿ ಹಲವು ಅನುಭವಗಳನ್ನು ಪಡೆದು ಮರಳಿ ಬಂದೆವು. ಬಂದು ಏನೂ ನಡೆದಿಲ್ಲದಂತೆ ನಮ್ಮ ಎಂದಿನ ಕಾರ್ಯಕಲಾಪದಲ್ಲಿ ತೊಡಗಿಕೊಂಡೆವು. ಆದರೆ ಈಗ ಅಮೆರಿಕಾ ವಾರ್ತಾ ಸಂಸ್ಥೆಯು ಹೊರಡಿಸುವ ವಾರ್ತಾ ಪತ್ರಗಳು, ಆಹ್ವಾನ ಪತ್ರಗಳು ನಮಗೆ ಬರತೊಡಗಿವೆ. ನಾನದರ ಸದಸ್ಯೆಯಾಗಿದ್ದರೆ ಹೇಗೂ ಇವೆಲ್ಲಾ ನನಗೆ ಬರುತ್ತಿದ್ದವು. ಆದರೂ ಅಧಿಕೃತವಾಗಿ ನಾನೀಗ ಅಮೆರಿಕಾದ ''ಸ್ನೇಹಿತೆ.'' ಅವರ ಜೆ-೧ ಸಂದರ್ಶಕರ ಪಟ್ಟಿಯಲ್ಲಿ ಸೇರಲ್ಪಟ್ಟವಳು ಮತ್ತು ಆ ಸರ್ಕಾರದ ಕೃಪಾಪೋಷಿತ ಅಂಗಸಂಸ್ಥೆಯ ಯಾವುದಾದರೂ ಪಟ್ಟಿಯಲ್ಲಿ ಕಾಯಂ ಆಗಿ ಇರುವವಳು.

ಈಗ ಅಮೆರಿಕಾ ಕುರಿತ ನನ್ನ ತಿಳುವಳಿಕೆಯಾದರೂ ಏನೆಂದು ತಿಳಿಯೋಣ. ಅಮೆರಿಕಾ ಒಂದು ''ಸಮಾಜವಾದಿ ಪ್ರಜಾಪ್ರಭುತ್ವ'' ರಾಷ್ಟ್ರವೆಂದು ಹೇಳಬಹುದು. ಅಂದರೆ ಸಮಾಜ ಕಲ್ಯಾಣಕ್ಕೆ ಅಲ್ಲಿನ ಸರ್ಕಾರ ಬದ್ಧವಾಗಿದೆ. ಉತ್ಪಾದನೆ, ವಿತರಣೆ, ಇತ್ಯಾದಿಗಳು ಸರ್ಕಾರದ ಅಧೀನದಲ್ಲಿದೆ ಎಂಬರ್ಥದಲ್ಲಿ ಅಮೆರಿಕಾ ಸಮಾಜವಾದಿ ದೇಶವಲ್ಲ. ಅದು ತನ್ನ ದೇಶದ ರಕ್ಷಣೆ ಮತ್ತು ಬಂಡವಾಳಶಾಹಿಯ ವೈಭವೀಕರಣವನ್ನು ನಡೆಸುವ ವೈಖರಿಯನ್ನು ಗಮನಿಸಿದರೆ ಸಮಾಜ ಕಲ್ಯಾಣಕ್ಕೆ ಸರ್ಕಾರವು ಬದ್ಧವಾಗಿದೆಯೆಂಬ ಮಾತು ನಿಜವೆನಿಸಬಹುದು. ಆ ದೇಶ ತನ್ನ ಪ್ರಜೆಗಳನ್ನು ನೋಡುವ ದೃಷ್ಟಿಕೋನದಲ್ಲೂ ಈ ಭಾವನೆ ನಿಜ ಎನಿಸಿಕೊಳ್ಳಬಹುದು. ಅಪ್ಪಟ ಅಮೆರಿಕನ್ನರಿಗೆ ನನ್ನ ಈ ಮಾತು ಅರ್ಥವಾಗದಿರಬಹುದು. ಆದರೆ ಬಹುಪಾಲು ಅಮೆರಿಕನ್ನರು ಅವರ ದೇಶ ಹೇಳುವುದನ್ನೆಲ್ಲಾ ಸುಮ್ಮನೆ ಹಾಗೇ ನಂಬುತ್ತಾರೆ. ವಿದ್ಯಾವಂತರೂ ಇದಕ್ಕೆ ಹೊರತಲ್ಲ.

ಅಮೆರಿಕೆಯ ನ್ಯಾಯಾಂಗ ವ್ಯವಸ್ಥೆ ಅಲ್ಲಿನ ಜನರ ಮೂಲಭೂತ ಅಗತ್ಯಗಳ ಪೂರೈಕೆಯತ್ತ ಗಮನ ಕೊಡುತ್ತದೆ: ಶೀಘ್ರನ್ಯಾಯ, ವ್ಯಾಜ್ಯ ಪರಿಹಾರಕ್ಕಾಗಿ ಪರ್ಯಾಯ ವಿಧಾನಗಳು, ಜವಾಬ್ದಾರಿಕೆಯನ್ನು ಅಂಗೀಕರಿಸುವುದು, ಪರಿಹಾರ ಧನದ ನೀಡಿಕೆ, ಇತ್ಯಾದಿ. ಒಂದು ಸಮರ್ಥ ನ್ಯಾಯಾಂಗ ವ್ಯವಸ್ಥೆಯು ಸಮುದಾಯದ ಸಮಸ್ಯೆಗಳನ್ನು ಮತ್ತು ಸಾಮಾಜಿಕವಾಗಿ ಉಲ್ಬಣಗೊಳ್ಳುವ ಸಮಸ್ಯೆಗಳನ್ನು ಮೊಳಕೆಯಲ್ಲೇ [illegible] ವನ್ನು ಮೂಡಿಸುವಲ್ಲಿ ಹೆಚ್ಚು ಕೇಂದ್ರೀಕೃತವಾಗಿ ಕೆಲಸ ಮಾಡುತ್ತದೆ (ಒಪ್ಪಿಗೆಯು ಗುಣಾತ್ಮಕ/ನೇತ್ಯಾತ್ಮಕ ಮತಗಳದ್ದಾಗಿರಬಹುದು). ಅವರ ಆಯವ್ಯಯದ ಹಂಚಿಕೆಯ ಸಂದರ್ಭದಲ್ಲೂ ಜನಾಭಿಪ್ರಾಯವನ್ನು [illegible]

ತನು ಮೆಹ್ತಾ ತಿವಾರಿ

ರಸ್ತೆ ನಿರ್ವಹಣಾ ತೆರಿಗೆಯನ್ನು ಹೆಚ್ಚು ಮಾಡಬೇಕೆಂದಾಗಲೂ ಅದಕ್ಕೆ ಜನರ ಮತಗಳು ಬೇಕು. ಹೀಗಾಗಿ ಅಮೆರಿಕಾದಲ್ಲಿ ನೇರ ಪ್ರಜಾಪ್ರಭುತ್ವದ ವ್ಯವಸ್ಥೆಯಿದೆ. ಉದಾಹರಣೆಗೆ, ಕ್ಯಾಲಿಫೋರ್ನಿಯಾದಲ್ಲಿ ಯಾವುದೇ ೧೫೦ ಮಂದಿ ನಾಗರಿಕರು ಸಹಿ ಮಾಡಿ ಒಂದು ಕಾನೂನನ್ನು ಜಾರಿಗೊಳಿಸಲು ಕೇಳಿಕೊಂಡರೆ, ಆಗ ಆ ಬೇಡಿಕೆಯನ್ನು ಪರಿಷ್ಕರಿಸಿದ ಸರ್ಕಾರವು ಅಗತ್ಯ ಕಂಡು ಬಂದರೆ ಅದನ್ನು ಮತಕ್ಕೆ ಹಾಕಿ, ಅಲ್ಲಿ ಬಹುಮತಗಳು ಬಂದರೆ ಆ ಅಹವಾಲು ಒಂದು ಕಾಯಿದೆಯಾಗುತ್ತದೆ. (ನಮ್ಮ ಪ್ರಸಕ್ತ ಸಂದರ್ಭದಲ್ಲಿ ಒಂದು ಉದಾಹರಣೆ ನೀಡುವುದಾದರೆ, ಮಹಾರಾಷ್ಟ್ರ ಸರ್ಕಾರಕ್ಕೆ ನೀಡಲಾಗಿರುವ ಶ್ರೀಕೃಷ್ಣ ಆಯೋಗದ ವರದಿಯಂತಹ ಸಂಗತಿಗಳಲ್ಲಿ ಅಲ್ಲಿ ಹೆಸರಿಸಲಾಗಿರುವ ಅಪರಾಧಿಗೆ ಶಿಕ್ಷೆಯಾಗಬೇಕೆನಿಸಿದರೆ ಪ್ರಜೆಗಳೇ ನಿರ್ಧಾರ ತೆಗೆದುಕೊಳ್ಳುವಂತಹುದು). ಆದ್ದರಿಂದ ಇಲ್ಲಿನ ವ್ಯವಸ್ಥೆ ಜನಸಮುದಾಯದ ಅಭಿಲಾಷೆಗಳನ್ನು ಮತ್ತು ಭಾವನೆಗಳನ್ನು ಗಂಭೀರವಾಗಿ ಪರಿಗಣಿಸುವುದರಿಂದ 'ಪ್ರಜಾಪ್ರಭುತ್ವ'ವೆನ್ನುವುದು ಒಂದು 'ದೊಡ್ಡ ಪದ'ವಾಗಿ ಕಾಣಿಸುತ್ತದೆ.

ಇದೇನೋ ಕುತೂಹಲಕರವಾಗಿ ಕಾಣುತ್ತದೆ. ಆದರೆ ವ್ಯಾವಹಾರಿಕವಾಗಿ ನೋಡಿದರೆ ಇದು ಅಷ್ಟು ಪ್ರಭಾವಶಾಲಿಯಲ್ಲವೇನೋ ಎನಿಸುತ್ತದೆ. ಪ್ರಜಾಪ್ರಭುತ್ವದಲ್ಲಿ 'ಆಯ್ಕೆ'ಗೆ ಆಧಾರ ನಮಗೆ ದೊರೆಯುವ ಮಾಹಿತಿಯನ್ನು ಅವಲಂಬಿಸಿರುತ್ತದೆ. ನಮ್ಮ ''ಮಾಹಿತಿ''ಯನ್ನು ಮಾರುಕಟ್ಟೆಯ ಶಕ್ತಿಗಳು ನಿಯಂತ್ರಿಸುತ್ತಿದ್ದರೆ ಅದರ ಫಲಿತಾಂಶ ಏನಾಗಬಹುದೆಂದು ನೀವೇ ಊಹಿಸಿ. ಪತ್ರಿಕೆಗಳು, ದೂರದರ್ಶನ ಮತ್ತು ಇತರೆಲ್ಲಾ ಪ್ರಸಾರ ಮಾಧ್ಯಮಗಳು ದೊಡ್ಡ ದೊಡ್ಡ ಬಂಡವಾಳಿಗರ, ಅಧಿಕಾರದ ಸೂತ್ರ ಹಿಡಿದವರ ನಿಯಂತ್ರಣದಲ್ಲಿರುತ್ತವೆ. ಅವರ ಮುಖ್ಯ ಧ್ಯೇಯ ಅವರದೇ ನಂಬಿಕೆಗಳನ್ನು ಪ್ರಚಾರ ಮಾಡುವುದಾಗಿರುತ್ತದೆ. ಆದ್ದರಿಂದ ಇಂತಹ ವಾತಾವರಣದಲ್ಲಿ 'ಕಾನೂನು' ಜನತೆಯ ಕೈಯಲ್ಲಿ ಇದೆಯೆಂಬಂತೆ ಕಂಡರೂ, ಜನರು ಬಂದೂಕು ಮಾರಾಟ, ಸಿಗರೇಟು ಉದ್ದಿಮೆ ಮತ್ತು ಇಂತಹ ಪ್ರಮುಖ ವಿಷಯಗಳನ್ನು ಕುರಿತಂತೆ ಏನೂ ಮಾಡಲು ಸಾಧ್ಯವಿಲ್ಲ. ಅವನ್ನು ನಿಯಂತ್ರಿಸುವವರು ಭಾರಿ ಉದ್ದಿಮೆದಾರರೇ ಆಗಿರುತ್ತಾರೆ.

ಈಗ ಅಮೆರಿಕೆಯ 'ಸಮಾಜವಾದ' ಕುರಿತು ಒಂದು ಮಾತು: ತನ್ನ ಪ್ರಜೆಗಳ ಹಿತವನ್ನು ಅಮೆರಿಕಾ ಕಾಯುತ್ತದೆ. ಅವರ ವೈದ್ಯಕೀಯ ಅಗತ್ಯಗಳನ್ನು ತಕ್ಷಣ ನೋಡಿಕೊಳ್ಳುತ್ತದೆ. (ವೈದ್ಯಕೀಯ ನೆರವಿನ ಅಗತ್ಯವಿರುವ ಮನುಷ್ಯನಿಗೆ, ಅವನಲ್ಲಿ ಹಣವಿರಲಿ ಇಲ್ಲದಿರಲಿ ಯಾವುದೇ ಆಸ್ಪತ್ರೆಯಲ್ಲಿ ಸೇವೆಯನ್ನು ನಿರಾಕರಿಸಬಾರದೆಂಬ ಕಾನೂನಿದೆ : ಹಾಗೆಂದು ಬೇಕಾದ ಆಸ್ಪತ್ರೆಗೆ ಹೋಗಿ ಚಿಕಿತ್ಸೆ ಪಡೆಯಬಹುದೆಂಬ ಭಾವನೆ ಬಂದರೆ ಅದು ಸುಳ್ಳು. ವೈದ್ಯಕೀಯ ವೆಚ್ಚ ಎಷ್ಟು ಹೆಚ್ಚೆಂದರೆ ಎಷ್ಟೋ ಅಮೆರಿಕನ್ನರು ಗಂಭೀರ ಚಿಕಿತ್ಸೆಗಳಿಗಾಗಿ ಯೂರೋಪಿಗೆ ಹೋಗುವುದುಂಟು. ಅಲ್ಲದೆ ಚಿಕಿತ್ಸೆಯ ಸರ್ವಸ್ವವನ್ನೂ ವಿಮಾ ಕಂಪೆನಿಗಳು ನಿರ್ಧರಿಸುವ ಸಾಧ್ಯತೆಯೂ ಇರುತ್ತದೆ). ಆಹಾರದ ಸಮಸ್ಯೆಯನ್ನು ಸರ್ಕಾರವೇ ನೋಡಿಕೊಳ್ಳುತ್ತದೆ. ಇಲ್ಲಿ ಆಹಾರ ತುಂಬ ಅಗ್ಗವಾಗಿಯೂ, ಸಮೃದ್ಧವಾಗಿಯೂ ಇರುತ್ತದೆ. ಆದ್ದರಿಂದ ಇಲ್ಲಿ ಯಾವ ಮನುಷ್ಯನೂ ಹಸಿವಿನಿಂದ ಕಂಗೆಡಬೇಕಿಲ್ಲ. ಅಂದರೆ ಬಡವರು, ನಿರ್ಗತಿಕರು, ಭಿಕ್ಷುಕರು ಇಲ್ಲವೆಂದಲ್ಲ. ಅಲ್ಲಿಯೂ ಬೀದಿಯಲ್ಲೇ ವಾಸಮಾಡುವವರಿದ್ದಾರೆ. ಅವರ ಪ್ರಮಾಣ ಬಹಳ ಕಡಿಮೆ. ನಿರುದ್ಯೋಗಿಗಳಿಗೆ ಆಹಾರದ ಕೂಪನ್‌ಗಳ ಸೌಲಭ್ಯ ಕಲ್ಪಿಸಲಾಗುತ್ತದೆ. ಎಲ್ಲವೂ ಖಾಸಗಿಯೆಂದು ಹೇಳಲಾಗುವ ಅಮೆರಿಕಾದಲ್ಲಿ ಸಾರ್ವಜನಿಕ ಸೌಲಭ್ಯಗಳ ಉಸ್ತುವಾರಿ ಮಾತ್ರ ಸರ್ಕಾರದ್ದೇ ಆಗಿರುತ್ತದೆ.



*ಪೀಠದಡಿಯಲ್ಲಿ ನಿಲ್ಲಿಸಲಾಗಿರುವ ಶಿಲ್ಪ ಮೂರ್ತಿಗಳು. ಉತ್ತರ ಅಮೆರಿಕಾದಲ್ಲಿ ಅತ್ಯಂತ ಹಳೆಯ ನ್ಯಾಯಾಲಯ ಇದೇ.*

ಉದಾಹರಣೆಗೆ, ಸಾರಿಗೆ ವಾಹನಗಳು ಖಾಸಗಿಯಾದರೂ ಸಾರಿಗೆ ವ್ಯವಸ್ಥೆಯನ್ನು ಸರ್ಕಾರವೇ ನೋಡಿಕೊಳ್ಳುತ್ತದೆ. ಇಲ್ಲಿ ಪೆಟ್ರೋಲ್ ಸಮೃದ್ಧವಾಗಿದೆ. ಅತ್ಯಂತ ಅಗ್ಗ ಹಾಗೂ ರಿಯಾಯಿತಿ ದರದಲ್ಲಿ ಸಿಗುತ್ತದೆ. ಬಸ್ ಪ್ರಯಾಣ ತುಂಬಾ ಅಗ್ಗದ್ದು. ಮಕ್ಕಳ ಹಿತ ರಕ್ಷಣೆಯ ಕಾನೂನು, ಸರ್ಕಾರದ ಅನುದಾನಿತ ಶಾಲೆಗಳು, ದಿಕ್ಕಿಲ್ಲದ ಮಕ್ಕಳಿಗಾಗಿ ಸರ್ಕಾರವೇ ನಡೆಸುವ ವಸತಿಗೃಹಗಳು ಎಲ್ಲವೂ ಇವೆ. ಆದ್ದರಿಂದ ಇವನ್ನೆಲ್ಲಾ ನೋಡಿದಾಗ ವಿದ್ಯಾಭ್ಯಾಸ, ಔಷಧಿ, ಆಹಾರ, ವಸತಿ ಮತ್ತು ವೇತನದ ಸಂರಕ್ಷಣೆ (ಅಮೆರಿಕಾದ ಎಲ್ಲಾ ಭಾಗಗಳಲ್ಲೂ ಒಂದು ಗಂಟೆಯ ದುಡಿಮೆಗೆ ೫ ಡಾಲರ್ ಕೂಲಿ) ಎಲ್ಲವೂ ಈ ದೇಶದ ಸ್ವರೂಪವನ್ನು 'ಸಮಾಜವಾದಿ' ಎನ್ನುವಂತೆ ಮಾಡುತ್ತದೆ. ಸಮಾಜವಾದಿ ವ್ಯವಸ್ಥೆಯೆನ್ನುವುದು 'ಸಮಾಜ ಕಲ್ಯಾಣದ ಆರ್ಥಿಕ ವ್ಯವಸ್ಥೆ'ಯೆಂದಾದರೆ, ಅಮೆರಿಕಾ 'ಸಮಾಜವಾದಿ' ರಾಷ್ಟ್ರವೆಂದಾಗುತ್ತದೆ. ಆದರೆ ಆ ದೇಶದ ಸಂಪತ್ತೆಲ್ಲಾ ಸ್ವಯಂ ತಾನೇ ಉತ್ಪಾದಿಸುವುದಿಲ್ಲ, ಬದಲಾಗಿ ಬೇರೆ ದೇಶಗಳಿಂದ ಕಿತ್ತು ತಂದಂಥದು. ಅದು ಹಾಗಲ್ಲವೆಂಬ ಭ್ರಮೆಯಲ್ಲಿ ಆ ದೇಶದ ಜನ ಮುಳುಗಿದ್ದಾರೆ ಮತ್ತು ಸರ್ಕಾರಿ ಯಂತ್ರವೂ ಅದನ್ನು ಬಿತ್ತರಿಸುತ್ತದೆ.

ಈಗ ಬಹುಮುಖ್ಯ ಪ್ರಶ್ನೆಯೆಂದರೆ, ಈ ಸಮಾಜಕಲ್ಯಾಣ ಆರ್ಥಿಕ ವ್ಯವಸ್ಥೆ ಹೇಗೆ ಉಳಿದುಬಂದಿದೆ ಎಂಬುದು. ಹೊರ ಜಗತ್ತಿಗೆ ಅಪ್ಪಟ ಬಂಡವಾಳಶಾಹಿ ವ್ಯವಸ್ಥೆಯ ರಾಷ್ಟ್ರವಾಗಿರುವ ಅಮೆರಿಕಾ, ಮೂರನೆಯ ಜಗತ್ತಿನ ರಾಷ್ಟ್ರಗಳ ಸಂಪನ್ಮೂಲಗಳನ್ನೆಲ್ಲಾ ಲೂಟಿ ಮಾಡಿ ಪ್ರಜಾಪ್ರಭುತ್ವದ ಸೋಗಿನಲ್ಲಿ ಅಲ್ಲಿನ ಜನರನ್ನು ಶೋಷಿಸಿ, ತಮ್ಮನ್ನು ಮತ್ತು ತಮ್ಮ ಕಾರ್ಯಕ್ರಮಗಳನ್ನು ಬೆಂಬಲಿಸುವ ಪ್ರತಿಗಾಮಿ, ಸಂಪ್ರದಾಯಸ್ಥ ರಾಷ್ಟ್ರಗಳ ಬೆಂಬಲದಿಂದ ಉಳಿದಿದೆ. ಭಾರತವೂ ಈ ಪಂಕ್ತಿಗೆ ಸೇರಲು ಹಾತೊರೆಯುತ್ತಿರುವುದು ಒಂದು ದುರಂತ.

ಅಮೆರಿಕೆಯು ಹುಟ್ಟು ಹಾಕಿರುವ ಬಂದೂಕುಗಳು ಮತ್ತು ಶಸ್ತ್ರಾಸ್ತ್ರ ಸಮೂಹಗಳ ವಿಷಯಕ್ಕೆ ಬಂದರೆ ಈ ಅಂಶ ಹೆಚ್ಚು ಸ್ಪಷ್ಟವಾಗಿ ಗೋಚರವಾಗುತ್ತದೆ. ನಮಗೆ ಅವರು ನೀಡುತ್ತಿದ್ದ ವೈಭವದ ಸತ್ಕಾರದ ಊಟದ ಸಂದರ್ಭದಲ್ಲಿ, ಸಭೆ ಸಮಾವೇಶಗಳಲ್ಲಿ 'ಶಸ್ತ್ರಾಸ್ತ್ರ' ಪದ ಚರ್ಚೆಗೆ ಬಂದರೆ ಸಾಕು, ಎಲ್ಲ ಜನರೂ ಒಂದಾಗುತ್ತಿದ್ದರು. ಅಮೆರಿಕಾದಲ್ಲಿ ಯಾರೂ ಅವರ ದೇಶದ ಶಸ್ತ್ರಾಸ್ತ್ರಗಳು ಪ್ರಜಾಪ್ರಭುತ್ವಕ್ಕೆ, ವಿಶ್ವದ ಶಾಂತಿ, ಸಮೃದ್ಧಿಗೆ ಭಾರಿ ಪೆಟ್ಟು ಎಂಬ ಅಂಶವನ್ನು ಒಪ್ಪಲು ಸಿದ್ಧರಿಲ್ಲ. ಅಲ್ಲಿನ ಅಧಿಕಾರಶಾಹಿ ಮತ್ತು ಜನತೆಯು ಈ ಅಂಶಗಳನ್ನು ಕುರಿತು ಚಿಂತಿಸಲೂ ಸಿದ್ಧರಿಲ್ಲ. ವಿಶ್ವವಿದ್ಯಾಲಯಗಳ ಪರಿಸ್ಥಿತಿ ಇದಕ್ಕೆ ಭಿನ್ನವಾಗಿಲ್ಲ.

ಇದೆಲ್ಲಾ ಹೇಳಿದರೆ ನಾವು ಮುಖ್ಯ ವಿಷಯದಿಂದ ಆಚೆಗೆ ಹೋದೆವೆನಿಸಬಹುದು. ಈಗ ನನ್ನ ಮುಖ್ಯ ಪ್ರಶ್ನೆ : ಅಮೆರಿಕಾ ಸರ್ಕಾರ ಅಷ್ಟೊಂದು ಹಣವನ್ನು ನಮಗಾಗಿ ಸುರಿದದ್ದು ಏಕೆ ? ಅಮೆರಿಕಾ ಸರ್ಕಾರದ ದೂರದರ್ಶಿತ್ವ ಮತ್ತು ತನ್ನ ಜನತೆಯನ್ನು 'ಸೊಂಪಾಗಿ' ಬೆಳೆಸುವ ನೀತಿಯಲ್ಲಿ ಇದಕ್ಕೆ ಉತ್ತರ ಅಡಗಿದೆ. ನಾವು ಹೋಗಿದ್ದಾಗ ಒಂದು ಅದ್ದೂರಿ ಸಮಾರಂಭ ನಡೆಯಿತು. ಕಾರ್ಯಕ್ರಮಕ್ಕೆ ಆಗಮಿಸಿದ್ದ ೩೦,೦೦೦ ಆಹ್ವಾನಿತ ಜನರ ಸಮ್ಮುಖದಲ್ಲಿ ನಮ್ಮ ಆತಿಥೇಯರು ಹೆಮ್ಮೆಯಿಂದ ''ಇಲ್ಲಿಗೆ ಆಗಮಿಸಿರುವ 'ಅಂತರರಾಷ್ಟ್ರೀಯ ಅತಿಥಿಗಳು', ಈ ೫೦೦ ಮಂದಿಯೂ ಅವರವರ ಕ್ಷೇತ್ರಗಳಲ್ಲಿ ಅತ್ಯಂತ ಪ್ರಭಾವೀ ವ್ಯಕ್ತಿಗಳಾಗಿದ್ದಾರೆ, ಅವರ ದೇಶಗಳಲ್ಲಿ ನೇತಾರರಾಗಲಿದ್ದಾರೆ,'' ಎಂದು ಘೋಷಿಸಿದರು. ಒಟ್ಟಾರೆಯಾಗಿ ಈ ಕಾರ್ಯಕ್ರಮದ ಮುಖ್ಯ ಉದ್ದೇಶವೇ ಬೇರೆ ಬೇರೆ ದೇಶಗಳಲ್ಲಿ ಆಯಾ ದೇಶಗಳ 'ಭವಿಷ್ಯದ ನೇತಾರರು ಮತ್ತು ಉನ್ನತ ಸಾಧಕ'ರನ್ನು ಗುರುತಿಸಿ, ಅವರಿಗೆ ಅಮೆರಿಕಾದ ಬಗೆಗಿನ ''ಮಾಹಿತಿ''ಯನ್ನು ಪರಿಚಯಿಸಿ ಎರಡೂ ರಾಷ್ಟ್ರಗಳ ನಡುವೆ ತಿಳಿವು ಮತ್ತು

ಸಹಕಾರವನ್ನು ಹೆಚ್ಚಿಸುವುದಾಗಿತ್ತು. 'ಸರಿಯಾದ' ಜನರನ್ನು ಆಯ್ಕೆ ಮಾಡಿ ಅವರ ಬೆಳವಣಿಗೆಯನ್ನು ನಿಯಂತ್ರಿಸಿ ಅವರನ್ನು ಬೆಳೆಸುವುದರ ಮೂಲಕ ಅಗತ್ಯದ ಸಮಯ ಬಂದಾಗ ಅವರು ಅಮೇರಿಕೆಯ ''ಸ್ನೇಹಿತ''ರಾಗಿ ಉಳಿಯುವಂತೆ ನೋಡಿಕೊಳ್ಳುವುದೇ ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿದೆ.

ನಮಗೆ ನಮ್ಮ ಅತಿಥಿಗಳು ನೀಡಿದ ಭವ್ಯ ಆತಿಥ್ಯದ ಹಿಂದಿರುವ ದೂರದರ್ಶಿತ್ವದ ಬುದ್ಧಿವಂತಿಕೆಗೆ ಬೆಕ್ಕಸ ಬೆರಗಾದೆ. ಅದೆಂತಹ ಚಾಣಾಕ್ಷ ಸರ್ಕಾರ! ಹಾಗೆಯೇ ಅಮೆರಿಕೆಯ ಜನರು ಮುಗ್ಧರೇ. ಸಣ್ಣ ಮಕ್ಕಳು ಆಟಿಕೆಗಳಿಂದ ಸಂತೋಷಗೊಂಡು ಅವರ ಪೋಷಕರ ಆರೈಕೆಯಲ್ಲಿ ಸಂತೃಪ್ತರಾಗಿರುವಂತೆ ಈ ದೇಶದ ಜನರೂ ಸರ್ಕಾರದ ಸವಲತ್ತುಗಳಿಂದ ಸಂತೃಪ್ತರಾಗಿ ತಾವಿರುವುದೇ ಜಗತ್ತು ಎಂಬ ಭ್ರಮೆಯಲ್ಲಿದ್ದಾರೆ. ಸರ್ಕಾರದ ಒಳವ್ಯವಹಾರಗಳ ಬಗ್ಗೆ ತಲೆಕೆಡಿಸಿಕೊಳ್ಳದೆ, ಅವರು ಹೇಳುವ ಸುಳ್ಳುಗಳನ್ನೇ ನಂಬುತ್ತಾರೆ.

ಅದೇನೇ ಇರಲಿ, ಅಮೆರಿಕಾ ಸರ್ಕಾರವು ತನ್ನ ಕಾರ್ಯಾಚರಣೆಗಳಿಂದ ಮತ್ತು ಹಣದಿಂದ, ವಿವಿಧ ದೇಶಗಳಲ್ಲಿ, ಅಲ್ಲಿನ ಜನತೆಯ ನಡುವೆ ಒಂದು ಪ್ರಬಲವಾದ ಸಂಪರ್ಕಜಾಲವಾಗಿ ಕೆಲಸ ಮಾಡುತ್ತಿದೆ; ಅವರಿಂದ ತಮಗೆ ಬೇಕಾದ ಕೆಲಸ ಮಾಡಿಸಿಕೊಂಡು, ತಮ್ಮ ಬೇಹುಗಾರಿಕೆಯ ಜಾಲವನ್ನು ವ್ಯಾಪಕವಾಗಿ ಹರಡಿದೆ. ನಾನು ಈ ನನ್ನ ಅನುಭವಗಳನ್ನು ಬರೆಯುತ್ತಿರುವಾಗ ಒಂದು ವಿಷಯ ನನ್ನ ಮನಸ್ಸಿನಲ್ಲಿ ಮಿಂಚಿತು.

**ಮತ**

ಈ ಕಾಲದಲ್ಲಿ
ಒಂದು ಮತಕ್ಕೆ ಸೇರಿರುವುದೆ
ಆಕ್ಷೇಪಣೀಯವಾಗಿರುವಾಗ,
'ತ್ರಿಮತಸ್ಥ'ರೂ ಇದ್ದಾರಲ್ಲ,
ಏನು ಹೇಳುವುದು !?

ಸಿ.ಪಿ.ಕೆ, ಮೈಸೂರು - ೧೨

ಏಷ್ಯಾ ಮತ್ತು ಯುರೋಪ್‌ನ ದೇಶಗಳಲ್ಲಿ ತಮ್ಮ ವ್ಯಾಪಕ ಬೇಹುಗಾರಿಕೆ ಮತ್ತು ಸಂಪರ್ಕ ಜಾಲಗಳಿಂದ ಅಲ್ಲಿನ ಜನತೆಯೊಂದಿಗೆ ಸೇರಿಕೊಂಡು, ಆ ದೇಶದ ನೀತಿ ನಿಯಮಗಳನ್ನೆಲ್ಲಾ ಗಾಳಿಗೆ ತೂರಿ ದೊಡ್ಡ ದೊಡ್ಡ ಕಂಪೆನಿಗಳನ್ನು ಆರಂಭಿಸಲು ಹೊರಟ ಈ ದೇಶದ ಬುದ್ಧಿ ಚಮತ್ಕಾರ ನೆನಪಿಗೆ ಬಂತು. ಮುಂದೆ ಈ ಬೇಹುಗಾರರಲ್ಲಿ ನಾನೂ ಒಬ್ಬಳಾಗಬೇಕಾಗಬಹುದೇ ಎಂಬ ಆಲೋಚನೆ ಬಂದೊಡನೆ ಒಂದು ಕ್ಷಣ ನಡುಗಿದೆ.

ಅಮೆರಿಕೆಯ ಬಂಡವಾಳಶಾಹಿ ವ್ಯವಸ್ಥೆಯು ನಮ್ಮ ಮೇಲೆ, ಮೂರನೇ ಜಗತ್ತಿನ ರಾಷ್ಟ್ರಗಳ ಮೇಲೆ, ನಿಂತಿದೆ. ಅಮೆರಿಕೆಯ ಯಶಸ್ಸಿನ ಕಥೆಯಿಂದ ಇಡೀ ವಿಶ್ವದ ಜನ ಬಂಡವಾಳಶಾಹಿಯಲ್ಲದೆ ಯಾವ ವ್ಯವಸ್ಥೆಯೂ ಜಗತ್ತಿನಲ್ಲಿ ಉಳಿಯಲಾರದು ಎಂದು ನಂಬುವುದರಲ್ಲಿ ಆಶ್ಚರ್ಯವಿಲ್ಲ. ಇದಕ್ಕೆ ಉತ್ತಮ ನಿದರ್ಶನವಾಗಿ ಅಮೆರಿಕಾದತ್ತ ಕಣ್ಣು ಹಾಯಿಸುತ್ತಾರೆ. ಆದ್ದರಿಂದಲೇ ನಮ್ಮಂತಹ 'ಸಾಧನೆಗೈದ' ಮಂದಿಯನ್ನು ಉದ್ದೇಶಿಸಿ 'ನೋಡಿ, ನಮ್ಮ ದೇಶದಲ್ಲಿ ಬಂಡವಾಳಶಾಹಿ ವ್ಯವಸ್ಥೆ [illegible] ಕೆಲಸ ಮಾಡುತ್ತಿದೆ' ಎಂದು ಅಮೆರಿಕಾ [illegible]. ಆದರೆ ಸತ್ಯವೆಂದರೆ, 'ಒಂದು' ಅಮೆರಿಕಾ ಚೆನ್ನಾಗಿ ಕಾರ್ಯನಿರ್ವಹಿಸಬೇಕಾದರೆ, ಅದರ ಯಶಸ್ಸಿಗೆ ನೂರಾರು 'ಭಾರತ'ಗಳು ಬಂಡವಾಳಶಾಹಿ ಶೋಷಣೆಯಡಿ ಸಿಕ್ಕು ದಮನಕ್ಕೊಳಗಾಗಬೇಕಾಗುತ್ತದೆ. ಆದ್ದರಿಂದಲೇ ಇಡೀ ವಿಶ್ವವೇ ಬಂಡವಾಳಶಾಹಿಯೂ, ಸಂಪದ್ಭರಿತವೂ ಆಗಲು ಸಾಧ್ಯವಿಲ್ಲ. ತನ್ನ ದೇಶದ ಪ್ರಜೆಗಳನ್ನು ಶೋಷಿಸದಿದ್ದರೇನಂತೆ, ಅಮೆರಿಕೆಯು ಬೇರೆ ದೇಶದ ಜನಗಳನ್ನು ಶೋಷಿಸುತ್ತದಲ್ಲ! ಈ ತಂತ್ರವನ್ನು ಒಪ್ಪದಿದ್ದರೂ ದಮನಕ್ಕೊಳಗಾಗದ ಅಮೆರಿಕಾದ ಜನರು ಬಂಡವಾಳಶಾಹಿ ವ್ಯವಸ್ಥೆಯ ಪ್ರಚಾರಕರಾದರೆ ಆಶ್ಚರ್ಯವಿಲ್ಲ. ಏಕೆಂದರೆ, ಬೇರೆ ದೇಶಗಳ ಜನರ ದೈನ್ಯ ಅವರ ಅರಿವಿಗೆ ಬರುವುದಿಲ್ಲ.

ಡಾಲರ್‌ನ ಶಕ್ತಿ ಅತ್ಯಂತ ಪ್ರಬಲವಾದದ್ದು. ಆದರೆ ಇದಕ್ಕೂ ಮೀರಿದ ಶಕ್ತಿ ಜನತೆಯದ್ದು, ಎಂಬುದನ್ನು ನಾವು ಮರೆಯಬಾರದು. ಹೌದು, ನನ್ನ ಅಮೆರಿಕೆಯ ಪ್ರವಾಸ ನನ್ನ ಕಣ್ತೆರೆಸಿತು. ನಾವು ಬದುಕುತ್ತಿರುವ ವ್ಯವಸ್ಥೆಯ ಅದಕ್ಷತೆಯನ್ನು ಕಣ್ಮುಂದೆ ತಂದಿತು. ಹಾಗೆಯೇ ಬಂಡವಾಳಶಾಹಿಯು ಈ ಅದಕ್ಷತೆಯ ನಿವಾರಣೆಗೆ ಉತ್ತರವೂ ಅಲ್ಲ ಎಂಬ ಅರಿವನ್ನೂ ಮೂಡಿಸಿತು.

**ತನು ಮೆಹ್ತಾ ತಿವಾರಿ**
ವಕೀಲರು, ೩೭, ೪ನೇ ಮಹಡಿ, ಯೂಸುಫ ಕಟ್ಟಡ, ಫ್ಲೋರಾ ಫೌಂಟನ್, ಮುಂಬೈ-೪೦೦ ೦೨೩

# ಧನ್ಯವಾದ, ಬೀರ್‌ಬಲ್.....!

ಮುಂದೊಂದು ದಿನ ಬೀರಬಲ್ ಹೀಗೆ ತನ್ನ ನೆರವಿಗೆ ಬರುತ್ತಾನೆಂದು ರಂಗಸ್ವಾಮಿ ಕನಸಿನಲ್ಲಿಯೂ ನೆನೆಸಿರಲಿಲ್ಲ. ಎಲ್ಲವೂ ವಿಚಿತ್ರ ರೀತಿಯಲ್ಲಿ ನಡೆದುಹೋಯಿತು. ಫೆಬ್ರುವರಿ ಕಳೆದು ಮಾರ್ಚ್ ತಿಂಗಳು ಮೆಲ್ಲನೆ ಅಡಿಯಿರಿಸಿತ್ತು. ರಂಗು ಹೊಸ ಊರಿನಲ್ಲಿ ಹೊಸ ಬಾಡಿಗೆ ಮನೆ ಹಿಡಿದು ಏಳೆಂಟು ತಿಂಗಳು ದಾಟಿದ್ದವು. ಅಲ್ಲಿಯತನಕ ಹಾಯಾಗಿಯೇ ಇದ್ದನು. ಈಗ ಮಾರ್ಚ್ ತಿಂಗಳು ಬಂದು ನೀರಿನ ಅಭಾವ ತಲೆದೋರಿದಾಗಲೇ ತಿಳಿಸಾರಿನಲ್ಲಿ ಜಿರಳೆ ಸಿಕ್ಕಿದ ಅನುಭವ ಆದದ್ದು. ಈ ಊರಿನಲ್ಲಿ ಮನೆ ಹಿಡಿಯಲು ಬಂದಾಗ ಆ ಗೆಳೆಯ ಹೆಗಡೆ ಏನೂ ಹೇಳಲೇ ಇಲ್ವಲ್ಲ ಎಂದು ಸಿಟ್ಟಾಯಿತು. ಮನೆಗೆ ನೀರು ಬರುವ ಎರಡು ವ್ಯವಸ್ಥೆಗಳು ಇದ್ದವು. ಒಂದು ಮುನಿಸಿಪಾಲಿಟಿ ನಲ್ಲಿಯ ನೀರು, ಮತ್ತೊಂದು ಮನೆಯ ಅಂಚಿನಲ್ಲಿದ್ದ ತೋಡುಬಾವಿಯ ನೀರು. ಬಾವಿಗೆ ಮೋಟಾರ್, ಮನೆಗೆ ಓವರ್‌ಹೆಡ್ ಟ್ಯಾಂಕ್ ಎಲ್ಲಾ ವ್ಯವಸ್ಥೆ ಇದ್ದಿತು. ಆದರೆ ಮುಖ್ಯವಾಗಿ ನೀರಿನ ಜಲವೇ ಬತ್ತತೊಡಗಿತ್ತು. ಕರಾವಳಿಯ ಅಂಚಿನ ಪಟ್ಟಣ ಈ ಹೊನ್ನಾವರ. ಎಲ್ಲಿ ನೋಡಿದರೂ ನೀರೋ ನೀರು. ಒಮ್ಮೆ ಪ್ರವಾಸಕ್ಕೆ ಇತ್ತ ಕಡೆ ಬಂದಿದ್ದ ರಂಗು. ಈ ಪ್ರಕೃತಿ ಸೌಂದರ್ಯ, ನೀರಿನ ರಾಶಿ ಕಂಡು ಮರುಳಾಗಿ ತಾನೆ ಆಸೆಪಟ್ಟು ಇಲ್ಲಿಗೆ ವರ್ಗ ಮಾಡಿಸಿಕೊಂಡು ಬಂದಿದ್ದನು.

'ಹೆಣ್ಣು ನೋಡಿದರೆ ಚಂದ, ಕಣ್ಣು ಮಾತ್ರ ಕುರುಡು' ಎನ್ನುವ ಕಹಿ ಅನುಭವ ಕ್ರಮೇಣ ಇವನಿಗೆ ಆಗತೊಡಗಿತು. ಪದ್ಮ ರಂಗುವಿನ ಪ್ರೀತಿಯ ಮಡದಿ. ದಿನದಿಂದ ದಿನಕ್ಕೆ ಅವಳು ಹರಿಕಥೆಯ ಸ್ವರೂಪವನ್ನು ವೃದ್ಧಿಸಿಕೊಳ್ಳತೊಡಗಿದಳು. ಹಗಲಾಯಿತು ಇರುಳಾಯಿತೆಂದರೆ ಒಂದೇ ರಾಗ: ''ರ್‍ರೀ.... ನೀರಿಗೆ ಏನು ಮಾಡ್ತೋದ್ರೀ..... ನನ್ನ ಕೈಯಲ್ಲಿ ಅಲ್ಲಿಂದ ಇಲ್ಲಿಂದ ನೀರು ಹೊತ್ತು ತರಲು ಆಗೊಲ್ಲಪ್ಪ'' ಎಂದು ಕೈ ಚೆಲ್ಲಿದಳು.

ರಂಗಸ್ವಾಮಿಗೆ ಈ ಹೊಸ ಸಮಸ್ಯೆಯಿಂದ ತಲೆ ಬಿಸಿಯಾಯಿತು. ''ಆ ಮನೆ ಯಜಮಾನನಿಗೆ ಬಾವೀನ ಸ್ವಲ್ಪ ಆಳ ಮಾಡಿಸು ಅಂತ ಹೇಳೆSS'' ಎಂದು ಸಲಹೆ ಇತ್ತನು. ಅದಕ್ಕೂ ಒಂದು ರೆಡಿಯುತ್ತರ ಪದ್ಮಳ ಬಾಯಿಯಿಂದ ಹೊರಬಿದ್ದಿತು : ''ಅದನ್ನು ನಾನು ಆಗಲೇ ಅವರ ಬಳಿ ಹೇಳಿದೇರಿSS... ಅದಕ್ಕೆ ಅವರು ಹೇಳ್ತಾರೆSS.... ನಾವು ಬಾವಿ ಆಳ ಮಾಡಿಸಿದರೆ ಪಕ್ಕದ ಮನೆಯವರು ಜಗಳಾ ತೆಗಿತಾರೆ ಅಂತ.'' ಪದ್ಮಳ ಈ ಉತ್ತರದಿಂದ ಕುಪಿತನಾದ ರಂಗಸ್ವಾಮಿ ಮತ್ತಷ್ಟು ತನ್ನ ಮುಖವನ್ನು ಗಂಟು ಮೋರೆಯನ್ನಾಗಿಸಿ ''ಇವರ ಬಾವೀನ ಇವರು ಆಳ ಮಾಡಿಸಿದ್ರೆ ಆ ಪಕ್ಕದ್ಮನೆಯವನಿಗೆ ಏನೇ ಹೊಟ್ಟೆ ನೋವು?'' ''ಅಲ್ಲೇರಿ ಇರೋದು ಸ್ವಾರಸ್ಯ. ಹೋದ ವರ್ಷನೂ ಹೀಗೇ ಆಯ್ತಂತೆ..... ಇದೇ ತರಹ [illegible] ಆಳ ಮಾಡಿಸಿದಾಗ 'ಏಕ್ರೀSS ಬಾವಿ ಆಳ ಮಾಡಿದ್ರಿ.... ಈಗ ನಮ್ಮ ಬಾವೀಲಿ ನೀರೆ ಇಲ್ಲದ ಹಾಗಾಯ್ತು!' ಎನ್ನುತ್ತ ಕಾಲು ಕೆರೆದು ಜಗಳ ಮಾಡಿ ತಾನೂ ತಮ್ಮ ಬಾವೀನ ಇನ್ನಷ್ಟು ಆಳ ಮಾಡಿಸಿದನಂತೆ. ಅದಕ್ಕೆ ಓನರು ಈ ಸಾರಿ 'ಬಾವಿ ಆಳ ಮಾಡಿಸೋಕಾಗೊಲ್ಲಮ್ಮ!' ಅಂದುಬಿಟ್ರುರೀ.....'' ಎಂದು ದೊಡ್ಡ ವರದಿಯನ್ನೇ ಒಪ್ಪಿಸಿ ಸುಸ್ತಾಗಿ ಕುಳಿತಳು ಪದ್ಮ. ಪದ್ಮಳ ಕಣ್ಣಿನಲ್ಲಿ ಆಗಲೇ ನೀರಿನ ಹನಿಗಳು ತುಂಬಿಬಿಟ್ಟಿವೆ. ರಂಗಸ್ವಾಮಿ ಸ್ವಗತದಲ್ಲಿ ಗೊಣಗಿಕೊಂಡನು: ''ಹಾಳಾದ್ದು ಯಾವ ಬಾವಿಯಲ್ಲಿ ನೀರು ಬತ್ತಿ ಹೋದ್ರು ಈ ಹೆಂಗಸರ ಕಣ್ಣಿನಲ್ಲಿ ಮಾತ್ರ ಯಾವ ಕಾಲಕ್ಕೂ ನೀರು ಬತ್ತುವುದಿಲ್ಲ!'' ಅಂತ. ''ಏನ್ರೀ, ಅದೇನ್ರೀ ನಿಮ್ಮಷ್ಟಕ್ಕೆ ನೀವೆ ಗೊಣಗ್ತಾ ಇರೋದು?'' ಪದ್ಮ ರಾಗವಾಗಿ ರಂಗುವನ್ನು ಕೇಳಿದಾಗ, ರಂಗಸ್ವಾಮಿ ಗಾಬರಿಯಾಗಿ ಮುಂದೆ ನಡೆಯಬಹುದಾದ 'ಕುರುಕ್ಷೇತ್ರ'ವನ್ನು ಕಲ್ಪಿಸಿಕೊಂಡು ''ಏನಿಲ್ಲ ಪದ್ಮ, ಬೇರೆ ಮನೆ ನೋಡಿದ್ರಾಯ್ತು ಅಂದೆ, ಅಷ್ಟೇಯೇ'' ಎಂದು ಒಂದು ಸುಳ್ಳು ಬಿತ್ತರಿಸಿದನು.

'ಬೇರೆ ಮನೆ' ಎಂದಾಕ್ಷಣ ಪದ್ಮಳ ಕಿವಿ ನೆಟ್ಟಗಾಗಿ ಅವಳ ಮುಖಾರವಿಂದ ಅರಳಿತು. ಆ ದಿನ ರಂಗಸ್ವಾಮಿಗೂ ಒಳ್ಳೆಯ ಉಪಚಾರ ದೊರಕಿತು. ಪದ್ಮಳಿಗೆ ಇತ್ತ ಆಶ್ವಾಸನೆ ನೆನೆದು ಅದನ್ನು ಈಡೇರಿಸಲು ರಂಗಸ್ವಾಮಿ ಮರುದಿನ ಮುಂಜಾನೆಯೇ ಹೊರಟು ನಿಂತನು. ಬ್ರೋಕರ್ ಅನಂತಯ್ಯನ ಮನೆಗೆ ಹೋದನು. ದಾರಿಯಲ್ಲಿ ಸಿಕ್ಕಿದ ಯಾವುದೋ ಸಾರ್ವಜನಿಕ ಟೆಲಿಫೋನ್ ಬೂತ್‌ನಿಂದ ಬ್ರೋಕರ್ ಅನಂತಯ್ಯನಿಂದಲೇ ಅವನ ಆಫೀಸಿಗೆ ಫೋನ್ ಉಡಾಯಿಸಿ ''ರಂಗಸ್ವಾಮಿಗೆ ಸಕ್ಕತ್ತಾಗಿ ಉಸಾರಿಲ್ಲ, ಅದಕ್ಕೆ ಮೂರು ದಿನ ರಜೆ ಬೇಕು'' ಎಂದು ಹೇಳಿಸಿದ. ಅನಂತಯ್ಯನನ್ನು ಕೂಡಿಕೊಂಡು ಊರೆಲ್ಲಾ ಅಲೆಯಲು ಸುರುಮಾಡಿದನು ಮನೆಗಾಗಿ. ಆ ಮನೆ, ಈ ಮನೆ ಅಂದ್ಕೊಂಡು ಅಲೆದಾಡಿದನು. ಸುಸ್ತಾದನು. ಅನಂತಯ್ಯ ಒಂದಾದ ನಂತರ ಒಂದರಂತೆ ಮೂರು ದಿನವೂ ಬೇರೆ ಬೇರೆ ಮನೆಗಳನ್ನು ತೋರಿಸುತ್ತಲೇ ಹೋದನು. ರಂಗಸ್ವಾಮಿ ಅದನ್ನು ನೋಡುತ್ತಲೇ ನಡೆದನು. ಇದನ್ನೆಲ್ಲ ನೋಡಿದ ರಂಗಸ್ವಾಮಿಗೆ ಒಂದು ಹಂತದಲ್ಲಿ ಗಾಬರಿಯೇ ಆಯಿತು. ಏಕೆಂದರೆ ಅನಂತಯ್ಯ ತೋರಿದ ಹತ್ತಾರು ಮನೆಗಳು ಮೂರಾಬಟ್ಟೆ ಮನೆಗಳೆ, ಆದರೆ ಬಾಡಿಗೆ ಮಾತ್ರ ಈಗ ಇರುವ ಮನೆಗಿಂತ ಒಂದುವರೆ ಎರಡು ಪಟ್ಟು ಜಾಸ್ತಿಯೇ ಹೇಳತೊಡಗಿದರು.

ಮೂರು ದಿನಗಳ ಪಾದಯಾತ್ರೆ, ಸ್ಕೂಟರ್ ಯಾತ್ರೆ, ಆಟೋ ಯಾತ್ರೆ ಎಲ್ಲವನ್ನೂ ಮುಗಿಸಿ ಆಗಿತ್ತು. ಎಲ್ಲಾ ಮುಗಿದ ನಂತರ ರಂಗಸ್ವಾಮಿಗೆ ಈಗ ತಾನು ವಾಸಿಸುತ್ತಿರುವ ಮನೆಯೇ ಸ್ವರ್ಗದಂತೆ ಕಾಣತೊಡಗಿತು. ಕಾರಣವೆಂದರೆ ಬೇರೆ ಮನೆಗಳ ಅನುಕೂಲ ಮತ್ತು ಬಾಡಿಗೆಯನ್ನು ತಾನು ಈಗ ಇರುವ ಮನೆಗೆ ಹೋಲಿಸಿ ನೋಡಿದಾಗ ತಾನು ಈಗ ಎಂಥ ಸುಖಕರವಾದ ಕಡಿಮೆ ಬಾಡಿಗೆಯ ಮನೆಯಲ್ಲಿ ಇದ್ದೀನಿ ಎನ್ನುವುದರ ಅರಿವಾಯಿತು. ತಾನು ಈಗ ಇದ್ದ ಮನೆಯ ಮೇಲಿನ ಅಸಡ್ಡೆಯ ಭಾವನೆಯೆಲ್ಲ ಮಾಯವಾಯಿತು. ಆ ಮನೆಯ ಮೇಲೆ ಮತ್ತಷ್ಟು ಪ್ರೀತಿ, ವ್ಯಾಮೋಹ, ಸ್ಫುರಿಸತೊಡಗಿತು. ಆಗಲೇ ಅವನಿಗೆ ಆ ಬೀರಬಲ್ ಮಹಾಶಯನ ''ಚಿಕ್ಕ ಗೆರೆಯನ್ನು ಸ್ಪರ್ಶಿಸದೆಯೆ ದೊಡ್ಡ ಗೆರೆಯನ್ನು ಹೇಗೆ ಮಾಡುವುದು'' ಎನ್ನುವ ರೀತಿ ಅರಿವಾದದ್ದು. ಸುಸ್ತಾಗಿ ಸುಸ್ತಾದ ರಂಗಸ್ವಾಮಿ ಪದ್ಮಳ ಹತ್ತಿರ ಹೇಳಿದ: ''ವರ್ಷದಲ್ಲಿ ಎರಡು-ಮೂರು ತಿಂಗಳು ನೀರು ತರಲು ಒಂದು ಕೆಲಸದವಳಿಗೆ ಇನ್ನೂರೋ ಮುನ್ನೂರೋ ರೂಪಾಯಿ ನೀಡಿದರೆ ಈ ನೀರಿನ ಸಮಸ್ಯೆಯೇ ಬಗೆಹರಿಯುತ್ತೆ! ಈ ಚೆಂದದ ಮನೆ ಬಿಟ್ಟರೆ ನಮಗೆ ಇಷ್ಟು ಕಡಿಮೆ ಬಾಡಿಗೆಗೆ ಮನೆ ಸಿಗುವುದಾದರೂ ಎಲ್ಲಿ?'' ಹೀಗೆ ಹೇಳಿ ಜೊತೆಗೆ ಪದ್ಮಳಿಗೆ ಸೀರೆ, ಚಿನ್ನದ ಸರ ಎಂದು ಮೇಲಾಸೆಯನ್ನು ತೋರಿಸಿ ಒಪ್ಪಿಸಿದನು.

ರಂಗಸ್ವಾಮಿಯಲ್ಲಿ ಆದ ಈ ಬದಲಾವಣೆ ಕಂಡು ಕೆಲಸದಾಕೆಯನ್ನು ಬೇಡವೆಂದ ಪದ್ಮ ಹುರುಪಿನಿಂದ ನೀರು ಹೊರಲು ಸಿದ್ಧಳಾದಳು. ಎರಡೇ ತಿಂಗಳಲ್ಲಿ 'ಧೋSSS' ಎಂದು ಬಂದ ಮುಂಗಾರು ಮಳೆ ನೀರಿನ ಬರಕ್ಕೆ ತೆರೆ ಎಳೆಯಿತು. ಆಗ ರಂಗಸ್ವಾಮಿಗೆ ಇರುವ ಆ ಮನೆ ಕಂಡು ಸ್ವರ್ಗ ಕಂಡಷ್ಟೇ ಸಂತಸವಾಯಿತು. ಬೀರ್‌ಬಲ್‌ನನ್ನು ಮತ್ತೊಮ್ಮೆ ನೆನೆದು ಮನದಲ್ಲಿಯೇ ವಂದಿಸಿದನು. ಎರಡು ತಿಂಗಳು ನೀರಿನ ಕೊಡ ಹಿಡಿದು ನೀರು ಹೊತ್ತ ಪದ್ಮಳ ಮೈಮಾಟವು ಮತ್ತಷ್ಟು ಸುಂದರವಾಗಿ ರೂಪುಗೊಂಡು ಅವನ ರಸಿಕತೆಯನ್ನು ಹೆಚ್ಚಿಸಿತ್ತು! ಅನಂತಯ್ಯನೊಟ್ಟಿಗೆ ಅಲೆದಾಡಿದಾಗ ನೋಡಿದ್ದ ಬಾಡಿಗೆ ಮನೆಗಳ ಚಿತ್ರಣ ಆಗಾಗ್ಗ ರಂಗಸ್ವಾಮಿಯ ತಲೆಯೊಳಗಡೆ ಮೂಡಿ ಅದನ್ನು ಈಗ ಇರುವ ಮನೆಯೊಟ್ಟಿಗೆ ಹೋಲಿಕೆ ಮಾಡುತ್ತಾ ಜೊತೆಜೊತೆಗೆ ಬೀರಬಲ್‌ಗೂ ಧನ್ಯವಾದಗಳನ್ನು ಅರ್ಪಿಸುತ್ತಾ ಹಾಯಾಗಿ ಕಾಲ ಕಳೆಯತೊಡಗಿದನು ರಂಗು!

ಕ. ಬ. ವೀರಣ್ಣ ಕಣ್ಣಾಗಾಲ
ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಹೊನ್ನಾವರ - ೫೮೧ ೩೩೪

### ತೃಪ್ತಿ

*ಎಲ್ಲೂ ಇಲ್ಲವಲ್ಲ ನೆಮ್ಮದಿ*
*ಎಂದು ಕೊರಗುತ್ತಿದ್ದ ನನಗೀಗ*
*'ಹೊಸತು'ನ ಮುಖಪುಟದಲ್ಲಾದರೂ ಇದೆಯಲ್ಲ*
*ಎಂಬುದೇ ಒಂದಿಷ್ಟು ನೆಮ್ಮದಿ!*

ಸಿದ್ದೀಕ್ ಕೆ. ಎಂ. ಮೊಂಟುಗೋಳಿ
ಮೈಲಾಂಜಿ ಮಾಸಿಕ, ದೇರ್ಲಕಟ್ಟೆ - ೫೭೪ ೧೬೦,
ಮಂಗಳೂರು. ದ.ಕ.

# ಅಣು ಸಂಸ್ಕೃತಿಯ ಅಪಾಯಗಳು

ವಿ. ಚಂದ್ರಶೇಖರ ನಂಗಲಿ

ರೇಸಿಸಂ, ಫ್ಯಾಸಿಸಂ, ಟೆರ್ರರಿಸಂ, ಕಲೋನಿಯಲಿಸಂ, ನ್ಯೂಕ್ಲಿಯರ್ ಸೈಲೋಸ್, ಇಂಪೀರಿಯಲಿಸಂ, ವರ್ಲ್ಡ್ ಕ್ಯಾಪಿಟಲಿಸಂ, ಮಲ್ಟಿ ನ್ಯಾಷನಲ್ ಕಾರ್ಪೊರೇಷನ್ಸ್, ಲಿಬರಲೈಸೇಷನ್, ಗ್ಯಾಟ್ ಒಪ್ಪಂದ - ಇವೆಲ್ಲ ಒಂದೇ ಮೂಲಕ್ಕೆ ಸೇರಿದ ಬಿಡಿಬಿಡಿಯಾದ ಸಂಗತಿಗಳು. ಇವೆಲ್ಲವನ್ನು ಒಟ್ಟಿಗೆ ಸೂಚಿಸುವ ಸಮರ್ಥವಾದ ಪದಕ್ಕೆ ನಾನು ಹುಡುಕಾಡುತ್ತಿದ್ದೆ. ಆಗ ನನಗೆ ನೆನಪಾದದ್ದು ಅಮೆರಿಕಾದ ಮೂಲನಿವಾಸಿ ಜನಪದರ ನುಡಿಗಟ್ಟು, 'WASP'; ಎಂದರೆ ವೈಟ್ ಆಂಗ್ಲೋ ಸ್ಯಾಕ್ಸನ್ ಪ್ರಾಟೆಸ್ಟೆಂಟ್ ಎಂದರ್ಥ. ಇದಕ್ಕೆ ಕಣಜ ಎಂಬ ಪ್ರಸಿದ್ಧ ಅರ್ಥವೂ ಇದೆ. ಇದನ್ನು ಎ. ಎನ್. ಮೂರ್ತಿರಾಯರು ತಮ್ಮ ಅನುಭವ ಕಥನದಲ್ಲಿ ಪ್ರಸ್ತಾಪಿಸಿದ್ದಾರೆ. ಕಣಜವು ಒಂದೇ ಕುಟುಕಿನಿಂದ ಕಂಬಳಿ ಹುಳುವನ್ನು ನಿಶ್ಚೇಷ್ಟಿತಗೊಳಿಸಿ, 'ಕೋಮಾ'ಗೆ ತಳ್ಳಿ, ತನ್ನ ಮರಿಗಳಿಗೆ ಭವಿಷ್ಯದ ಆಹಾರವನ್ನಾಗಿ ಮಾಡಿ, ಗೂಡಿನಲ್ಲಿಡುತ್ತದೆ. ಆಗಲೆ ಹೇಳಿದ 'ವಾಸ್ಪ್' ಜನಗಳಿಂದ ಹಲ್ಲೆಗೊಳಗಾಗಿ ತಮ್ಮ ಸ್ವರೂಪಜ್ಞಾನ ಮತ್ತು ಸಂಸ್ಕೃತಿಯ ಚಹರೆಗಳನ್ನು ಕಳೆದುಕೊಂಡು ಒಂದು ಬಗೆಯ 'ಕೋಮಾ' ದಲ್ಲಿರುವ ಅಮೆರಿಕಾದ ಮೂಲನಿವಾಸಿಗಳು ಆ ಹಲ್ಲೆಕೋರರನ್ನು 'ಕಣಜ' ಎಂದು ಗುರುತಿಸಿದ್ದು ಸರಿಯಾಗಿದೆ. ಪ್ರಪಂಚವನ್ನು ತನ್ನ ಅಂಕೆಯಲ್ಲಿಟ್ಟು ಕೊಳ್ಳಲು 'ವಾಸ್ಪಿಸಂ' ತತ್ವಗಳನ್ನು ಮೆರೆಯುತ್ತಿರುವ ಅಮೆರಿಕಾದಂಥ ಡಾಲರ್ ದೇಶಗಳು ಇಂದಿನ ಪ್ರಪಂಚದ ಶತ್ರು. ಇದನ್ನು ಭಾರತ - ಪಾಕಿಸ್ತಾನಗಳೂ ಸೇರಿದಂತೆ ಡಾಲರೇತರ ದೇಶಗಳೆಲ್ಲ ಅರಿತುಕೊಳ್ಳಬೇಕು.

ಮನುಕುಲದ ಇತಿಹಾಸದಲ್ಲಿ ಸಂಸ್ಕೃತಿಯ ನಿರ್ಮಾಣ, ಶಕ್ತಿಯ ಆವಿಷ್ಕಾರ, ಪರಿಸರಮಾಲಿನ್ಯಗಳು ಮುಪ್ಪುರಿ ಬಂಧವನ್ನು ಹೊಂದಿರುವ ಅಂತರ್ ಸಂಬಂಧಿಯಾದ ಪ್ರಕ್ರಿಯೆಗಳಾಗಿವೆ. ಇವನ್ನು ಬಿಡಿಬಿಡಿಯಾಗಿ ನೋಡುವವರಿಗೆ ಪೂರ್ಣ ಸತ್ಯವು ಗೋಚರವಾಗುವುದಿಲ್ಲ. ಪ್ರಸ್ತುತ, ಸಂಸ್ಕೃತಿಯ ನಿರ್ಮಾಣದಲ್ಲಿ ಶಕ್ತಿಯ ಆವಿಷ್ಕಾರ ಮತ್ತು ಪರಿಸರ ಮಾಲಿನ್ಯಗಳ ಅಂತರ್ ಸಂಬಂಧವನ್ನು ಗ್ರಹಿಸೋಣ: ಆದಿ ಮಾನವನಿಂದ ಹಿಡಿದು ನದಿದಂಡೆಗಳ ನಾಗರಿಕತೆವರೆಗೆ ಸಾಗಿಬಂದ ಸುದೀರ್ಘ ಸಂಸ್ಕೃತಿಯ ಯಾನಕ್ಕೆ '**ಪ್ರಾಕೃತ ಶಕ್ತಿ**'ಗಳೇ ಚಾಲಕರು. ನೀರು, ಗಾಳಿ, ಬಿಸಿಲು ಮುಂತಾದ ಪ್ರಾಕೃತ ದ್ರವ್ಯಗಳಲ್ಲಿ ಯಥಾವತ್ತಾಗಿರುವ ಶಕ್ತಿಯ ಆವಿಷ್ಕಾರ ಮತ್ತು ಬಳಕೆಯನ್ನೆ ನಾನಿಲ್ಲಿ 'ಪ್ರಾಕೃತ ಶಕ್ತಿ'ಗಳು ಎಂದು ಕರೆದಿದ್ದೇನೆ. ಗಾಳಿ ಬಂದಾಗ ತೂರಿಕೊ, ಮಳೆಬಿದ್ದಾಗ ಬೆಳೆ, ಬಿಸಿಲು ಇದ್ದಾಗ ಒಣಗಿಸು, ಎಂಬುದನ್ನಿಲ್ಲಿ ಮನಗಾಣಬಹುದು. ಏತ, ಗೂಡೆ, ಕಪಿಲೆ, ಚಕ್ರಬಾವಿ ಇವು ಪ್ರಾಕೃತ ಶಕ್ತಿಗಳ ಬಳಕೆಯ ಬೇರೆಬೇರೆ ವಿಧಾನಗಳೆನ್ನಬಹುದು. ದ್ರವ್ಯ ಮತ್ತು ಶಕ್ತಿಗಳ ನಡುವೆ ಸಹಜ ಸಂಬಂಧದ ಉಳಿವು ಇಲ್ಲಿ ಎದ್ದು ಕಾಣುತ್ತದೆ. ಹೀಗಾಗಿ ಮಾಲಿನ್ಯ ಮುಕ್ತ ವಾತಾವರಣವೆಂಬುದು ಈ ಪ್ರಕ್ರಿಯೆಯಲ್ಲಿ ಅಯಾಚಿತ ಸಿದ್ಧಿಯಾಗಿದೆ.

ಇದಾದನಂತರ ಸಂಸ್ಕೃತಿ ನಿರ್ಮಾಣದಲ್ಲಿ ನಾವು ಕಾಣುವುದು '**ಸಂಸ್ಕೃತ ಶಕ್ತಿ**'ಗಳನ್ನು. ಪ್ರಾಕೃತ ದ್ರವ್ಯಗಳ ಸಂಸ್ಕರಣವನ್ನಿಲ್ಲಿ ಗಮನಿಸಬಹುದು. ನೀರನ್ನು ಕುದಿಸಿ ಆವಿ, ನೀರನ್ನು ಹಾಯಿಸಿ ವಿದ್ಯುತ್, ತರಂಗ ಶಕ್ತಿ, ಗಾಳಿಯಂತ್ರಗಳು, ಸೌರಶಕ್ತಿ, ತೈಲ ಬಾವಿಗಳು, ಕಲ್ಲಿದ್ದಲು ಗಣಿಗಳು - ಇವೆಲ್ಲ ಪ್ರಾಕೃತ ದ್ರವ್ಯಗಳ ಸಂಸ್ಕರಣದಿಂದ ಹೊರಹೊಮ್ಮುವ ವೈವಿಧ್ಯಮಯ ಶಕ್ತಿಗಳ ಆವಿಷ್ಕಾರ ಮತ್ತು ಬಳಕೆಯ ಬೇರೆಬೇರೆ ನಿದರ್ಶನಗಳಾಗಿವೆ. ಈ ಸಂಸ್ಕೃತ ಶಕ್ತಿಗಳ ನೆರವಿನಿಂದಲೇ ಸಮುದ್ರಯಾನಗಳು, ವಸಾಹತುಶಾಹಿ, ಕೈಗಾರಿಕೀಕರಣ ಮತ್ತು ನಗರ ನಾಗರಿಕತೆಗಳು ಕ್ರಮೇಣ ರೂಪುಗೊಂಡವು. ಜೊತೆಗೆ ಭೂಗೋಳದಲ್ಲಿ ಮೊದಲಬಾರಿಗೆ ಬೃಹತ್ ಪ್ರಮಾಣದ ಅರಣ್ಯನಾಶ ಮತ್ತು ವಾತಾವರಣಕ್ಕೆ ಇಂಗಾಲಾದಿ ಸಂಯುಕ್ತಗಳ ವಿಸರ್ಜನೆಗಳು ಸೇರ್ಪಡೆಯಾದವು. ಪ್ರಾಕೃತ ದ್ರವ್ಯ ಸಂಸ್ಕರಣ ಮತ್ತು ಶಕ್ತಿ ಸುಧಾರಣೆಗಳು ಮಾನವ ಜನಪದವನ್ನು ಪ್ರಗತಿ ಮೀಮಾಂಸೆಯತ್ತ ಕೊಂಡೊಯ್ಯುತ್ತಿದ್ದಂತೆಯೇ ತನ್ನ ಕರಿನೆರಳಾಗಿ 'ಗೋಚರಮಾಲಿನ್ಯ'ದ ಶಕೆಯನ್ನಾರಂಭಿಸಿತು. ನಾವಿಂದು [illegible] ಸೇಷನ್ ಅಥವಾ 'ಹಸಿರು ಮನೆ ಪರಿಣಾಮಗಳು' ಸಂಸ್ಕೃತ ಶಕ್ತಿಗಳ ಕೊಡುಗೆಗಳೆಂಬುದನ್ನು ನಿರಾಕರಿಸುವಂತಿಲ್ಲ.

ಇಂಥ ಸಂಸ್ಕೃತ ಶಕ್ತಿಗಳ ನಂತರ, ಸಂಸ್ಕೃತಿಯ ನಿರ್ಮಾಪಕನಾಗಿ ಮೆರೆಯುತ್ತಿರುವುದು '**ವಿಕೃತ ಶಕ್ತಿಗಳು**'. ಉದಾ : ಯುರೇನಿಯಂ ಮತ್ತು ಥೋರಿಯಂ ಗಣಿಗಾರಿಕೆ. ಪ್ರಾಕೃತ ದ್ರವ್ಯಗಳ ಅತ್ಯಲ್ಪ ಭಾಗದ ನಾಶದಿಂದ ಉತ್ಪನ್ನವಾಗುವ ಅಗಾಧ ಶಕ್ತಿಯ ಆವಿಷ್ಕಾರ ಕಡಿಮೆ ಅವಧಿಯಲ್ಲಿ ಮಾನವಕುಲವನ್ನು ಎರಡು 'ಅತಿ'ಗಳಿಗೆ ಕರೆದೊಯ್ದಿತು : ಅಣುಶಕ್ತಿಯ ನೆರವಿನಿಂದ ೧೯೪೫ರಲ್ಲಿ ಜಪಾನ್ ದೇಶದಲ್ಲಿ ನಡೆಸಿದ ನರಮೇಧ ಮತ್ತು ೧೯೬೯ರಲ್ಲಿ ಸಾಧ್ಯವಾದ ಚಂದ್ರನ ಮೇಲೆ ಮಾನವನ ಪಾದಾರ್ಪಣೆ. ಇವು ಇಂದಿನ ಶಕ್ತಿ ಬಳಕೆಯ ವಿಭಿನ್ನ ನಿದರ್ಶನಗಳಾಗಿವೆ. ಮಾನವ ಕೃತ ಅಣುವಿಕಿರಣದಿಂದಾಗಿ ಭೂಗೋಳಕ್ಕೆ ಹೊಸದಾಗಿ 'ಅಗೋಚರ ಮಾಲಿನ್ಯ' ಸೇರ್ಪಡೆಗೊಂಡಿತು. ವಿಕಲ ಸಂತಾನ, ಕ್ಯಾನ್ಸರ್ ಪೀಡೆ, ಲ್ಯುಕೇಮಿಯಾಗಳು ಹಿರೋಷಿಮಾ- ನಾಗಸಾಕಿ- ಚೆರ್ನೊಬಿಲ್ ಪ್ರದೇಶಗಳಲ್ಲಿ ಇನ್ನು ಮುಂದೆ ಲಕ್ಷಾಂತರ ವರ್ಷಗಳವರೆಗೆ ಪ್ರಕಟಗೊಳ್ಳುವ ವಿದ್ಯಮಾನವಾಗಿದೆ. ರಸಗೊಬ್ಬರ, ಕ್ರಿಮಿ-ಕೀಟನಾಶಕಗಳ ವಿಪುಲ ಬಳಕೆಯಿಂದಾಗಿ 'ವಿಷಭೂಮಿ' ರೂಪುಗೊಳ್ಳುತ್ತಿದೆ. ಇದು ಸಾಲದೆಂಬಂತೆ ಸಮುದ್ರ ಗರ್ಭದಲ್ಲಿ, ಮರುಭೂಮಿ ಗರ್ಭದಲ್ಲಿ ಎಲ್ಲ ರಾಷ್ಟ್ರಗಳು ಅಣ್ವಸ್ತ್ರ ಪರೀಕ್ಷೆಯನ್ನು ನಡೆಸುತ್ತಲೇ ಇವೆ. ಪ್ರಾಕೃತ ದ್ರವ್ಯಗಳ ವಿದಳನ ಮತ್ತು ಸಂದಳನದಿಂದ ಉತ್ಪನ್ನವಾಗುವ ವಿಕೃತ ಶಕ್ತಿಗಳೇ ಇಂದಿನ ನವನಾಗರಿಕತೆಗೆ ಬೆಳಕು ನೀಡುತ್ತಿವೆ. ಗರ್ಭ ಧರಿಸುವುದಕ್ಕೂ ಮುಂಚೆ, ವೀರ್ಯಾಣುಗಳ ಹಂತದಲ್ಲೇ ಮಾನವ ಕೃತ ಅಣು ವಿಕಿರಣವು [illegible] ದುಷ್ಪ್ರಭಾವಗಳನ್ನು ಪ್ರಜ್ಞಾವಂತರು ಮನಗಂಡಿದ್ದಾರೆ.

ಹ್ರಸ್ವದೃಷ್ಟಿಗೆ ಬದ್ಧರಾದವರು [illegible] ನಡೆಸಿದ ಪೋಖ್ರಾನ್ [illegible] ದೇಶ ರಕ್ಷಣೆಯ [illegible] ಇದು ಸರಿಯಲ್ಲ! [illegible] 'ಅಣುಪ್ರಧಾನ ಸಂಸ್ಕೃತಿ'ಯಿಂದಾಗಿ [illegible] ಸಮಸ್ಯೆಗಳು [illegible] ಅಣುವಿಕಿರಣಕ್ಕೂ 'ಅಗೋಚರ ಮಾಲಿನ್ಯ' [illegible] ಮಾಡುವ [illegible]



ವ್ಯತ್ಯಾಸಗಳಿವೆ : ಬಾಳೆಯ ತೋಟದಲ್ಲಿ ಹಾರಾಡಿಕೊಂಡಿರುವ ಪಕ್ಷಿ ಬಳಗಕ್ಕೆ 'ನೈಸರ್ಗಿಕ ಅಣುವಿಕಿರಣ'ವನ್ನು ಹೋಲಿಸಲಾಗಿದೆ. ಆದರೆ ಮಾನವ ಕೃತ ಅಣುವಿಕಿರಣವು ಬಾಳೆಯ ತೋಟವನ್ನು ನುಗ್ಗು ನುರಿ ಮಾಡುವ ಕೋತಿ ಬಳಗಕ್ಕೆ, ಅಥವಾ ವಿಧ್ವಂಸಗೊಳಿಸುವ ಆನೆಹಿಂಡುಗಳಿಗೆ ಹೋಲುತ್ತದೆ. ಮಾನವ ಸಂತಾನವನ್ನು ನಿರ್ಣಯಿಸುತ್ತಿರುವ ಡಿ.ಎನ್.ಎ. ಜೈವಿಕ ಜಾಲವು ಬಾಳೆಯ ತೋಟವಿದ್ದಂತೆ. ನೈಸರ್ಗಿಕ ಅಣುವಿಕಿರಣದ ಪ್ರಮಾಣವನ್ನು ಮೀರಿ ವರ್ತಿಸುತ್ತಿರುವ ಮಾನವ ಕೃತ ಅಣುವಿಕಿರಣವು ಭವಿಷ್ಯದಲ್ಲಿ ಗಂಭೀರ ಸ್ವರೂಪದ ಜೈವಿಕ ಸಮಸ್ಯೆಗಳನ್ನು ಸೃಷ್ಟಿಸಿಬಿಡುತ್ತವೆಂದು ವಿಜ್ಞಾನಿಗಳು ಪ್ರತ್ಯಕ್ಷ ಪ್ರಮಾಣದಿಂದ ಹೇಳುತ್ತಿರುವ ಎಚ್ಚರಿಕೆಯ ನುಡಿಗಳು ಮೂಕರೋದನವಾಗುತ್ತಿರುವುದು ಮನುಕುಲದ ದೌರ್ಭಾಗ್ಯವಾಗಿದೆ. ವಿಕೃತ ಶಕ್ತಿಗಳ ಮರೆಹೊಕ್ಕಾಗ ವಿಕೃತ ಪರಿಣಾಮಗಳಲ್ಲದೆ 'ಸುಕೃತ' ಹೇಗೆ ಸಾಧ್ಯ? ಅಣುಶಕ್ತಿಗೆ ಪರ್ಯಾಯವಾಗಿ ಪ್ರಾಕೃತ ಶಕ್ತಿಗಳ ಸಂಸ್ಕರಣಕ್ಕೆ ಆದ್ಯತೆ ನೀಡಿರುವ **'ಸ್ವಿಟ್ಜರ್‌ಲೆಂಡ್ ಮತ್ತು ನಾರ್ವೆ ಮಾದರಿ'** ಇಂದು ಮನುಕುಲದ ಆದರ್ಶವಾಗಬೇಕು.

ಆದರೆ ದಿನೇ ದಿನೇ ಹೆಚ್ಚುತ್ತಿರುವ ಅಣುಶಕ್ತಿಯ ಅಗಸ್ತ್ಯದಾಹ 'ಇರುವುದೊಂದೇ ಭೂಮಿ'ಯ ಬಗ್ಗೆ, ಮಾನವನೂ ಸೇರಿದಂತೆ ಸಕಲ ಜೀವಿಸಂಕುಲಗಳ ಭವಿಷ್ಯದ ಬಗ್ಗೆ, ಆತಂಕ ಹುಟ್ಟಿಸುತ್ತಿದೆ. ಇದನ್ನು ಸರಿಯಾಗಿ ಗ್ರಹಿಸಬೇಕಾದರೆ ಅಣುಶಕ್ತಿ ಸ್ಥಾವರಗಳ ಸಾಮರ್ಥ್ಯವನ್ನು ಬಿಂಬಿಸುವ ಅಂಕಿ ಅಂಶಗಳನ್ನು ತಿಳಿಯಬೇಕಾಗುತ್ತದೆ : ಜಗತ್ತಿನ ಪ್ರಥಮ ಅಣುಶಕ್ತಿ ಸ್ಥಾವರವು ೧೯೪೨ರಲ್ಲಿ ಚಿಕಾಗೋ ವಿಶ್ವವಿದ್ಯಾಲಯದಲ್ಲಿ ಫರ್ಮಿ ಎಂಬ ವಿಜ್ಞಾನಿಯ ನೇತೃತ್ವದಲ್ಲಿ ೦೨ ಕಿಲೋವಾಟ್ ಸಾಮರ್ಥ್ಯದೊಂದಿಗೆ ಆರಂಭವಾಯಿತು. (ಮುಂದೆ ಮೂರು ವರ್ಷಗಳ ಹೊತ್ತಿಗೆ ಜಪಾನ್ ಮೇಲೆ ಬಾಂಬು ಹಾಕಲ್ಪಟ್ಟಿತು). ಕ್ರಮೇಣ ಜಗತ್ತಿನ ಎಲ್ಲೆಡೆ ವಿದ್ಯುತ್ ಉತ್ಪಾದನೆಗಾಗಿ ಅಣುಶಕ್ತಿ ಸ್ಥಾವರಗಳು ತಲೆ ಎತ್ತಲಾರಂಭಿಸಿದವು. ೧೯೫೪ರಲ್ಲಿ ಸೋವಿಯತ್ ಒಕ್ಕೂಟದಲ್ಲಿ ಕೇವಲ ೦೫ ಮೆಗಾವಾಟ್ ಸಾಮರ್ಥ್ಯದ ಅಣುಶಕ್ತಿ ಸ್ಥಾವರ ಆರಂಭವಾಯಿತು. ೧೯೬೪ರಲ್ಲಿ (ಹತ್ತು ವರ್ಷಗಳ ಅಂತರದಲ್ಲಿ) ಎಲ್ಲ ಪ್ರಬಲ ರಾಷ್ಟ್ರಗಳಲ್ಲಿ ಐದು ಸಾವಿರ ಮೆಗಾವಾಟ್ ಸಾಮರ್ಥ್ಯದ ರಿಯಾಕ್ಟರ್‌ಗಳು ತಲೆಯೆತ್ತಿದವು. ಎಪ್ಪತ್ತು-ಎಂಭತ್ತರ ದಶಕದಲ್ಲಿ ಪ್ರಬಲ ರಾಷ್ಟ್ರಗಳು ಹೊಂದಿರುವ ಅಣುಶಕ್ತಿ ಸ್ಥಾವರಗಳು ಐವತ್ತು ಸಾವಿರ ಮೆಗಾವಾಟ್ ಸಾಮರ್ಥ್ಯಕ್ಕೂ ಹೆಚ್ಚಿನದಾಗಿವೆ. ಇಂದು ಡಾಲರ್ ದೇಶಗಳಲ್ಲಿ ಸೂರ್ಯಶಕ್ತಿಗೆ ಸಮನಾದ ರಿಯಾಕ್ಟರುಗಳಿವೆ. ಅತ್ಯಧಿಕ ಸಾಮರ್ಥ್ಯದ ರಿಯಾಕ್ಟರ್ ಅಮೆರಿಕಾದ ಪ್ರಿನ್ಸ್‌ಟನ್‌ನಲ್ಲಿದೆ. ಪ್ರಸ್ತುತ, ಇಂಥ ಎಷ್ಟೋ ರಿಯಾಕ್ಟರುಗಳು ನಿರ್ವಹಣೆಯ ದುಬಾರಿ ವೆಚ್ಚದಿಂದಾಗಿ ಮುಚ್ಚಲ್ಪಟ್ಟಿವೆ ಅಥವಾ ಚೆರ್ನೊಬಿಲ್ ಸೋದರಿಯಾಗಲು ಭೂಗರ್ಭದಲ್ಲಿ ಕುದಿಯುತ್ತಾ ಕುಳಿತಿವೆ. ಪರಿಸ್ಥಿತಿ ಹೀಗಿದ್ದರೂ ಅಣುಶಕ್ತಿಯ ಶಾಂತಿಯುತ ಮತ್ತು ಸುರಕ್ಷಾ ಬಳಕೆಗೆ ಪ್ರಪಂಚ ಮಟ್ಟದಲ್ಲಿ ವ್ಯಾಪಕ ಪ್ರಚಾರ ಲಭಿಸುತ್ತಿದೆ. ಭಾರತವು ಈ ನಿಟ್ಟಿನಲ್ಲಿ ಹಿಂದೆ ಬೀಳದೆ ಕ್ರಿ.ಶ. ೨೦೫೦ರ ಹೊತ್ತಿಗೆ ಐವತ್ತು ಸಾವಿರ ಮೆಗಾವಾಟ್ ಸಾಮರ್ಥ್ಯವನ್ನು ಹೊಂದಿರುವ ರಿಯಾಕ್ಟರುಗಳ ಸಂಶೋಧನೆಗೆ ತನ್ನನ್ನು ತೊಡಗಿಸಿಕೊಂಡಿದೆ.

'ರವಿ ಮುಳುಗದ ಸಾಮ್ರಾಜ್ಯ' ಸೃಷ್ಟಿಗೆ ಕಾರಣವಾದ **'ನೇರ ವಸಾಹತುಗಳ ಯುಗ'** ಇಂದು ಮುಗಿದ ಅಧ್ಯಾಯವಾಗಿದೆ. ಈಗ ''ಕಣಜ ಸಂಸ್ಕೃತಿ'' ತತ್ವಗಳ ಮೂಲಕ **'ದೂರ ವಸಾಹತುಗಳ ಶಕೆ'** ಆರಂಭವಾಗಿದೆ. ವಿಕೃತ ಶಕ್ತಿಗಳ ನೆರವಿನಿಂದ ಭೂಗೋಳದ ಮೇಲೆ ಏಕಚಕ್ರಾಧಿಪತ್ಯವನ್ನು ಸಾಧಿಸಲು ಹವಣಿಸುತ್ತಿರುವ ಅಮೆರಿಕಾ 'ಅಣ್ವಸ್ತ್ರ ನಿಷೇಧ ಒಪ್ಪಂದ'ಕ್ಕೆ ಒತ್ತಾಯಿಸುತ್ತಿರುವುದು ಕಪಟ ನಾಟಕವಾಗಿದೆ. 'ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲಾ' ಎಂಬಂತೆ ಎಲ್ಲ ದೇಶ ವಿದೇಶಗಳಿಗೆ ಬಾಂಬುಗಳೇ ಮಿಠಾಯಿಗಳಾಗುತ್ತಿವೆ. ಹೀಗಾಗಿ, ಅಣು ಅಮೇಧ್ಯವನ್ನು ಯಥೇಚ್ಛವಾಗಿ ತಿನ್ನುತ್ತಿರುವ ಐದು ಪ್ರಬಲ ರಾಷ್ಟ್ರಗಳು ಪಶುಗಳಿದ್ದಂತೆ ! ಶತಮಾನಗಳ ಶಾಂತಿ ದೂತನೆಂದು ಹೆಸರಾದ ಭಾರತವು ಪಶುಪತಿ ಇದ್ದಂತೆ ! ''ಪಶುವಾನು ಪಶುಪತಿ ನೀನು'' ಎಂಬ ಬಸವಣ್ಣನ ವಚನವನ್ನು ನಾನು ಹೀಗೆಯೇ ವ್ಯಾಖ್ಯಾನಿಸುತ್ತೇನೆ. ಅಣು ಅಮೇಧ್ಯದ ಕೆಸರಿನಲ್ಲಿ ಹೊರಳುತ್ತಿರುವ ಪಶುರಾಷ್ಟ್ರಗಳ ಕೊಂಬನ್ನು ಎತ್ತಿ ಹಿಡಿದು ವಿಶ್ವ ಶಾಂತಿಯ ದಡ ಕಾಣಿಸಬೇಕಾದ ನೈತಿಕ ಅರ್ಹತೆ ಮತ್ತು ಆಧ್ಯಾತ್ಮಿಕ ಘನತೆಯನ್ನು ಹೊಂದಿದ್ದ ಪಶುಪತಿಯೇ ಭಾರತ. ಆದರೆ, ಪೋಖ್ರಾನ್ ಸ್ಫೋಟಗಳ ಮೂಲಕ ಭಾರತವು ಕೂಡ ಅಣು ಅಮೇಧ್ಯ ತಿನ್ನುವ ಪಶುವಾಗಲು ಹೊರಟಿದ್ದು ಅವಮಾನದ ಸಂಗತಿಯಾಗಿದೆ.

> *ಐವತ್ತೈದು ವರ್ಷಗಳ ಹಿಂದೆ ಹಿರೋಷಿಮಾ-ನಾಗಾಸಾಕಿ ಮಾನವ ಹತ್ಯೆ ನಡೆದದ್ದು ಅಣು ಬಾಂಬಿನ ಪ್ರಯೋಗದಿಂದ. ಅನವಶ್ಯಕವಾಗಿದ್ದ ಈ ಘೋರ ಹಲ್ಲೆ ನಡೆಸಿದ್ದು ಅಮೆರಿಕಾ. ಅಣು ಬಾಂಬೆಂದರೆ ಉತ್ಸಾಹ ಹೆಚ್ಚುತ್ತಿರುವ ಸಂದರ್ಭದಲ್ಲಿ ಅದರ ಮಾರಕ ಶಕ್ತಿಯ ಪರಿಚಯ ಪಡೆಯುವುದು ಒಳ್ಳೆಯದು. ಆಗಲಾದರೂ ಪ್ರಜ್ಞಾವಲಯ ಭಿನ್ನವಾಗಬಹುದೆಂಬ ಆಶಾಭಾವನೆ ಇದೆ.*

ಮಾನವ ಸಮುದಾಯದ ಮೇಲೆ ಅಣ್ವಸ್ತ್ರಗಳನ್ನು ಮೊದಲು ಪ್ರಯೋಗಿಸಿದ **'ಪೈಶಾಚಿಕ ರಾಷ್ಟ್ರ'**ವೆಂಬ ಬಿರುದು ಅಮೆರಿಕಾಗೆ ಸಿಕ್ಕಿದೆ. ಇದೀಗ ಪೋಖ್ರಾನ್ ಸ್ಫೋಟಗಳಿಂದಾಗಿ ಏಷ್ಯಾಖಂಡದಲ್ಲಿ ಅಣ್ವಸ್ತ್ರ ಪೈಪೋಟಿಗೆ ನಾಂದಿ ಹಾಡಿದ **'ತುರಿಕಜ್ಜಿ ರಾಷ್ಟ್ರ'**ವೆಂಬ ಬಿರುದು ಭಾರತಕ್ಕೆ ಲಭ್ಯವಾಗಿದೆ. ಆಟಂಬಾಂಬ್ ಅಪಾಯವೇನೆಂಬುದು ಆಟಂಬಾಂಬಿನ ಸೂತ್ರಕಾರನಿಗೆ ಗೊತ್ತು; ೧೯೪೫ರಲ್ಲಿ ಜಪಾನ್ ಮೇಲೆ ಬಿದ್ದ ಆಟಂಬಾಂಬಿನ ಸುದ್ದಿ ಕೇಳಿದ ಐನ್‌ಸ್ಟೈನ್ **''ದೇವರೆ ! ■ ನೀಲಿ ಬೆಳಕನ್ನು ಜಗತ್ತು ಮತ್ತೆ ಕಾಣದಿರಲಿ''** -ಎಂದು ಉದ್ಗರಿಸಿದ್ದರು. ಅಣುವಿಕಿರಣವನ್ನು ಕಂಡುಹಿಡಿದು ಕ್ಯಾನ್ಸರ್ ರೋಗಕ್ಕೆ ಬಲಿಪಶುವಾದ ಮೇರಿ ಕ್ಯೂರಿ **''ಅಣುಶಕ್ತಿಯ ಬಳಕೆಯಲ್ಲಿ ಶಾಂತಿ ಮತ್ತು ಸುರಕ್ಷೆಗಳೆಂಬುದು ಶುದ್ಧ ಸುಳ್ಳು''** ಎಂದಿದ್ದಾರೆ. ಚೆರ್ನೊಬಿಲ್ ದುರಂತದ ಶುದ್ಧೀಕರಣ ಕಾರ್ಯಾಗಾರದ ಮುಖ್ಯಸ್ಥ ಚೆರ್ನೊವ್-ಸೆಂಕೊ ಪ್ರಸ್ತುತ ಕ್ಯಾನ್ಸರ್ ಪೀಡಿತನಾಗಿದ್ದು ಅಣು ದುರಂತದ ಗಹನತೆಯನ್ನು ವಿಶ್ವಕ್ಕೆ ಮನದಟ್ಟು ಮಾಡುತ್ತಾ **''ನಾವು ಸದ್ದಿಲ್ಲದಂತೆ ಸಾಯುತ್ತೇವೆ,''** ಎಂಬ ಸವಿವರ ಮಾಹಿತಿ ಒದಗಿಸಿದ್ದಾನೆ.

ವಿಕೃತ ಶಕ್ತಿಗಳಿಂದ ಹುಟ್ಟುವ ಈ ಅಣ್ವಸ್ತ್ರಗಳಿಗೆ ಇಟ್ಟಿರುವ ಹೆಸರುಗಳೂ ವಿಕೃತವಾಗಿವೆ: ೧೯೪೫ರಲ್ಲಿ ಜಪಾನ್ ಮೇಲೆ ಹಾಕಿದ ಬಾಂಬುಗಳು **'ಲಿಟಲ್ ಬಾಯ್'** ಮತ್ತು **'ಫ್ಯಾಟ್‌ಮ್ಯಾನ್'** ಎಂಬ ಹೆಸರಿನವು. ಇವು ಕುಬ್ಜತೆ ಮತ್ತು ಬೊಜ್ಜುತನಗಳ ಪ್ರತೀಕವಾಗಿರುವುದು ಆಕಸ್ಮಿಕವಾದರೂ ಸತ್ಯವಾಗಿದೆ. ಅಣು ಪ್ರಧಾನ ಸಂಸ್ಕೃತಿಯಲ್ಲಿ ಬದುಕುತ್ತಿರುವ ಡಾಲರ್ ಪ್ರಜೆಗಳು ಶ್ರಮಜೀವನದ ಯೋಗವನ್ನು ನಿರಾಕರಿಸುತ್ತಾ, ವಿಶ್ರಮ ಜೀವನದ ಭೋಗವನ್ನು ಅಪ್ಪಿಕೊಳ್ಳುತ್ತಾ ಮಾನಸಿಕವಾಗಿ ಕುಬ್ಜರೂ ದೈಹಿಕವಾಗಿ ಬೊಜ್ಜುಳ್ಳವರೂ ಆಗುತ್ತಿದ್ದಾರೆ. ವರದಿಯೊಂದರ ಪ್ರಕಾರ ಅಮೆರಿಕಾದಲ್ಲಿಂದು ಬೊಜ್ಜುಮಕ್ಕಳು ಮತ್ತು ಬೊಜ್ಜು ವಯಸ್ಕರ ಸಂಖ್ಯೆ ಹೆಚ್ಚುತ್ತಿದೆ.

ಭಾರತ ಮತ್ತು ಪಾಕಿಸ್ತಾನಗಳು ಕ್ಷಿಪಣಿಗಳಿಗೆ ಇಟ್ಟಿರುವ ಹೆಸರುಗಳು : ಅಗ್ನಿ, ಪೃಥ್ವಿ, ಗಜ್ನಿ, ಗೋರಿ. - ವಿಕೃತವಾದ, ಸೇಡಿಗೆ ಸೇಡು ಎನ್ನುವ ಹೆಸರುಗಳಿವು. ವಿಕೃತಿ ಇರುವಲ್ಲಿ, ಸೇಡಿನ ಹೃದಯದಲ್ಲಿ ಸೌಂದರ್ಯ ಪ್ರಜ್ಞೆ ಹೇಗೆ ಸಾಧ್ಯ ! ವಿಶ್ವಶಾಂತಿಯು ಸ್ವಯಂಭೂ ಅಲ್ಲ; ತನಗೆ ತಾನೆ ಹುಟ್ಟುವುದಿಲ್ಲ. ಅದಕ್ಕಾಗಿ ನಿರಂತರ ಸಂಘಟನೆ ಮತ್ತು ಅವಿರತ ಹೋರಾಟ ನಡೆಸಬೇಕು. ಯುದ್ಧ ಭೀತಿ, ಯುದ್ಧದ ಉತ್ಸಾಹ, ಯುದ್ಧದ ಬಲಿದಾನಗಳು ಪ್ರಭುತ್ವವೊಂದರ ಚಾಣಕ್ಯ ತಂತ್ರಗಳು ಎಂಬುದನ್ನು ಪ್ರತಿಯೊಬ್ಬರೂ ಅರಿಯಬೇಕು. ಈ ದಿಸೆಯಲ್ಲಿ ಸಮೂಹ ಮಾಧ್ಯಮಗಳು, ಸಾಹಿತ್ಯ ಮತ್ತು ಕಲಾಕ್ಷೇತ್ರಗಳೊಂದಾಗಿ ಸದಭಿಪ್ರಾಯವನ್ನು ರೂಪಿಸಬೇಕು. ತನ್ಮೂಲಕ ವಿಶ್ವಶಾಂತಿಯ ಸ್ಫೂರ್ತಿಗೆ ತಮ್ಮ ಅಮೂಲ್ಯ ಕಾಣಿಕೆ ಸಲ್ಲಿಸಬೇಕು.

ಅಸ್ತ್ರ ಪರೀಕ್ಷೆ ಮಾಡುವವನಿಗೆ (ಅ) ಅಸ್ತ್ರಪ್ರಾವೀಣ್ಯ ಮತ್ತು (ಆ) ಅಸ್ತ್ರ ಉಪಸಂಹಾರ ಎರಡೂ ಗೊತ್ತಿರಬೇಕು. ಇದನ್ನೇ ಅಸ್ತ್ರ ಪರೀಕ್ಷೆಯ ಪರಿಪೂರ್ಣತೆ ಎನ್ನುತ್ತೇವೆ. ಆದರೆ ಅಣ್ವಸ್ತ್ರ ಪ್ರಯೋಗ ಮತ್ತು ಪರೀಕ್ಷೆಯಲ್ಲಿ ಉಪಸಂಹಾರದ ಪ್ರಶ್ನೆಯೇ ಇಲ್ಲ! ಮಾನವ ಕೃತ ಅಣುವಿಕಿರಣವು ಭೂಗೋಳದಲ್ಲಿ ಅಗೋಚರ ಮಾಲಿನ್ಯಕ್ಕೆ ಕಾರಣವಾಗುತ್ತದೆ. ಅಣ್ವಸ್ತ್ರವನ್ನು ಒಮ್ಮೆ ಪರೀಕ್ಷಾರ್ಥ ಮರುಭೂಮಿ ಗರ್ಭದಲ್ಲಿ ಅಥವಾ ಸಮುದ್ರ ಗರ್ಭದಲ್ಲಿ ಸ್ಫೋಟಿಸಿದರೂ ಸಾಕು! ಇದರಿಂದ ಆಗುವ ವಿಪತ್ ಪರಂಪರೆಗೆ ಯಾವ ತಡೆಯೂ ಇಲ್ಲ. ಹೊಸ ಹೊಸ ಭೂಕಂಪಗಳಿಗೂ ಅಣ್ವಸ್ತ್ರಸ್ಫೋಟಗಳಿಗೂ ಇರುವ ಸರಪಳಿ ಸಂಬಂಧವನ್ನು ವೈಜ್ಞಾನಿಕ ಅಧ್ಯಯನಗಳು ಸಾಬೀತುಗೊಳಿಸಿವೆ. ಅಣುರೋಗ ಪೀಡಿತ 'ಹಿಬಕುಶಾ'

ಜನಾಂಗವನ್ನು ಹೇಗೆ ಉಪಸಂಹಾರ ಮಾಡುವುದು?

ಈ ದೃಷ್ಟಿಯಿಂದ ವಿ.ಸೀ. ಅವರ **ಆಗ್ರಹ** ಮತ್ತು ಕುವೆಂಪು ಅವರ **ಬೆರಳ್ಗೆ ಕೊರಳ್** ಎಂಬ ನಾಟಕಗಳಲ್ಲಿರುವ ಅಸ್ತ್ರ ಪ್ರಯೋಗ ಮತ್ತು ಅಸ್ತ್ರ ಪರೀಕ್ಷಾ ಪ್ರಸಂಗಗಳನ್ನು ಪರಿಶೀಲಿಸಬಹುದು. ಅಶ್ವತ್ಥಾಮನಿಗೆ ಅಸ್ತ್ರ ಪ್ರಯೋಗ ಗೊತ್ತು! ಉಪಸಂಹಾರ ಗೊತ್ತಿಲ್ಲ. ಪಂಚಪಾಂಡವರನ್ನು ಕೊಲ್ಲಲು ಹೋಗಿ ಅವರ ಮಕ್ಕಳಾದ ಉಪಪಾಂಡವರನ್ನು ಸಂಹರಿಸಿದ ಅಶ್ವತ್ಥಾಮನು ಬಂಜೆ ಕ್ರೋಧದಿಂದ ತಪ್ತನಾಗಿ ತನ್ನ ಬಳಿ ಇದ್ದ ದಿವ್ಯಾಸ್ತ್ರವನ್ನು ನಿರ್ವಂಶ ಗೊಳಿಸಲು ಗುರಿಮಾಡಿ **ನಿಷ್ಪಾಂಡವಾಸ್ತು** ಎಂದು ಹೇಳಿ ಉತ್ತರೆಯ ಗರ್ಭದ ಮೇಲೆ ಪ್ರಯೋಗಿಸಿಬಿಡುತ್ತಾನೆ. ನಂತರ, ಕೃಷ್ಣ, ಭೀಮರಿಂದ ಭಂಗಿತನಾಗಿ ಶಿರೋರತ್ನ ಕಳೆದುಕೊಂಡು ಹುಚ್ಚನಾಗಿ, ತಲೆಯಿಂದ ರಕ್ತ ಸುರಿಸುತ್ತಾ, ಶಾಪಗ್ರಸ್ತನಾಗಿ ಅಲೆಯುತ್ತಾನೆ. ಇದಿಷ್ಟು 'ಅಶ್ವತ್ಥಾಮನ ಆಗ್ರಹ' ಎನ್ನಬಹುದು.

'ಬೆರಳ್ಗೆ ಕೊರಳ್' ನಾಟಕದಲ್ಲಿ ಏಕಲವ್ಯನ ಬಿಲ್ ಬಲ್ಮೆಯನ್ನು ಪರೀಕ್ಷಿಸುವ ನೆಪದಲ್ಲಿ ದ್ರೋಣನು ಗಗನ ಪಕ್ಷಿಯೊಂದನ್ನು ಹೊಡೆದುರುಳಿಸಲು ಆಜ್ಞಾಪಿಸುತ್ತಾನೆ. ಆಗ ಏಕಲವ್ಯನು **ಅಪರಾಧವಿಲ್ಲದಾ ಸಾಧುವಂ ಕೊಲ್ಲಲ್ಕೆ ಅಲ್ತು ಆಚಾರ್ಯ! ಆ ವಿದ್ಯೆಯಂ ನೀನ್ ಇತ್ತುದೆನಗೆ, ಮುನಿಗುಂ ಮಂತ್ರಾಧಿದೇವತೆ,** ಎಂದು ಗುರುವಾಜ್ಞೆಯನ್ನು ಧಿಕ್ಕರಿಸುತ್ತಾನೆ. ಏಕಲವ್ಯನನ್ನು ಕೇಡಿಗೆ ಸಿಲುಕಿಸುವ ಹುನ್ನಾರದಲ್ಲಿದ್ದ ದ್ರೋಣನು ಈ ಮಾತುಗಳನ್ನು ಕೇಳಿ **ಪುಣ್ಯವಂತನ್ ನೀನ್ ಏಕಲವ್ಯ! ಬರ್ದುಕಿದಯ್**, **ನೀನ್ ಬರ್ದುಕಿ ನನ್ನನುಂ ಬರ್ದುಕಿಸಿದಯ್** ಎಂದು ಅಪ್ಪಿಕೊಳ್ಳುತ್ತಾನೆ. ಈ ಪ್ರಸಂಗದಲ್ಲಿ ಕುವೆಂಪು ಅವರು ಪುರೋಹಿತ ಶಾಹಿಯ ನಯವಂಚನೆ ಮತ್ತು ಮನಃ ಪರಿವರ್ತನೆಗಳೊಂದಿಗೆ ಕೆಳವರ್ಗದ ಸತ್ಯನಿಷ್ಠೆ ಮತ್ತು ಎಂಥ ಕ್ಲಿಷ್ಟ ಪರಿಸ್ಥಿತಿಗಳಲ್ಲೂ ಬದಲಾಗದ ತಾತ್ವಿಕ ಮನೋಧರ್ಮಗಳನ್ನು ಒಟ್ಟಿಗೆ ನಿರೂಪಿಸಿದ್ದಾರೆ. ಇದಿಷ್ಟು 'ಏಕಲವ್ಯನ ವಿವೇಕ' ಎನ್ನಬಹುದು. ಇಂದು ಜಗತ್ತಿನ ಎಲ್ಲ ದೇಶಗಳ ಮುಂದೆ 'ಅಶ್ವತ್ಥಾಮನ ಆಗ್ರಹ' ಮತ್ತು 'ಏಕಲವ್ಯನ ವಿವೇಕ'ದ ಎರಡು ದಾರಿಗಳಿದ್ದು ಯಾವುದಾದರೊಂದನ್ನು ಮಾತ್ರ ಆಯ್ಕೆ ಮಾಡಿಕೊಳ್ಳುವ ಸವಾಲಿದೆ. ಅಶ್ವತ್ಥಾಮನ ಆಗ್ರಹಕ್ಕೆ ಒಳಗಾದರೆ ಭೂಮಿಗೆ ಗತಿಯಿಲ್ಲ, ಏಕಲವ್ಯನ ವಿವೇಕ ಒಪ್ಪಿಕೊಳ್ಳಲು ಯಾರಿಗೂ ಮತಿಯಿಲ್ಲ, ಎಂಬ ಇಬ್ಬಂದಿತನದಲ್ಲಿ ನಾವಿದ್ದೇವೆ.

ಒಂದು ಕೈಯಲ್ಲಿ ಬಾಂಬು ಮತ್ತೊಂದು ಕೈಯಲ್ಲಿ ಬಿಳಿಬಾವುಟ ಹಿಡಿದು ವಿಶ್ವಶಾಂತಿ ಸಾಧಿಸಲು ಸಾಧ್ಯವಿಲ್ಲ. **ಅಣುಶಕ್ತಿ ಭಾರತ ಈಗ ಅಣ್ವಸ್ತ್ರ ಮುಕ್ತ ವಿಶ್ವವನ್ನು ಸಾಧಿಸುವುದರಲ್ಲಿ ಮಹತ್ವದ ಪಾತ್ರ ನಿರ್ವಹಿಸಬಹುದಾಗಿದೆ,** ಎಂಬ ಜನಪ್ರಿಯ ವಾರಪತ್ರಿಕೆಯೊಂದರ ಸಂಪಾದಕೀಯದ ಮಾತುಗಳು ಎರಡು ದೋಣಿಯಲ್ಲಿ ಕಾಲಿಟ್ಟು ದಡ ಸೇರುವ ಕನಸಾಗಿದೆ, ಅಷ್ಟೇ! ಅಣ್ವಸ್ತ್ರ ಸ್ಫೋಟಗಳಿಂದ ಸುಭದ್ರ ಸರ್ಕಾರ, ಬಲಿಷ್ಠ ಭಾರತ ಮತ್ತು ವಿಶ್ವಶಾಂತಿಯ ನಿರ್ಮಾಣವಾಗುವುದೆನ್ನುವುದು ಪೊಳ್ಳು ಭ್ರಮೆ. ಬುದ್ಧಿಗೇಡಿ ಬುದ್ಧಿ ಜೀವಿಗಳು, ಭ್ರಮಾಧೀನ ಮಾಧ್ಯಮಗಳು ಮತ್ತು ಚಂಚಲ ಬಹುಮತದ ಸರ್ಕಾರಗಳೊಂದಾಗಿ ಘೋಷಿಸುತ್ತಿರುವ ಬಲಿಷ್ಠ ಭಾರತ ಎಂಬುದು ಆತ್ಮ ವಂಚನೆಯಾಗಿದೆ. ಅನ್ನ-ಬಟ್ಟೆ-ವಸತಿಗಳ ಪೂರೈಕೆಗೆ ಯಾವ ಯೋಜನೆಗಳನ್ನೂ ಹಾಕಿಕೊಳ್ಳದೆ, 'ಪ್ರಭುತ್ವ' ಉಳಿಸಿಕೊಳ್ಳಲು ತಿಪ್ಪರಲಾಗ ಹಾಕುತ್ತಾ ರಾಮಮಂತ್ರ - ಮಂದಿರ ಮಂತ್ರ - ಬಾಂಬು ಮಂತ್ರ - ಯುದ್ಧ ಮಂತ್ರಗಳನ್ನು ಜಪಿಸಿದಲ್ಲಿ ಬಲಿಷ್ಠ ಭಾರತ ಆಗುತ್ತದೆಯೇ ? (ಕಾರ್ಗಿಲ್ ಯುದ್ಧದಲ್ಲಿ ಹಾ ಣತೆತ್ತ ವಿಕಲಾಂಗ ಸೈನಿಕ ಕುಟುಂಬಗಳ ಗೋಳು ಇನ್ನೂ ಕೇಳುತ್ತಲೇ ಇದೆ.)

ದೇಶವೊಂದರ ಬಲಿಷ್ಠತನವನ್ನು ಗುರುತಿಸಬೇಕಾದ್ದು ಸಮಗ್ರ ಅಭಿವೃದ್ಧಿಯ ಆಂತರಿಕ ಸತ್ವದಿಂದಲೇ ಹೊರತು ಬಾಹ್ಯಸಾಧನಗಳ ಮೆರವಣಿಗೆಗಳು, ಸ್ಫೋಟಗಳು ಮತ್ತು ಯುದ್ಧ ವಿಜಯಗಳಿಂದ ಅಲ್ಲ. ಬಲಿಷ್ಠವಾದ ಬ್ರಿಟಿಷ್ ಪ್ರಭುತ್ವವನ್ನು ಎದುರಿಸಿ ಹಿಮ್ಮೆಟ್ಟಿಸಿದ್ದು ಸತ್ಯಾಗ್ರಹದ ಆಂತರಿಕ ಸತ್ವವೆಂಬುದು ಕಣ್ಮುಂದಿನ ಉದಾಹರಣೆಯಾಗಿದೆ. ''ಕುಂಬಳಕಾಯಿಗೆ ಕಬ್ಬಿಣದ ಕಟ್ಟು ಕಟ್ಟಿದರೆ ಬಲಿಷ್ಠವಾಗುವುದಿಲ್ಲ'' ಎಂಬರ್ಥದ ಬಸವಣ್ಣನ ವಚನವನ್ನಿಲ್ಲಿ ಸ್ಮರಿಸಬಹುದು.

ಈ ದೃಷ್ಟಿಯಿಂದ ಚಾಮರಸನ 'ಪ್ರಭುಲಿಂಗ ಲೀಲೆ' ಯಲ್ಲಿರುವ ಗೋರಕ್ಷ ಮತ್ತು ಅಲ್ಲಮ ಪ್ರಭುಗಳ ಮುಖಾಮುಖಿ ಪ್ರಸಂಗ ಅರ್ಥಗರ್ಭಿತವಾಗಿದೆ. ಹಠಯೋಗಿಯಾದ ಗೋರಕ್ಷ ಮಹಾಸಾಧಕ. ತನ್ನ ಕಠಿಣ ಸಾಧನೆಯಿಂದ ದೇಹವನ್ನು 'ವಜ್ರಕಾಯ' ಮಾಡಿಕೊಂಡಿರುತ್ತಾನೆ. ಅಲ್ಲಮನ ತತ್ವ- ಉಪದೇಶ ಅವನಿಗೆ ಸೇರುವುದಿಲ್ಲ. ವೃಥಾ ವಾದವೇಕೆಂದು ಅಲ್ಲಮನ ಕೈಗೆ ಖಡ್ಗವನ್ನು ಕೊಟ್ಟು ತನ್ನ ದೇಹದ ಮೇಲೆ ಪ್ರಹಾರ ಮಾಡಲು ಹೇಳುತ್ತಾನೆ. ವಜ್ರಕಾಯದ ಮೇಲೆ ತಾಕಿದ ಖಡ್ಗ 'ಖಣಿಲ್' ಎಂಬ ಲೋಹದ ಪೆಟ್ಟಿನ ಸದ್ದು ನೀಡುತ್ತದೆ. ''ಇದಲ್ಲದೆ ಇನ್ನಾವುದು ಸಿದ್ಧಿ?'' -ಎಂಬ ಪ್ರಶ್ನೆ ಗೋರಕ್ಷನದು. ಈಗ ಅಲ್ಲಮನ ಸರದಿ : ಅಲ್ಲಮನು ಅದೇ ಖಡ್ಗವನ್ನು ಗೋರಕ್ಷನಿಗೆ ಕೊಟ್ಟು ತನ್ನ ದೇಹದ ಮೇಲೆ ಪ್ರಹಾರ ಮಾಡಲು ಸೂಚಿಸುತ್ತಾನೆ. ಗೋರಕ್ಷ ಎಷ್ಟು ಸರ್ತಿ ಖಡ್ಗ ಪ್ರಹಾರ ಮಾಡಿದರೂ ಬಯಲನ್ನು ಹೊಡೆದಂತೆ ಆಗುತ್ತದೆ. ಖಡ್ಗವು ಅಲ್ಲಮನ ದೇಹದೊಳಗೆ ಹೊಕ್ಕು ಹೊರಬರುತ್ತಿರುತ್ತದೆ. ಈ ಶೂನ್ಯ ಸಂಪಾದನೆಯ ಎದುರು ಗೋರಕ್ಷ ಕುಸಿದುಬೀಳುತ್ತಾನೆ. ಅಲ್ಲಮನು ಗೋರಕ್ಷನಿಗೆ ಕವಿದಿದ್ದ ದೇಹಮೋಹದ ಭ್ರಮೆ ಕಳೆದು ಮುನ್ನಡೆಯುತ್ತಾನೆ. ಇಂದು ಪರಮಾಣು ಗೂಡಿನ (ನ್ಯೂಕ್ಲಿಯರ್ ಸೈಲೋಸ್) ಕವಚ ತೊಟ್ಟಿರುವ ಎಲ್ಲ ದೇಶಗಳೂ ಗೋರಕ್ಷನಿದ್ದಂತೆ ಭ್ರಮೆಗಳಲ್ಲಿ ಮುಳುಗಿವೆ. ಅಣು ವಿರೋಧಿ ಸತ್ಯಾಗ್ರಹದಿಂದ ಅಲ್ಲಮನಾಗಿ **ಮಾಯಾ ಕೋಲಾಹಲ** ಆಗಬೇಕಾಗಿದ್ದ ಭಾರತವು ಅಣ್ವಸ್ತ್ರ ಸ್ಫೋಟಗಳಿಂದ ಗೋರಕ್ಷನಂತೆ ತೋಳು ತಟ್ಟುತ್ತಿರುವುದು ಮನುಕುಲದ, ಸರಿಯಾಗಿ ಹೇಳಬೇಕೆಂದರೆ ಭೂಗೋಳದ ದುರಂತವಾಗಿದೆ. ಬಹು ಹಿಂದೆಯೇ ಲೋಹಿಯಾ ಹೇಳಿರುವ ಈ ಮಾತುಗಳನ್ನು ಗಮನಿಸಿ : ''ಆಟಂ ಬಾಂಬಿನ ಅಪರಾಧಕ್ಕಾಗಿ ಯಾವನೊಬ್ಬ ರಾಜಕಾರಣಿಯನ್ನೋ ಯಾವುದೊಂದು ವಿಶಿಷ್ಟ ರಾಜನೀತಿ ಪದ್ಧತಿಯನ್ನೋ ದೂಷಿಸಿದರೆ ಸಾಲದು! ನನಗೆ ಕಾಣುವಂತೆ ಈ [illegible] ಅನಿವಾರ್ಯವೂ ಅದ ಮುಕ್ತಾಯವಾಗಿದೆ.

ಎ. ಚಂದ್ರಶೇಖರ ನಂಗಲಿ
[illegible], ಬಡಾವಣೆ, ಕೋಲಾರ [illegible]

*ಅದೇನು ಅಪರಾಧವೋ ಅವನದು. ಎಲ್ಲವನ್ನೂ ಗುಣಾತ್ಮಕವಾಗಿ ಬದಲಾಯಿಸಬೇಕೆನ್ನುವ ಗುಂಗಿನವನಿರಬೇಕು. ಜೀವನದ ಎಲ್ಲ ಸೊಬಗನ್ನೂ ಸವಿಯಬೇಕೆಂಬ ಉತ್ಕಟೇಚ್ಛೆ ಅವನದು. ಅದಕ್ಕೇ ತನಿಖೆಯ ನಡುವೆ ಸಂಗೀತದ ಗುಂಗಿನಲ್ಲಿ ಲೀನನಾಗುತ್ತಾನೆ. ತನಿಖೆ ನಡೆಸುವ ಅಧಿಕಾರಿಯದು ಬೇರಿನ್ನೇನೋ ನೆನಪುಗಳು......*



# ವಸಂತದಲ್ಲಿ ಮಾಗಿಯ ಗಾಳಿ

ಮೂಲ : ಮ್ಯಾಕ್ಸಿಂ ಗಾರ್ಕಿ

ನಾನು ಈಗ ಪೊಲೀಸ್ ಸೈನಿಕ ಸಿಬ್ಬಂದಿಯ (gendarmerie) ಕರ್ನಲ್‌ರ ಮನೆಯ ಒದು ಕೋಣೆಯಲ್ಲಿ ಕುಳಿತಿದ್ದೇನೆ. ಕತ್ತಲು ಕವಿದ ಕಿಷ್ಕಿಂಧ ಇದು. ಒಂದು ಕಡೆ ಬರೆಯುವ ದೊಡ್ಡ ಮೇಜು, ಕರಿ ಚರ್ಮದ ಹೊದಿಕೆ ಹಾಕಿದ ಮೂರು ಆರಾಮ ಕುರ್ಚಿಗಳು, ಅವಕ್ಕೆ ಹೊಂದುವಂಥ ಒಂದು ದೊಡ್ಡ ಸೋಫಾ, ದೊಡ್ಡ ಬೀರು, ಗೋಡೆಗಳ ಮೇಲೆ ಕಿಕ್ಕಿರಿದ ಫೋಟೋ - ಇವುಗಳಿಂದಾಗಿ ರೂಮು ಇನ್ನಷ್ಟು ಸಂಕುಚಿತಗೊಂಡಿದೆ.

ಗೋಡೆಗಳನ್ನು ಆವರಿಸಿದ ಮಿಲಿಟರಿ ಸಿಬ್ಬಂದಿಯ ಹೆಂಗಸರು, ಮಕ್ಕಳುಗಳ ಹತ್ತಾರು ಮಾಸಿಹೋದ ಚಿತ್ರಗಳ ಜತೆಗೆ ಯಾವುದೋ ಕ್ಯಾಂಪಿನ ಚಟಿಕೆ ಚಿತ್ರ, ನನಗೆ ತಿಳಿಯದ ನದಿ ತೀರದ ಊರಿನ ಚಿತ್ರ - ಎಲ್ಲವೂ ಸೇರಿವೆ. ಲಗಾಮು ಹಿಡಿದು ಬಿಳಿಯ ಕುದುರೆ ಮೇಲೆ ಕುಳಿತ ಒಬ್ಬ ಯುವಕ, ಅಗಾಧ ಹುಲ್ಲುಗಾವಲಿನ ನಡುವೆ ನಿಂತ ಕಲ್ಲುಗೊಂಬೆಯಂತ ಕಾಣುವ ಪಾದ್ರಿಯ 'ಲೈಫ್‌ಸೈಜ್' ಚಿತ್ರ - ಗಮನ ಸೆಳೆಯುತ್ತವೆ.

ಕರ್ನಲ್ ಎತ್ತರದ, ದುಂಡು ಹೆಗಲಿನ ಆಸಾಮಿ. ಅವನ ಮೈಮೇಲೆ ಬೂದು ಬಣ್ಣದ ಜಾಕೆಟ್, ತೆಳುವಾದ, ಪ್ರಸನ್ನವಾದ ಮುಖ. ಅವನ ಅಗಲ, ಸುಂದರ, ಬೂದು ನೀಲಿ ಮಿಶ್ರಿತ ಬಣ್ಣದ ಕಣ್ಣುಗಳಲ್ಲಿ ಎಂಥದೋ ಆಯಾಸದ, ವ್ಯಥೆಯ ಭಾವನೆ. ಅವನಿಗೆ ಹತ್ತಿರ ಹತ್ತಿರ ನಲವತ್ತು ವಯಸ್ಸು. ಅವನ ದಾಡಿಯೂ ಬೂದು ಬಣ್ಣ. ತೆಳ್ಳನೆಯ ಗುಂಗುರು ಕೂದಲು; ಎಡ ಕೆನ್ನೆಯ ಮೇಲೆ ಆಗಾಗ ಮಿಂಚಿ ಹೋಗುವ ಕಂಪನದ ಕಾರಣ ಅವನು ಒಂದೇ ಸಮನೆ ಕಣ್ಣು ರೆಪ್ಪೆ ಬಡಿಯುತ್ತಾನೆ. ಜಾಕೆಟ್ ಜೇಬಿನಲ್ಲಿ ಕೈ ತೂರಿಸಿ ಅತ್ತಿತ್ತ ನೀಳ ಕಾಲುಗಳನ್ನು ಎಸೆದಾಡುವ ಕರ್ನಲ್ ನನ್ನತ್ತ ತಿರುಗಿ ಸ್ವಲ್ಪ ಗಂಭೀರವಾದ ಧ್ವನಿಯಲ್ಲಿ ಕೇಳುತ್ತಾನೆ :

''ಅದ್ಸರಿ ಕಣಯ್ಯಾ! ಇದಕ್ಕೆ ಏನು ಹೇಳುತ್ತೀಯ ? ಅಗತ್ಯವಾಗಿ ನೀನು ಉತ್ತರ ಕೊಟ್ಟೇ ತೀರಬೇಕು, ತಿಳಿಯಿತಾ ?''

ಕೋಣೆಯ ಎರಡೂ ಕಿಟಕಿಗಳನ್ನು ಕಡುಕೆಂಪಿನ ಪರದೆಯಿಂದ ಮುಚ್ಚಲಾಗಿದೆ. ನನ್ನ ಹಾಗೂ ಕರ್ನಲ್ ನಡುವೆ ಹಸಿ ಚರ್ಮ - ಔಷಧಿ - ತಂಬಾಕು ಮಿಶ್ರಿತ ವಾಸನೆಯ ದಟ್ಟನಾದ ಮಂಜು.

ಜೈಲಿನಿಂದ ನನ್ನನ್ನು ಕರೆದುತರುವಾಗ ಗುಜುಗುಟ್ಟುವ ರಸ್ತೆಯಲ್ಲಿ ನಾನೊಬ್ಬ ಎದೆಗಾರನ ಹಾಗೆ ಮನಸ್ಸಿನಲ್ಲೇ ಮೆರೆದಾಡಿದೆ.

ಜೀವನದ ಅನ್ಯಾಯಗಳನ್ನು ನೆನೆದು ನನ್ನ ಮನಸ್ಸಿನಲ್ಲಿ ಯೌವನ ಸಹಜವಾದ ಸಾತ್ವಿಕ ರೋಷ ಹೊತ್ತಿ ಹೊಗೆಯಾಡುತ್ತಿತ್ತು. ನನ್ನನ್ನು ತನಿಖೆ ಮಾಡಲಿರುವ ಅಧಿಕಾರಿಯ ಬಳಿಗೆ ಬರುವಾಗ ಕಾಳಗದ ಕೋಳಿ ಹುಂಜನ ಹಾಗೆ ಡುಲಾಯಿಸುತ್ತ ಬಂದಿದ್ದೆ.

ಪ್ರಾರಂಭದಲ್ಲಿ ಕರ್ನಲ್ ಕೇಳಿದ ಪ್ರಶ್ನೆಗಳಿಗೆ ಒರಟಾಗಿ, ಸ್ವಲ್ಪ ಪೊಗರಿನಿಂದಲೇ ಉತ್ತರ ಕೊಟ್ಟಿದ್ದೆ. ಅವನನ್ನು ಹೇಗಾದರೂ ಕೆಣಕಿದಾಗ ಅವನು ಬೆದರಿಕೆ ಮಾತುಗಳಿಂದ ನನ್ನ ಮೇಲೆ ಎಗರಾಡುವಂತೆ ಮಾಡಬೇಕು - ಅಂಥ ಒಬ್ಬ ದುರಾತ್ಮ ಶತ್ರುವಿನೊಂದಿಗೆ ಜಗಳವಾಡಲೇ ಬೇಕು - ಇವು ನನ್ನ ಉದ್ದೇಶಗಳಾಗಿದ್ದವು. ಆದರೆ ಅವನ ಮೃದುವಾದ ಮುಖ, ವಿಷಣ್ಣವಾದ ಕಣ್ಣುಗಳನ್ನು ನೋಡಿದೊಡನೆ ನನ್ನ ಉಗ್ರತೆ ಮಾಯವಾಯಿತು. ಅವನು ನಿರ್ವಿಣ್ಣವಾಗಿ ಪ್ರಶ್ನೆಗಳನ್ನು ಕೇಳುವಾಗ ಒಮ್ಮೆಲೆ ನನ್ನ ಹುರುಪೆಲ್ಲ ಬತ್ತಿ ಬರಿದಾಯಿತು. ಏನೋ ಒಂದು ರೀತಿಯ ಕಸಿವಿಸಿ; 'ಜೋರ್' ಹಿಡಿದವನಂತೆ ಕುಳಿತಿದ್ದೆ.

ನನ್ನೆದುರಿಗೆ ನಿಂತಿದ್ದವನು ಶತ್ರುವಿನ ಹಾಗಿರಲಿಲ್ಲ. ಬಳಲಿದ ಆ ವ್ಯಕ್ತಿಯಲ್ಲಿ ಏನೊಂದೂ ಕೆಡುಕಿದಂತೆ ತೋರಲಿಲ್ಲ. ಇಂಥ ಉಜ್ವಲ ವಸಂತದ ಮುಂಜಾನೆಯಲ್ಲಿ ಅವನು ಒಂದು ಹಳ್ಳಿಗಾಡಿನ ಸುಂದರ ಹುಲ್ಲುಗಾವಲಿನಲ್ಲೋ, ಉದ್ಯಾನವನದ ಹಚ್ಚ ಹಸುರಿನ ಹುಲ್ಲುಹಾಸಿನ ಮೇಲೋ ಮಲಗಿ ನೀಲಗಗನವನ್ನು ದಿಟ್ಟಿಸಿ ನೋಡುತ್ತಾ ಇರಬೇಕಾಗಿತ್ತು.

ಆದರೆ ಅವನು ಇಲ್ಲಿ ನನ್ನಂಥವನ ಮುಂದೆ ಪದೇಪದೇ ಒಂದೇ ಪ್ರಶ್ನೆಯ ಪಲ್ಲವಿ ಹಾಡುತ್ತ ತನ್ನ ಅತ್ಯಮೂಲ್ಯ ಕಾಲವನ್ನು ಅಪವ್ಯಯ ಮಾಡುತ್ತಿದ್ದಾನೆ.

'ನೀನು ಯಾರೋಸ್ಲಾವ್ಲ್‌ಗೆ ಯಾಕೆ ಹೋಗಿದ್ದೆ ?'

'ನಾನು ಆಗಲೇ ಹೇಳಿದೆನಲ್ಲಾ ?'

'ನೀನು ಹೇಳಿದ್ದನ್ನು ನಂಬುವುದು ಕಷ್ಟ' - ಅವನು ಥಟ್ಟನೆ ಮಾರ್ನುಡಿದ - ತಾನೇ ಗುಡ್ಡೆ ಹಾಕಿದ ಸಿಗರೇಟು ಬೂದಿಯತ್ತ ನೋಡುತ್ತಿದ್ದ. ಮತ್ತೊಮ್ಮೆ ಅವನ ಸ್ಲಿಪ್ಪರ್ ಹಾಕಿದ ಕಾಲುಗಳು ಅತ್ತಿತ್ತ ಎಳೆದಾಡುತ್ತವೆ.

ಕೋಣೆಯ ವಸ್ತುಗಳೆಲ್ಲವನ್ನೂ ಹೊಸದಾಗಿ ನೋಡುವವನಂತೆ, ತನಗೆ ಬೇಕಾದುದು ಅಲ್ಲಿಲ್ಲವೆನ್ನುವ ರೀತಿಯಲ್ಲಿ ಅವನು ವಿಚಿತ್ರ ನೋಟದಿಂದ ಎಲ್ಲ ಕಡೆ ನೋಡುತ್ತಾನೆ. ಆಗಾಗ ಮೌನದಿಂದ ಅವನು ಜೋರಾಗಿ ತಲೆಯಲ್ಲಾಡಿಸುವಾಗ ಅವನ ಗಡ್ಡ ಬೀಸಣಿಗೆಯಂತೆ ಅವನ ಎದೆಯ ಮೇಲೆ ಬೀಸುತ್ತದೆ. ವಿನಾಶಕ್ಕೀಡಾದ ತನ್ನ ಗೂಡಿನ ಸುತ್ತಲೂ ಪರಿಭ್ರಮಣೆ ಮಾಡುವ ಬೆಂಗಾಡು ಬಯಲಿನ ಹಕ್ಕಿಯಂತೆ ಕಾಣುತ್ತಾನೆ.

ಬಹುಶಃ ಇವನೊಬ್ಬ ಅನನ್ಯ, ಇಂಥವನನ್ನು ನಾನು ಹಿಂದೆಂದೂ ಕಂಡೇ ಇರಲಿಲ್ಲ ಅನಿಸುತ್ತಿದೆ ನನಗೆ.

ಕಿಸೆಯ ಗಡಿಯಾರವನ್ನೆಳೆದು ನೋಡುತ್ತ ಹಾಗೆಯೇ ನಿಂತು ಹೇಳುತ್ತಾನೆ : 'ಇಲ್ಲಿ ಕೇಳಯ್ಯ, ಹೀಗೆ ಇನ್ನೆಷ್ಟು ಹೊತ್ತು ಕಾಲ ವ್ಯಯ ಮಾಡೋಣ, ಹೇಳು ? ತುದಿ ಮೊದಲಿಲ್ಲದ ಈ ಚರ್ಚೆ ಮುಗಿದು ಹೋಗಬೇಕು ಅಂತ ನಿನಗೆ ಅನ್ನಿಸೊಲ್ವಾ ?'

ಗಡಿಯಾರವನ್ನು ಟಪ್ಪೆಂದು ಮುಚ್ಚಿ, ಎರಡನೆಯ ಅಲೆಕ್ಸಾಂಡರ್‌ನ ಎದೆ ವಿಗ್ರಹವಿರುವ ಮೂಲೆಯತ್ತ ದಿಟ್ಟಿಸುತ್ತಾ ಮತ್ತೆ ಕೇಳುತ್ತಾನೆ : 'ನಿನ್ನನ್ನು ಕಂಡರೆ ನನಗೆ ಆಗಲ್ಲ - ಆದ್ದರಿಂದ ನಿನ್ನನ್ನು ಜೈಲಿನಲ್ಲಿಟ್ಟಿರಬೇಕೆಂಬುದು ನನ್ನ ಆಸೆ - ಹೀಗೆಲ್ಲಾ ನೀನು ಯೋಚಿಸುತ್ತಿರಬಹುದು - ಅಲ್ವಾ ? ಅದು ಶುದ್ಧ ತಪ್ಪು ತಿಳಿವಳಿಕೆ. ನಾನೇಕೆ ಹಾಗೆ ಮಾಡಲಿ? ನೀನು ಹಾಗೆ ಜೈಲಿನಲ್ಲಿ ಕೊಳೆಯುವುದರಲ್ಲಿ ಏನು ಅರ್ಥವಿದೆ?'

'ಹಾಗಾದರೆ ನನ್ನನ್ನು ಬಿಟ್ಟು ಬಿಡಿ.'

ಮತ್ತೆ ಅವನ ಅಮಾಯಕ ಮುಖದ ಮೇಲೆ ಕಂಪನದ ತೆರೆ. ಅವನ ಎಡಗಣ್ಣು ಮುಚ್ಚಿದೆ.

'ಅದು ಸಾಧ್ಯವಿಲ್ಲ' - ಒಮ್ಮೆ ಜೋರಾಗಿ ಒಣಕೆಮ್ಮು. ಕೈ ಬೆರಳಿನಿಂದ ಭದ್ರವಾಗಿ ಕೆನ್ನೆ ಒತ್ತಿಕೊಳ್ಳುತ್ತಾನೆ. ಅವನ ಬಲಗೈ ತೋರು ಬೆರಳಲ್ಲಿ ದಪ್ಪನೆಯ (ಬಹುಶಃ ಅವನ ಮದುವೆಯ) ಉಂಗುರ.

'ನೀನು ಯಾರೋಸ್ಲಾವ್ಲ್‌ಗೆ ಯಾಕೆ ಹೋಗಿದ್ದೆ ಎಂಬ ಬಗ್ಗೆ ನಮಗೆ ನಂಬಲರ್ಹವಾದ ವಿವರಣೆ ಬೇಕು. ಈಗ ನಾನು ಸುಮಾರು ಕಾಲು ಗಂಟೆ ಹೊರಗಿರುತ್ತೇನೆ. ನಾನು ಹಿಂತಿರುಗಿ ಬರುವಷ್ಟರಲ್ಲಿ ನೀನು ಎಂಥದೋ ಒಂದು ಹೇಳಿಕೆ ಬರೆದಿಡು, ಆಯಿತಾ?'

ಅವನು ಬಾಗಿಲ ಬಳಿ ನಿಂತು ಬಾಗಿಲು ಹಿಡಿಯ ಮೇಲೆ ಕೈ ಇರಿಸಿ ಶಾಂತವಾಗಿ ಹೇಳುತ್ತಾನೆ :

'ಪೀಟರ್ಸ್‌ಬರ್ಗ್‌ನಲ್ಲಿ ನನಗೆ ನಿನ್ನಷ್ಟೇ ವಯಸ್ಸಿನ ಒಬ್ಬ ಮಗ ಇದ್ದಾನೆ. ಬಹುಶಃ ಇದೇ ಸಮಯದಲ್ಲಿ ಅವನನ್ನು ಸಹ ಪೊಲೀಸ್ ಸೈನಿಕ ಅಧಿಕಾರಿ ಹೀಗೆಯೇ ತನಿಖೆ ಮಾಡುತ್ತಿರಬಹುದು..... ಅರ್ಥವಾಯಿತಾ ? ಸರಿ, ಹಾಗಾದರೆ......'

ಕೋಣೆಯ ಕೆಂಪು ಮಂಜಿನಲ್ಲಿ ನಾನೊಬ್ಬನೇ ಉಳಿದೆ. ಅವನು ತನ್ನ ಮಗನ ಬಗ್ಗೆ ಹೇಳಿದ ಮಾತು ನನ್ನೊಳಗಿನ ಯಾವುದೋ ತಂತುವನ್ನು ಮಿಡಿಯಿತು.

''ಸರಿ - ಹಾಗಾದರೆ,'' - ಅನ್ನುವ ಅವನ ಮಾತುಗಳು ನನ್ನ ನೆನಪಿನಲ್ಲಿ ಅನುರಣಿಸಿದವು. ಮೆಲ್ಲಗೆ ಹೇಳಿದ ಆ ಶಬ್ದಗಳು ಒಂದು ಪ್ರಶ್ನೆಯ ರೂಪ ತಾಳಿದವು :

''ಸರಿ - ಹಾಗಾದರೆ ??''

ಗೋಡೆಯ ಮೇಲೆ ನೇತಾಡುತ್ತಿದ್ದ ಪಾದ್ರಿ ಕೋಪದಿಂದ ಕೆನ್ನೆ ಉಬ್ಬಿಸಿ ಕೆಳಗೆ ಬಗ್ಗಿ ನನ್ನತ್ತ ನೋಡಿದ ; ಬಿಳಿ ಕುದುರೆ ಮೆಳ್ಳೆಗಣ್ಣು ಹಾರಿಸಿತು ; ತೋರವಾದ ಹೆಂಗಸು ನಗುತ್ತ ತನ್ನ ನಗ್ನ ಎಡ ಭುಜವನ್ನು ಅಜಮಾಯಿಶಿ ಮಾಡಿಕೊಂಡಳು. ಕಿಟಕಿಯ, ಹುಳುತಿಂದ ಪರದೆಗಳ ತೂತಿನ ಮೂಲಕ ಶುಭ್ರ ನೀಲಿ ಆಕಾಶ ಕಾಣುತ್ತಿತ್ತು. ಕರ್ನಲ್ ಹಲವು ಬಾರಿ 'ಏಕೆ, ಏಕೆ' ಎಂದು ಕೇಳಿದ್ದ. ಒಂದು ವೇಳೆ ಆ ಪೀಟರ್ಸ್‌ಬರ್ಗ್ ಪೊಲೀಸ್ ಸೇನೆ ಅಧಿಕಾರಿಯ ಕೊಠಡಿಯಲ್ಲಿ ನನ್ನ ಹಾಗೆಯೇ ಅವನ ಮಗನೂ ಕುಳಿತಿದ್ದರೆ ಅವನೂ ಮುಜುಗುರ ಪಡುತ್ತಿರಬಹುದು.......

ಕರ್ನಲ್ ಹೊರಕ್ಕೆ ಹೋದಾಗ ಬಾಗಿಲನ್ನು ಪೂರ್ತಿ ಮುಚ್ಚಿಕೊಂಡು ಹೋಗಿರಲಿಲ್ಲ ; ಈಗ ಕೋಣೆಯೊಳಕ್ಕೆ ಸಂಗೀತದ ಅಲೆಗಳು ನುಗ್ಗಿಬಂದವು. ಆ ಮನೆಯಲ್ಲಿ ಎಲ್ಲೋ ಯಾರೋ ಪಿಯಾನೊ ನುಡಿಸುತ್ತಿದ್ದರು.

ನನಗೆ ಅಸಾಧ್ಯ 'ಬೋರ್' ಆಗಿತ್ತು. ಸಂಗೀತ ನನ್ನನ್ನು ಕೆರಳಿಸಿತು. ಎದ್ದು ಹೋಗಿ ಬಾಗಿಲ ಬಳಿ ಬಗ್ಗಿ ನೋಡಿದೆ. ಪಕ್ಕದ ರೂಮಿನ ತುಂಬಾ ಪ್ರಾತಃಕಾಲದ ಬೆಳ್ಳಂಬೆಳಕು. ತೆರೆದ ಕಿಟಕಿಯಾಚೆ ವಸಂತ ಮಾಸದ ಉತ್ಕರ್ಷ. ಮರದ ನೆರಳುಗಳು ಚಿತ್ರಯುಕ್ತವಾಗಿ ಕಿಟಕಿಯ ಹಂದರ ಹಾಗೂ ನೆಲದ ಮೇಲೆಲ್ಲಾ ಹರಡಿದ್ದವು. ನನ್ನೆದುರಿಗೆ ಒಂದು ಸಣ್ಣ ಬಾಗಿಲು. ಅದರ ಹಿಂದುಗಡೆ ಕುದುರೆ ಲಿಕಾಪಿನ ಝುಣ ಝುಣ ಶಬ್ದ. ಗಂಡು ಧ್ವನಿಗಳು, ಕಾಗದ ಹರಿದು ಹಾಕುವ ಸದ್ದು - ಈ ಗದ್ದಲ ಪಕ್ಕದ ಕೋಣೆಯಿಂದ ಬರುತ್ತಿದ್ದ ಸಂಗೀತಕ್ಕೆ ಅಡ್ಡಿಯಾಗಿತ್ತು. ಕೋಣೆಯ ಬಾಗಿಲಿಗೆ ಢಾಳಾದ ಬಣ್ಣದ ಪರದೆ - ಪುಣ್ಯವಶಾತ್, ತುಸು ಮಾಸಿದ ಆ ಪರದೆ ಗಾಳಿಯಲ್ಲಿ ಮೆಲ್ಲನೆ ಅಲುಗಾಡುತ್ತಿತ್ತು. ಸಂಗೀತದಿಂದಾಗಿ ನನ್ನ ವಾಸ್ತವ ಪ್ರಜ್ಞೆ ನಿದ್ದೆ ಹೋಗಿತ್ತು. ನಾನು ಎಲ್ಲಿರುವೆನೆಂಬುದೇ ಮರೆತುಹೋಗಿ ಮೆಲ್ಲನೆ ಪರದೆ ಎತ್ತಿದೆ. ನಾನು ಒಂದು ಡ್ರಾಯಿಂಗ್ ರೂಮಿನಲ್ಲಿದ್ದೆ. ಬಾಗಿಲಬಳಿ ಮರದ ಪಟ್ಟಿಯ ಎತ್ತರದ ಜಾಲಂದರ. ಅದರ ಮೇಲೆ ಹೂಬಳ್ಳಿಗಳ ಅಲಂಕಾರ. ನಾನು ಬಾಗಿಲ ಪರದೆ ಮತ್ತು ಜಾಲಂದರದ ನಡುವೆ ನಿಂತೆ. ಸಂಗೀತ ನಿಚ್ಚಳವಾಗಿ ಕೇಳಿಬರುತ್ತಿತ್ತು. ಹೂ ಎಲೆಗಳ ನಡುವಿನಿಂದ ಇಣಿಕಿದಾಗ ಮಹಿಳೆಯೊಬ್ಬಳು ಪಿಯಾನೊ ನುಡಿಸುತ್ತಿರುವುದು ಕಾಣಿಸಿತು. ಅವಳು ನನ್ನ ಕಡೆ ಬೆನ್ನು ತಿರುಗಿಸಿ ಕುಳಿತಿದ್ದಳು. ಸಪುರವಾದ ಹೆಂಗಸಿನ ಬೆತ್ತಲು ಬೆನ್ನು ಕಾಣಿಸುತ್ತಿತ್ತು. ಪೂರ್ವದೇಶದವರು ತೊಡುವ ತೆಳುವಾದ ವರ್ಣರಂಜಿತ ರೇಷ್ಮೆ ಉಡುಪಿನಲ್ಲಿದ್ದ ಅವಳ ಪುಟಾಣಿ ತಲೆ ತುಂಬಾ ಕಪ್ಪನೆಯ ಗುಂಗುರು ಕೇಶರಾಶಿ. ಸ್ವರ ಪ್ರಸ್ತಾರಗಳ ಪುಟಗಳನ್ನು ನೋಡಿಕೊಳ್ಳದೆ, ಕೇಳ್ಮೆಯಿಂದ ಅತ್ಯಂತ ಮೃದುವಾಗಿ ನುಡಿಸುತ್ತಿದ್ದಳು. ವಿಸ್ಮೃತಿಯ ಲೋಕದಿಂದ ಏನನ್ನೋ ಕರೆಯುವಂಥ ಮೃದುವಾದ ಸಂಗೀತ. ಅವಳ ಕೋಮಲ ಬೆರಳುಗಳು ಮಂದ ಸ್ವರಗಳ ಮೇಲೆ [illegible] ಚಲಿಸುತ್ತಿದ್ದವು. ಬಲಗೈ ಮಧ್ಯದ ಕೀಲಿಕೈಗಳ ಮೇಲೆ [illegible] ಬಹಳ ಹೊತ್ತು ನಾನವಳ ಕೈಗಳ ಕಂಪನವನ್ನೇ ಗಮನಿಸುತ್ತಿದ್ದು, ಅವಳ ಕೈ ಚಲನಗಳಲ್ಲಿ ಅವ್ಯಕ್ತವಾದ ಎಂಥದೋ ಗೊಂದಲ, ಭೀತಿ, ವ್ಯಥೆಗಳನ್ನು ಗುರುತಿಸಿದೆ.

ಆದರೆ ಪಿಯಾನೋ ಕೀಲಿಕೈಗಳು ಹರ್ಷೋತ್ಕರ್ಷದಿಂದ ತುಂಬಿದ ಹಾಗೆ ತೋರಿತು. ಪ್ರಾರಂಭದಲ್ಲಿ ನನಗೆ ರಾಗವಿನ್ಯಾಸ ಗ್ರಹಿಸಲಾಗಲಿಲ್ಲ ; ಆಲ್ಟೊ ಮತ್ತು ಟೆನರ ಶ್ರುತಿಗಳು ಅಸಂಬದ್ಧವಾಗಿ ನುಡಿಯುತ್ತಾ ಮಂದರದ ಶ್ರುತಿ ಗಟ್ಟಿಯಾಗಿ ಪ್ರಬಲವಾಗಿ ಏನನ್ನೋ ಒತ್ತಿ ಹೇಳುವಂತಿತ್ತು. ಅವುಗಳ ಸ್ವರ ಮೇಳ ಒಟ್ಟಾರೆ ಮಾಗಿ ಕಾಲದ ಒಂದು ಚಿತ್ರವನ್ನು ರೇಖಿಸುವಂತಿತ್ತು. ದೂರದ ಕೊಳೆ ತುಂಬಿದ ಹೊಲಗಳು, ಬಾಡಿದ ಹುಲ್ಲು ಹಾಸಿನ ನಡುವೆ ಬೀಸಿದ ತೇವದ ಕುಳಿರ್ಗಾಳಿ ; ಅದರ ಸ್ಪರ್ಶಕ್ಕೆ ಇಡೀ ಕಾಡು ಕಂಪಿಸುತ್ತಿದೆ ; ಕಾಡಿನ ಕಟ್ಟ ಕಡೆಯ ಹಣ್ಣೆಲೆಗಳು ನೆಲಕ್ಕೆ ಉದುರುತ್ತಿವೆ. ದೂರದಿಂದ, ಅಗೋಚರ ಚರ್ಚ್‌ನ ವಿಷಣ್ಣ ಘಂಟಾನಾದ ಕೇಳಿಬರುತ್ತಿದೆ. ಬಟ್ಟಂಬಯಲಾದ ಹೊಲದ ನಡುವೆ ಬರಿ ತಲೆಯ ವ್ಯಕ್ತಿಯೊಬ್ಬ ಕೈಗಳನ್ನು ಮೇಲಕ್ಕೆತ್ತಿ ಗಾಳಿಯ ಹೊಡೆತಕ್ಕೆ ಸಿಕ್ಕಿದವನಂತೆ ಓಡಾಡುತ್ತಿದ್ದಾನೆ. - ಮತ್ತೆ ಮತ್ತೆ ಹಿಂತಿರುಗಿ ನೋಡುತ್ತಾ ಓಡುತ್ತಲೇ ಇದ್ದಾನೆ. - ಮಂದ, ಕರ್ಕಶ, ಗರ್ಜನೆಯ ಶಬ್ದ ಅವನ ಜತೆ ಸಾಗುತ್ತಿದೆ, ದೂರದ ಬಯಲು ಇನ್ನಷ್ಟು ವ್ಯಾಪಕವಾಗಿ ಬೆಳೆಯುತ್ತಾ ಗಾಢವಾಗುತ್ತಾ ಹೋಗುತ್ತಿದೆ. ಅದರ ನಡುವೆ ಸಣ್ಣದಾಗುತ್ತ ಹೋಗುವ ಮನುಷ್ಯನ ಆಕಾರ ಕಣ್ಮರೆಯಾಗುತ್ತದೆ.

ಸಂಗೀತ ನಿಂತು, ಅವಳು ಕೈಗಳನ್ನು ಕೆಳಕ್ಕೆ ಇಳಿಯಬಿಟ್ಟು ನಿಶ್ಚಲಳಾಗಿ ಕುಳಿತಿದ್ದಳು. ನಾನು ಜಾಲಂದರದ ಹೂ ಎಲೆಗಳ ನಡುವಿಂದ ಅವಳನ್ನು ನೋಡುತ್ತಲೇ ಇದ್ದೆ. ನನಗೆ ಬೇರೆ ಯಾವುದರ ಪರಿವೆಯೂ ಇರಲಿಲ್ಲ. ನನ್ನ ಎದೆಯಲ್ಲಿ ಒಂದು ಸುಂದರ ಪ್ರತಿಧ್ವನಿ ಇನ್ನೂ ಮೊಳಗುತ್ತಿತ್ತು : ಏನೇ ಆಗಲಿ, ನಾನು ಅಲ್ಲಿಂದ ಕದಲಕೂಡದೆಂಬುದಷ್ಟೆ ನನ್ನ ನೆನಪಿನಲ್ಲಿ ಭದ್ರವಾಗಿತ್ತು.

ಅವಳು ಹಿಂಜರಿಯುತ್ತ ಬಲಗೈಯನ್ನು ನಿಧಾನವಾಗಿ ಕೀಲಿಬೋರ್ಡಿನ ಮೇಲಿರಿಸಿದಳು - ಮತ್ತೆ ನನ್ನನ್ನು ವರ್ಷಾಕಾರದ ಸಂಗೀತ ಸ್ವರಗಳು ಆವರಿಸಿದವು. ಕಣ್ಣು ಮುಚ್ಚಿ ತಲ್ಲೀನನಾಗಿದ್ದೆ. ಒಂದು ದೊಡ್ಡ ಗುಂಪು ಒಕ್ಕೊರಲಿಂದ, ಹತಾಶೆ-ಕೋಪ-ಕಣ್ಣೀರ ನಡುವೆ ಆರ್ತನಾದದಿಂದ ಯಾರಿಗೋ ಮೊರೆಯಿಡುವಂತೆ ಭಾಸವಾಯಿತು. ಅವಳು ಅತ್ಯಂತ ಭಾವತೀವ್ರ ಕೃತಿಯೊಂದನ್ನು ನುಡಿಸುತ್ತಿದ್ದಳು. ಅಷ್ಟು ಪುಟ್ಟ ಹೆಂಗಸು ಅಂಥ ಘೋರಾಗ್ನಿಯ ಜತೆ ಚೆನ್ನಾಟವಾಡುತ್ತಿರುವುದು ವಿಚಿತ್ರವೆನಿಸಿತು. ನಾನು ವಸ್ತುಲೋಕದ ಅರಿವಿನಿಂದ ಬಹುದೂರ ಸಾಗಿದ್ದೆ.

'ನಟಾಲ್ಯಾ, ಕುಟ್ಟಬೇಡ. ನಿಲ್ಲಿಸು!' ಕೋಪದಿಂದ ಕನಲುವ ಕರ್ನಲ್ ನನ್ನಿಂದ ಅನತಿ ದೂರದಲ್ಲಿ ನಿಂತಿದ್ದ. ಅವಳು ಕೈಗಳನ್ನು ಪಿಯಾನೊ ಮೇಲಿಂದ ತೆಗೆಯದೆ, ಹಿಂತಿರುಗಿ ನೋಡಿದಳು. ಎರಡು ಕಡೆಯ ಕಪೋಲಗಳನ್ನು ಒತ್ತಿದಂತೆ ತೋರುವ, ಹಕ್ಕಿಯಂಥ, ಪುಟಾಣಿ ಮುಖ, ಚೂಪಾದ ಮೂಗು - ವಿಶಾಲ ನೀಲಿ ಕಣ್ಣುಗಳು......

## ಅವರು ಮಣ್ಣಾಗಿದ್ದರೆ

*ತುಳಿಸಿಕೊಳ್ಳುತ್ತಿದ್ದರು ಅವರು*
*ಮಣ್ಣಾಗಿದ್ದರೆ,*
*ಹದವಾಗಿ ಬೆರೆತು*
*ಗೊಂಬೆಯಾಗುವಂತಿದ್ದರೆ.*

*ತುಳಿಯುವವರ ಪಾದಕ್ಕೆ*
*ಚುಚ್ಚುವ ಮುಳ್ಳುಗಳಾಗಿದ್ದಾರೆ ಈಗ*
*ಚರ್ಮ ಭೇದಿಸಿ ಒಳಗೆ ನುಗ್ಗಿ*
*ಅಲ್ಲಿಯೇ ಮುರಿದುಕೊಂಡು*
*ಒಳಗೇ ಕಪ್ಪಾಗಿ*
*ವಿಷವಾಗಿ*
*ಮೈಯೆಲ್ಲಾ ವ್ಯಾಪಿಸುತ್ತಿದ್ದಾರೆ,*
*ನಿಧಾನವಾಗಿ*



ಮೀನಾ ಸದಾಶಿವ
ಸಂಕ್ರಮಣ ಪ್ರಕಾಶನ, ೨ನೇ ಹಂತ
ಬನಶಂಕರಿ, ಬೆಂಗಳೂರು - ೫೬೦ ೦೭೦

'ದಸ್ತಗಿರಿಯಾಗಿದ್ದ ಆ ಹುಡುಗ ಎಲ್ಲೋ ಕಾಣೆಯಾಗಿದ್ದಾನೆ ನೋಡು' -ಸೇದುಕೊಳವೆಗೆ ಸಿಕ್ಕಿಸಿದ ಸಿಗರೇಟು ಹಿಡಿದು ರೂಮಿನೊಳಕ್ಕೆ ಬರುತ್ತಾ ಕರ್ನಲ್ ಹೇಳಿದ - ಕಂಪಿಸುವ ತಲೆಗೂದಲನ್ನು ಎಡ ಕೈಯಿಂದ ನೇವರಿಸುತ್ತಿದ್ದ.

''ಓಡಿಹೋದನಾ?'' ಅವಳು ಬೆಚ್ಚಿಬಿದ್ದು ಕೇಳಿದಳು.

''ಹುಂ.... ಹಾಗೆಯೇ ಕಾಣಿಸುತ್ತೆ......''

ಅವರು ಮಾತನಾಡುತ್ತಿದ್ದುದು ನನ್ನ ವಿಷಯವೇ ಎಂಬುದು ಸ್ಪಷ್ಟವಾಗಿತ್ತು. ಆದರೆ ತಕ್ಷಣ ಜಾಲಂದರದ ಹಿಂದಿನಿಂದ ಹೊರಬರುವಂತಿರಲಿಲ್ಲ, ನಾನು. ಹಾಗೆ ಮಾಡಿದ್ದರೆ ಅದು ತುಂಬಾ ಮುಜುಗರ, ಹಾಸ್ಯಾಸ್ಪದವಾಗುತ್ತಿತ್ತು.

''ಹೇಗೆ ತಪ್ಪಿಸಿಕೊಂಡು ಹೋದ ?'' -ಅವಳ ಪ್ರಶ್ನೆ.

''ಬಹುಶಃ ಕಿಟಕಿಯಿಂದ ಜಿಗಿದು ಹೋಗಿರಬಹುದು.. ಅವನೊಬ್ಬ ಕಟ್ಟಾ ಹುಚ್ಚ ..... ಹಾಳಾಗಿ ಹೋಗಲಿ....'' ಮತ್ತೆ ಬಾಗಿಲ ಕಡೆ ಹೋಗುತ್ತ ಕರ್ನಲ್ ಹೇಳಿದ.

ಅವಳು ಎದ್ದು ಮೇಲು ಹೊದಿಕೆ ಹೊದೆಯುತ್ತಾ ಅವನನ್ನು ಹಿಂಬಾಲಿಸಿದಳು. ಆಗ ನಾನು ಹೊರಕ್ಕೆ ಬಂದು ಅವರಿಗಿದುರಾದೆ.

ಕರ್ನಲ್ ಸರ್ರನೆ ನಿಂತು ''ಅಲ್ಲೇನು ಮಾಡುತ್ತಿದ್ದೆಯೋ, ಹಾಳಾದವನೇ ?'' ಎಂದ.

''ಸಂಗೀತ ಕೇಳುತ್ತ ನಿಂತಿದ್ದೆ.......''

ಅವನು ಪಿಳಿಪಿಳಿ ಕಣ್ಣಬಿಟ್ಟು ಆಕೆಯ ಕಡೆ ನೋಡಿದ. ಹುಬ್ಬು ಗಂಟಿಕ್ಕಿ ಕೋಪದಿಂದ ಭುಜ ಕುಣಿಸಿದ.

''ನಾನು ತಪ್ಪಾಗಿ ವರ್ತಿಸಿದ್ದರೆ, ದಯವಿಟ್ಟು ಕ್ಷಮಿಸಿ'' -ನಿರ್ಣಾಯಕವಾಗಿ ಹೇಳಿದೆ.

''ಸರಿ ಸರಿ; ಅದು ತಪ್ಪೋ, ಸರಿಯೋ ನನಗೆ ತಿಳಿಯದು. ಆದರೆ ನೀನು ಹಾಗೆ ಮಾಡಬಾರದಾಗಿತ್ತು'' -ಕರ್ನಲ್ ಸಿಗರೇಟು ಹಚ್ಚುತ್ತಾ ರಾಗ ಎಳೆದ. ಸ್ವಲ್ಪ ಹೊತ್ತು ನನ್ನನ್ನು ದಿಟ್ಟಿಸಿ ನೋಡಿ ಮೌನವಾಗಿದ್ದ. ಅವಳು ಅವನ ಮೈಗೆ ಮೈ ತಾಗಿಸಿ ನಿಂತು, ಮೆಲುದನಿಯಲ್ಲಿ ಅವನನ್ನು ಕೇಳಿದಳು - ಅವಳ ಮಾತು ನನಗೂ ಕೇಳಿಸಿತು.

''ಅವನಿಗೆ ಶಿಕ್ಷೆ ವಿಧಿಸುತ್ತಾರೆಯೇ ?''

ಕರ್ನಲ್ ಅವಳಿಂದ ಬಿಡಿಸಿಕೊಂಡು ಬಾಗಿಲ ಕಡೆ ತೋರಿಸುತ್ತಾ ''ಸ್ವಲ್ಪ ದಯಮಾಡಿ ಈಚೆಗೆ ಬಂದು ಹೊರಗೆ ನಡೆಯಯ್ಯಾ !'' -ಕರ್ನಲ್ ಒರಟಾಗಿ ಹೇಳಿದ.

ಬೆಳಗಿನ ಬೆಳಕಿನಿಂದ ತುಂಬಿದ ರೂಮಿನೊಳಕ್ಕೆ ನಾನು ಬಂದಾಗ ಅವನು ತುಸು ನಕ್ಕು ಹೇಳಿದ :

''ಎಷ್ಟು ಹೆದರಿಸಿಬಿಟ್ಟೆಯಯ್ಯಾ, ಆಸಾಮಿ, ನೀನು? ಒಳ್ಳೆ ತಮಾಷೆ ವ್ಯಕ್ತಿ ! ನಿನಗೆ ಸಂಗೀತ ಅಂದರೆ ಅಷ್ಟೊಂದು ಇಷ್ಟವಾ ?''

''ಅಂಥ ಅವಕಾಶ ಸಿಕ್ಕುವುದೇ ಅಪರೂಪ ನನಗೆ.''

''ಓಹೋ ಹಾಗೋ...... ಸರಿ .... ಇವತ್ತಿಗೆ ಈ ತನಿಖೆ ಸಾಕು'' ಎಂದವನೇ ಮತ್ತೆ ನಸುನಕ್ಕು, ಎರಡು ಸಲ ಕಣ್ಣು ಪಿಳಿಗುಟ್ಟಿಸುತ್ತ ಹೇಳಿದ :

''ಹೀಗೆಲ್ಲಾ ಆದಾಗ, ತುಂಬಾ ಉಗ್ರ ಕ್ರಮ ಜರುಗಿಸೋದು ಕಷ್ಟ..... ನನ್ನ ಹೆಂಡತಿಯ ಸಂಗೀತ ಕೇಳಲು ನಿನಗೆ ಮತ್ತೊಂದು ಅವಕಾಶ ಸಿಕ್ಕುವ ಹಾಗೆ ಕಾಣುತ್ತೆ.'' ಪ್ರತಿದಿನ ಅವಳು ಸರಿಯಾಗಿ ಇದೇ ಹೊತ್ತಿನಲ್ಲಿ ಪಿಯಾನೊ ನುಡಿಸುತ್ತಾಳೆ...... ಸರಿ.... ಬೈ... ಬೈ.....ಲೋ...... ಸಾಲ್ಟಿಖವ್! ಬಾರೋ ಇಲ್ಲಿ, ಇವನನ್ನು ಕೊಂಡೊಯ್ದು ಆ ಪೊಲೀಸ್ ಪೇದೆಗೆ ಒಪ್ಪಿಸು.''

ಸ್ಥೂಲಕಾಯದ, ಕಮಟು ಬೆವರು ವಾಸನೆಯ ಸಾಲ್ಟಿಖವ್ ಆಪಾದಮಸ್ತಕ ಪರೀಕ್ಷಿಸುವ ಹಾಗೆ ನನ್ನನ್ನು ನೋಡಿ

''ಸರಿ.... ಅಪ್ಪಣೆ ಸಾರ್'' ಎಂದ. ನನ್ನನ್ನು ಆಫೀಸಿನೊಳಕ್ಕೆ ಕರೆದೊಯ್ಯುವಾಗ ಅವನು ಒರಟಾಗಿ ಛೇಡಿಸಿದ: ''ಅರೆ, ಒಳ್ಳೆ ಮಿಂಡ ಕಣೊ ನೀನು.... ಇದೇನು ಮಾರ್ಕೆಟ್ಟು ಅಂತ ತಿಳ್ಕೊಂಡೆಯಾ ? ಹಾಯಂತ ಸಾಹೇಬ್ರು ಮನೆ ಒಳಗೆಲ್ಲಾ ಸಲೀಸಾಗಿ ಓಡಾಡಿದೆಯಲ್ಲೋ.... ಎಲಾ ನಿನ್ನ ಧೈರ್ಯವೇ! ಅದ್ಸರಿ, ನೀನು ಈಗ ಏನನ್ನೂ ರುಜುವಾತು ಮಾಡಿದ ಹಾಗಾಗಲಿಲ್ಲವಲ್ಲಾ? ಯಾಕೆ ಹೀಗೆಲ್ಲಾ ಮಾಡಿದೆ?''

''ನಾನು ಸುಮ್ಮನೆ ಸಂಗೀತ ಕೇಳುತ್ತಿದ್ದೆ, ಅಷ್ಟೆ''.

''ಅದಕ್ಕೆ ಹೊರಗಡೆ ಪಾರ್ಕು ಇರಲಿಲ್ವಾ?''.

ಅವನು ಪೊಲೀಸ್ ಪೇದೆಯತ್ತ ಗುರುಗುಟ್ಟುತ್ತಾ ನನ್ನನ್ನು ಅವನ ಕಡೆ ನೂಕಿ ಹೇಳಿದ :

''ಎಳಕೊಂಡು ಹೋಗು ಇವನನ್ನು !''

ಮೂಲ : ಮ್ಯಾಕ್ಸಿಂ ಗಾರ್ಕಿ - "MUSIC"
**ಕನ್ನಡಕ್ಕೆ : ಎಚ್. ಕೆ. ರಾಮಚಂದ್ರಮೂರ್ತಿ**

# ಶತ್ರು, ಯಾರಿಗೆ, ಯಾರು ?

ನೆನಪಿಡು ಗೆಳೆಯ, ನೀನೂ ಗುಲಾಮನಾಗಿದ್ದೆ
ಮೊನ್ನೆ ಮೊನ್ನೆಯವರೆಗೆ
ನಾನೂ ಅಷ್ಟೆ, ಗುಲಾಮಗಿರಿಯಲ್ಲಿ ಪರಿತಪಿಸಿದ್ದೆ.

ಆಮೇಲೆಯೆ ಅಲ್ಲವೆ, ಬಂದದ್ದು ಆ ಋತುಮಾನ :
ಬ್ರಿಟಿಷರೆದುರು ದೀರ್ಘ ಹೋರಾಡಿದ ದಿನ
ನಾವೆಲ್ಲ ನೆತ್ತರಲಿ ಮಾಡಿದ್ದೆವಲ್ಲ ಸ್ನಾನ !

ದುರ್ದೈವದ ಆ ದಿನವೂ ಬಂತೊಮ್ಮೆ :
ನನ್ನ, ನಿನ್ನ ಇರವು ಬೇರ್ಪಡುವ ಗಳಿಗೆ :
ಆಗಲೂ ಹರಿಯಿತಲ್ಲ ನೆತ್ತರ ಹೊಳೆ ನಮ್ಮ ನಡುವೆ !

ನಮ್ಮ ನಡುವೆ ದ್ವೇಷ ಹೇಗೆ ಬೆಳೆಯಿತೆಂದರೆ,
ಬರೇ ಕಣ್ಣ ನೋಟದಲಿ
ಒಬ್ಬರಿನ್ನೊಬ್ಬರನು ಚುಚ್ಚುವಷ್ಟು !

ಆದರೀಗ, ನಾನಾಗಲಿ ನೀನಾಗಲಿ
ಅದನೆಲ್ಲ ಮರೆಯಬೇಕಲ್ಲ
ಪರಸ್ಪರ ಕ್ಷಮಿಸಿ ಬೆರೆಯಬೇಕಲ್ಲ.

ನನ್ನನ್ನು ನೀ ಒಪ್ಪಿದರೆ
ನಿನ್ನನ್ನು ಅಪ್ಪುವೆ ನಾನು
ಎಸಗಿದೆಲ್ಲಾ ತಪ್ಪುಗಳನ್ನು ಒಪ್ಪ ಮಾಡೋಣ
ನಾವಿಬ್ಬರೂ –ಇನ್ನಾದರೂ.



ಆದರೆ ಗೆಳೆಯ, ಮೊದಲು ನೀನೆ ಮುರಿದುಹಾಕು
ನಿನ್ನ ಕೈಯೊಳಗಿನ ಆ ಖಡ್ಗವನು
ರಕ್ತ ಸಿಕ್ತ ಬಟ್ಟೆಗಳನೂ ನೀನೇ ಮೊದಲು
ತೊಳೆದಿಡಬೇಕು ಸ್ವಚ್ಛ
ಅಷ್ಟಾದರೆ ಸಾಕು,
ನನ್ನ ಗುರುತು ನಿನಗೆ ಸುಲಭ
ನಿನ್ನ ಗುರುತು ನನಗೂ ಸಲೀಸು

ಅನಂತರ ಗೆಳೆಯ ನೀನಾಗಿಯೆ ತರುವಿ ನನಗಾಗಿ
ಲಾಹೋರದ ನಿನ್ನ ಹೂಬನದಿಂದ
ತಾಜಾ ಪುಷ್ಪಗಳ ಸೊಗಸಾದ ಗುಚ್ಛ

ನಾನೂ ತರುವೆ, ನಿನಗಾಗಿ –
ನಮ್ಮ ಬನಾರಸದ ಒಂದು ಬೆಳಕಿನ ಕಿರಣ

ಹಿಮಾಲಯದಿಂದ ಸೂಸಿ ಬರುವ
ತಂಗಾಳಿ ಅಲೆಗಳನ್ನು ನಾ ತರುವೆ ನಿನಗೆ

ಆಗ ನಾ ಕೇಳುವೆನು : 'ಯಾರು ನನ್ನ ಶತ್ರು ?'
ನೀನೂ ಆಗ ಕೇಳುವಿ : 'ನನಗಾರು ಇನ್ನು ಶತ್ರು ?'

ಮೂಲ : ಅಲಿ ಸರ್ದಾರ್ ಜಾಫ್ರಿ

ಅನು : 'ಸರ್ವಜಿತ'
ನಂ. ೪, ರಾಯಬಾಗಕರ ಆವರಣ, ಮಸಾರಿ, ಗದಗ - ೫೮೨ ೧೦೧

# ವಿಷಕಂಠ



ಅವರದು ಇನ್ನಿಲ್ಲದ ಪ್ರೇಮ
ಇವನ ತಾಳ ಅವಳ ಹೆಜ್ಜೆ
ನಾದ ಆವರಿಸಿತ್ತು ನಾಲ್ಕೂ ಕಡೆ
ಕೂಡಿದರು ಆಡಿದರು
ಜೋಡಿಹಕ್ಕಿಗಳಂತೆ ಮೆರೆದರು

ಇವ ಹಾಡುತ್ತಲೇ ಇದ್ದ
ಅವಳು ಹೆಜ್ಜೆ ಹಾಕುತ್ತ
ಗಿರಕಿಗಳ ಹೊಡೆಯುತ್ತ
ನಿಧಾನದಲಿ ಜಾರಿಹೋದಳು
ಝಣಝಣಪ ಹಾಸಿಗೆಗೆ !

ಇವ ಹಾಡು ನಿಲ್ಲಿಸಲಿಲ್ಲ
ಹಾಡುವುದೇ ಅವನ
ವೃತ್ತಿ ಪ್ರವೃತ್ತಿ
ತಂತಿ ಕಿತ್ತು ಬಂತು
ಬಿಕ್ಕಳಿಕೆಯಂಥ ಹಾಡು !

ಟ್ರಸ್ಟು ಫೌಂಡೇಶನ್ನು
ವಿದೇಶಿ ಪ್ರವಾಸ ವಾಸ
ಅವಳ ಎಲ್ಲ ವ್ಯವಸ್ಥೆಗೆ
ಇವನಿಗೊಂದು ಮೆಂಬರ್‌ಶಿಪ್ಪು
ಜೊತೆಗೊಂದು ಫೆಲೋಶಿಪ್ಪು !

ಧಾಂ ಧೂಂ ಓಡಾಟ
ಪುರುಸೊತ್ತಿಲ್ಲದ ಭೋಜನ ಕೂಟ
ರಾತ್ರಿಯಲ್ಲಿ ನಿದ್ದೆಯಿಲ್ಲ
ತಾಳಕೊಂದು ಹೆಜ್ಜೆಯಿಲ್ಲ
ವಿಷಕಂಠನ ರೂಪ !

ಅವಳ ಕೆನ್ನೆಗೊಂದು ಬಾರಿಸಿ
ಮೆಂಬರ್‌ಶಿಪ್ಪುಗಳ ಕಿತ್ತೆಸೆದು
ಒಮ್ಮೆ ಉಗುಳಿ ಬಂದಿದ್ದರೆ
ಸುಖನಿದ್ದೆಯಾದರೂ ಪಾಲಿಗಿತ್ತಲ್ಲ !
ಹೊಸರಾಗ ಶೋಧಿಸಬಹುದಿತ್ತಲ್ಲ !

ಎಸ್. ಮಾಲತಿ
ಮಹಾಲಸ ನಿಲಯ, ಜೋಗ್ ರಸ್ತೆ
ಸಾಗರ – ೫೭೭ ೪೦೧, ಶಿವಮೊಗ್ಗ ಜಿಲ್ಲೆ

# ಸತ್ಯ



ತಲೆಕೆಳಗಾಗಿ ತೂಗು ಹಾಕಿದರೂ
ಆಧಾರವಿಲ್ಲದೇ,
ಪಟಪಟನೆ ಬಡಿಯುತ್ತಿವೆ ರೆಕ್ಕೆ.
ಕಣ್ಣು ಗುಡ್ಡೆಗೆ ನೆತ್ತರ ಏರಿ
ಕುತ್ತಿಗೆಯಲ್ಲಿ ಜೀವ ಹೊಯ್ದಾಡಿ
ತ್ರಿಶಂಕುವಾಗಿ ದೇಹ
ಅದುರುತ್ತಿದೆ,
ಕಾಲು ಸೆಳೆಯುತ್ತಿವೆ
ಸತ್ಯದ ಗತಿ ಏನಾಗುತ್ತಿದೆ ?

[illegible]
[illegible]
[illegible]

# ಬದುಕು ಬಲಿಗೊಟ್ಟ ಗಿಯೋರ್ದಾನೊ ಬ್ರೂನೋ

*ಸೂರ್ಯನಂತಹ ಅಸಂಖ್ಯ ನಕ್ಷತ್ರಗಳು ವಿಶ್ವದಲ್ಲಿವೆ. ಅವಕ್ಕೂ ಗ್ರಹಗಳಿರಬಹುದು. ಭೂಮಿಯಾಗಲಿ, ಸೂರ್ಯನಾಗಲಿ ವಿಶ್ವದ ಕೇಂದ್ರವಲ್ಲ ಎಂದು ನಾನೂರು ವರ್ಷಗಳ ಹಿಂದೆಯೇ ಕೊಪರ್ನಿಕಸ್‌ನ 'ಸೂರ್ಯಕೇಂದ್ರವಾದ'ದಿಂದ ಪ್ರೇರಿತನಾಗಿ ತನ್ನದೇ ಚಿಂತನೆಗಳನ್ನು ಪ್ರತಿಪಾದಿಸಿದ ಗಿಯೋರ್ದಾನೊ ಬ್ರೂನೋ (೧೫೪೮-೧೬೦೦) ರೋಮನ್ ಕ್ಯಾಥೋಲಿಕ್ ಚರ್ಚಿನ ಆಗ್ರಹಕ್ಕೆ ತುತ್ತಾದ. ಅವನ ಪ್ರತಿಪಾದನೆಗಳಿಗೆ ದೊರೆತ ಜನರ ಉತ್ಸಾಹಪೂರ್ಣ ಬೆಂಬಲ ಚರ್ಚಿನ ನಿದ್ದೆಗೆಡಿಸಿತು. ಅವನನ್ನು ಇನ್ನಷ್ಟು ಬೆಳೆಯಬಿಟ್ಟರೆ ತಾನು ಜನರಲ್ಲಿ ಶತಶತಮಾನಗಳಿಂದ ಹುಟ್ಟುಹಾಕಿದ್ದ ನಂಬಿಕೆ ಆಧಾರಿತ ಸಿದ್ಧಾಂತಗಳು ಮೂಲೆಗುಂಪಾಗುತ್ತವೆ ಎಂದು ಹೆದರಿ ಬ್ರೂನೋನನ್ನು ಜೀವಂತ ಸುಡುವ ಮೂಲಕ ಚರ್ಚ್ ತನ್ನ ಹಟ ಸಾಧಿಸಿಕೊಂಡಿತು. ಪೂರ್ವಾಗ್ರಹವಿಲ್ಲದ ಆತ್ಮವಿಶ್ವಾಸದ ತರ್ಕದೆದುರು ಶುಷ್ಕ ನಂಬಿಕೆ ಎಂದಿಗೂ ನೈತಿಕ ಗೆಲುವು ಸಾಧಿಸದು ಎಂದು ಬ್ರೂನೋ ಪ್ರಕರಣದಿಂದ ನಮಗೆ ತಿಳಿದುಬರುತ್ತದೆ. ಬ್ರೂನೋನ ವಿಚಾರಗಳು ಇವತ್ತು ಪುರಾವೆ ಸಹಿತ ನಿಜವಾಗಿವೆ. ಅನೇಕ ನಕ್ಷತ್ರಗಳಿಗೆ ಗ್ರಹಗಳಿರುವುದು ಪತ್ತೆಯಾಗಿದೆ. ಅಸೀಮ ವಿಶ್ವದಲ್ಲಿ ಸೂರ್ಯ, ಭೂಮಿಗಳು ಏನೇನೂ ಅಲ್ಲ ಎಂದು ನಮಗೆ ಸ್ಪಷ್ಟವಾಗುತ್ತಿದೆ.*

*ಆಧಾರ ರಹಿತ ನಂಬಿಕೆಗಳ ಮೌಢ್ಯತೆಗೆ ತನ್ನ ಬದುಕನ್ನೇ ಬಲಿಕೊಡಬೇಕಾಗಿ ಬಂದ ಬ್ರೂನೋ ಸ್ವತಂತ್ರ ಆಲೋಚನೆ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಗಳ ಮಹತ್ವವನ್ನು ಎತ್ತಿಹಿಡಿದ. ಬದಲಾವಣೆ ಬಯಸದ, ಪರಿಷ್ಕರಣೆಗೆ ಬೆದರುವ, ರೂಢಿಗತ ನಂಬಿಕೆಗಳನ್ನು ಪ್ರಶ್ನಿಸಬೇಕೆನ್ನುವ ಪ್ರೇರಣೆಯನ್ನು ಅವನು ನೀಡಿದ. ಅವನ ಜೀವನದ ತೀವ್ರ ಏರಿಳಿತಗಳನ್ನು ಈ ಬರಹದಲ್ಲಿ ಓದಿ. ವಿಜ್ಞಾನ ಕೇವಲ ವಸ್ತುನಿಷ್ಠವಲ್ಲ. ತಾನು ಏನೆಂದು ಅರ್ಥಮಾಡಿಸಲು ಅದು ಮನುಷ್ಯನಿಂದ ಪೂರಕ ಮನೋಭಾವವೊಂದನ್ನು ಬೇಡುತ್ತದೆ. ಅದುವೇ ವೈಜ್ಞಾನಿಕ ಮನೋಭಾವ. ಕುತೂಹಲ, ತರ್ಕ, ತಾಳ್ಮೆ, ನಿರ್ಭೀತಿಗಳೇ ಅದರ ಲಕ್ಷಣಗಳಾಗಿದ್ದು ವಿಜ್ಞಾನಕ್ಕೆ ಅವು ಮಾನವೀಯ ನೆಲೆಗಟ್ಟನ್ನು ಒದಗಿಸುತ್ತವೆ. ಈ ಹಿನ್ನೆಲೆಯಲ್ಲಿ ಬ್ರೂನೋನ ಬದುಕು ಗಮನಾರ್ಹವಾಗಿದೆ.*

ಇಬ್ಬರು ಪ್ರವಾಸಿಗರು 'ಹೂಗಳ ಚೌಕ'ಕ್ಕೆ ಸಾಗುವ ಬೀದಿಯಲ್ಲಿ ನಡೆದುಹೋಗುತ್ತಿದ್ದಾರೆ. ರೋಮ್ ನಗರದ ಒಂದು ಚೌಕ ಅದು. ಚೌಕದಲ್ಲಿ ಜನ ನೆರೆದಿರುವುದು ಅವರ ಕಣ್ಣಿಗೆ ಬಿತ್ತು, ಪ್ರವಾಸಿಗರು ತಮ್ಮೊಳಗೇ ಮಾತನಾಡಿಕೊಂಡರು :

''ಜನ ಯಾಕೆ ಹೀಗೆ ಚೌಕದಲ್ಲಿ ಸೇರಿದ್ದಾರೆ ?''

''ದೊಂಬರಾಟವೇನಾದರೂ ನಡೆಯುತ್ತಿದೆಯೆ ?''

''ಬಹುಶಃ ಯಾರೋ ಧಾರ್ಮಿಕ ಉಪನ್ಯಾಸ ನಡೆಸಿಕೊಡುತ್ತಿರಬೇಕು.''

''ಉಪನ್ಯಾಸ, ಬೋಧನೆ ಕೇಳಲು ಹೀಗೆ ಯಾರು ಬಿಸಿಲಲ್ಲಿ ನಿಲ್ಲುತ್ತಾರೆ ? ನನಗನ್ನಿಸುತ್ತೆ ! ಏನೋ ಡಂಗುರ ಸಾರುತ್ತಿರಬೇಕು. ಬೇಗ ನಡಿ, ವಿಚಾರ ತಿಳಿಯೋಣ.''

ಅವರಿಬ್ಬರು ಚೌಕ ತಲುಪಿದರು. ಚೌಕದ ನಡು ಭಾಗದಲ್ಲಿ ಸುಡುಗಂಭಕ್ಕೆ ಯಾರನ್ನೋ ಬಿಗಿದು ಕಟ್ಟಿದ್ದುದು ಕಾಣಿಸಿತು. ಸುತ್ತ ನೆರೆದಿದ್ದ ಜನರಿಂದ ಪ್ರಶ್ನೆ, ಪ್ರತಿಕ್ರಿಯೆಗಳ ಮಹಾಪೂರವೇ ಹರಿದುಬರುತ್ತಿತ್ತು.

''ಅವನೊಬ್ಬ ಹುಚ್ಚ !''

''ಅವನೊಬ್ಬ ಪಾಷಂಡಿ !''

''ಅಂತಹ ತಪ್ಪೇನು ಮಾಡಿದ್ದಾನೆ ಅವನು ?''

''ಅವನ ತಪ್ಪು ಸಣ್ಣದೇನಲ್ಲ, ಬೈಬಲ್ಲಿನಲ್ಲಿ ಇಲ್ಲದ ವಿಷಯಗಳನ್ನು ಸತ್ಯ ಅಂತಾನಂತೆ. ಪೋಪ್ ಗುರು ಹೇಳುವುದೆಲ್ಲಾ ಒಪ್ಪಬೇಕಿಲ್ಲ ಎನ್ನುತ್ತಾನಂತೆ !''

''ಹೌದಾ....! ಹಾಗಿದ್ದರೆ ಅವನನ್ನು ಸುಡುವುದು ಸರಿಯಾಗಿಯೆ ಇದೆ.'' ಹೀಗೆ ಬಾಯಿಗೊಂದರಂತೆ ಮಾತು, ಬಾಯಿಗೆ ಬಂದಂತೆ ಮಾತು.

''ಛೆ ! ಒಬ್ಬ ಮನುಷ್ಯನನ್ನು ಜೀವಂತ ಸುಡಲು ಇವರ್‍ಯಾರು ? ಕ್ರಿಸ್ತ ಹೇಳಿದ್ದೇನು ? ಪಾತಕಿಯನ್ನು ಕ್ಷಮಿಸಿ, ಅವನ ಮನಸ್ಸನ್ನು ಪರಿವರ್ತನೆ ಮಾಡಿ ಎಂದಲ್ಲವೆ ? ನನಗೇಕೊ ಇದೆಲ್ಲಾ ಅತಿರೇಕ ಎನಿಸುತ್ತದೆ.''

ಯಾರೋ ಗುಂಪಿನಲ್ಲಿ ಉಸುರಿದ ಈ ಮಾತುಗಳು ಯಾರ ಕಿವಿಗೂ ಬೀಳಲಿಲ್ಲ. ಯಾಕೆಂದರೆ ಈ ಮಾತುಗಳನ್ನು ಆಡಿದ ವ್ಯಕ್ತಿಗೆ ಅಂಜಿಕೆಯಿತ್ತು.

ಗುಸುಗುಸು, ಜೋರು ಮಾತುಗಳು ಮುಂದುವರಿದೇ ಇದ್ದವು.

''ಅವನು ಯಾವ ಸೀಮೆಯವನೋ ?'' ಯಾರಿಗೋ ಒಂದು ಮೂಲಭೂತ ಅನುಮಾನ ಕಾಡಿತು.

''ನಮ್ಮ ಸೀಮೆಯವನಂತೆ, ಇಂಗ್ಲೆಂಡಿನಲ್ಲಿದ್ದು ಬಂದಿದ್ದಾನಂತೆ''.

''ಹೆಸರೇನೋ ?''

''ಏಂತದೋ ಬ್ರೂನೋ ಅಂತ.''

''ಗಿಯೋರ್ದಾನೊ ಬ್ರೂನೋ !''

''ಇಗೋ, ನನ್ನ ಮಾತು ಕೇಳಿ ! ಯಾರೂ ಗದ್ದಲ ಮಾಡಬೇಡಿ. ಶಾಂತಿ ಕಾಪಾಡಿ, ಶಿಸ್ತಿರಲಿ.'' ಇದ್ದಕ್ಕಿದ್ದಂತೆ ಒಂದೇ ಉಸುರಿಗೆ ಪಾದ್ರಿಯೊಬ್ಬ ಕೂಗಿಕೊಂಡ. ಎಲ್ಲರ ಗಮನ ಪಾದ್ರಿಯ ಕಡೆ ತಿರುಗಿತು.

''ಈ ಪಾಷಂಡಿ ಮಹೋನ್ನತ ಧರ್ಮಗುರು ಪೋಪರನ್ನು ಅವಮಾನಿಸಿದ್ದಾನೆ. ಬೈಬಲ್ಲಿನಲ್ಲಿರುವ ವಿಚಾರಗಳು ನಂಬಲರ್ಹವಲ್ಲವಂತೆ. ಇವನ ಪ್ರಕಾರ ಕ್ರೈಸ್ತ ಸನ್ಯಾಸಿಗಳು ಜನರ ಬದುಕನ್ನು ವ್ಯರ್ಥಗೊಳಿಸುವ ಕತ್ತೆಗಳಂತೆ. ಈ ಧರ್ಮಲಂಡನನ್ನು ಸುಡಬೇಕೆಂದು ಆಜ್ಞೆಯಾಗಿದೆ. ಹೀಗೆ ಸುಡುವುದು ಚರ್ಚಿನ ವಿಚಾರಣಾ ತಂಡ (ಇನ್‌ಕ್ವಿಸಿಷನ್). ತೆಗೆದುಕೊಂಡ ನಿರ್ಧಾರ, ತಿಳಿಯಿತೆ? ಎಲ್ಲಾ ಸ್ವಲ್ಪ ದೂರ ಸರಿಯಿರಿ.'' ಪಾದ್ರಿ ಮತ್ತೊಮ್ಮೆ ಏರುದನಿಯಲ್ಲಿ ಸೂಚಿಸಿದ. ಅವನ ಧ್ವನಿಯಲ್ಲಿ ಎಲ್ಲಾ ಕೆಲಸಗಳನ್ನು ಬೇಗ ಮುಗಿಸಿಬಿಡಬೇಕೆಂಬ ಆತುರವಿತ್ತು. ದೊಂಬರಾಟ ನೋಡಲು ನೆರೆದಿದ್ದಂತೆ ನಿಂತಿದ್ದ ಜನಸಮೂಹ ಹಿಂಜರಿಯಿತು.

**ಕೆ. ಎಸ್. ರವಿಕುಮಾರ್**

ಸುತ್ತ ನೆರೆದವರ ಗಲಿಬಿಲಿ, ಚರ್ಚಿನವರ ಚಡಪಡಿಕೆಗಳ ನಡುವೆ ಗಿಯೋರ್ದಾನೋ ಬ್ರೂನೋನ ತಪ್ಪೇನು ಎಂದು ಯಾರಿಗೂ ಅರ್ಥವಾಗಲಿಲ್ಲ. ಅವನು ಹೇಳಿದ್ದೇನು? ಅವನು ಹೇಳಿದ್ದರಲ್ಲಿ ಏನು ತಪ್ಪಿತ್ತು? ಚರ್ಚಿನವರಿಗೆ ಇವನಿಂದ ಆದ ಅವಮಾನ ಎಂತಹುದು? ಯಾರಿಗೂ ಏನೇನೂ ಸ್ಪಷ್ಟವಾಗಲಿಲ್ಲ. (ಇವೆಲ್ಲಾ ಸಾಮಾನ್ಯ ಜನರಿಗೆ ತಿಳಿಯಬೇಕಾಗಿಯೂ ಇಲ್ಲ, ಅಲ್ಲವೆ?)

ಬ್ರೂನೋ ಪೂರಾ ಕುಗ್ಗಿಹೋಗಿದ್ದ. ವರ್ಷಗಟ್ಟಲೆ ನಡೆದ ವಿಚಾರಣೆ ಅವನನ್ನು ಹೈರಾಣಾಗಿಸಿಬಿಟ್ಟಿತ್ತು. ತಾನು ಇವರ ಕೈಯಲ್ಲಿ ಸಾಯುವುದು ಅವನಿಗೆ ಖಚಿತವಾಗಿತ್ತು. ಯಾವ ಪವಾಡವೂ ತನ್ನನ್ನು ಉಳಿಸುವುದಿಲ್ಲವೆಂದು ಅವನಿಗೆ ಖಾತರಿಯಾಗಿತ್ತು. ಧೈರ್ಯದಿಂದಲೇ ಸಾವನ್ನು ಎದುರಿಸುವುದು, ಆ ಮೂಲಕ ಚರ್ಚಿನವರ ಪೊಳ್ಳುತನಗಳಿಗೆ ಪೆಟ್ಟುಕೊಡುವುದೆಂದು ಅವನು ನಿರ್ಧಾರ ಮಾಡಿಯಾಗಿತ್ತು. ತನ್ನ ಸುತ್ತ ಒಟ್ಟಿದ ಒಂದೊಂದು ತುಂಡೂ ಮಡುಗಟ್ಟಿದ ಹುಂಬ [illegible]ಗಳ ಸಂಕೇತವಾಗಿ ಕಾಣುತ್ತಿತ್ತು. ತಾನು ಸ್ವತಂತ್ರವಾಗಿ ಆಲೋಚಿಸುವ, ಊಹಿಸುವ ಪ್ರವೃತ್ತಿಯನ್ನು ಪ್ರಚೋದಿಸಿದ್ದಕ್ಕಾಗಿ ತನಗಿಂತಹ

ಶಿಕ್ಷೆಯಾಗಿದೆ ಎಂದು ಮುಂದಿನ ಪೀಳಿಗೆಗಳಿಗಾದರೂ ತಿಳಿಯಲಿ ಎಂದು ಅವನು ಆಶಿಸಿದ್ದ.

ಬೆಂಕಿಯ ಕೆನ್ನಾಲಿಗೆಗಳು ಎಲ್ಲೆಡೆ ಚಾಚತೊಡಗಿದ್ದವು. ಬ್ರೂನೋ ಭಯಂಕರ ಬೆವೆತು ಹೋದ. ಕಾಲಿನಿಂದ ತಲೆಯವರೆಗೂ ಅಸಾಧ್ಯ ವೇದನೆ. ಮುಂದಿನ ಕೆಲವೇ ಕ್ಷಣಗಳಲ್ಲಿ ಅವನ ದೇಹ ಉರಿಯತೊಡಗಿತ್ತು. ಸತ್ಯವನ್ನೇ ಹೇಳಿದ್ದೇನೆ ಎಂದು ಕೊನೆಯವರೆಗೂ ವಾದಿಸುತ್ತಿದ್ದ ಬ್ರೂನೋನ ಪ್ರಾಣಪಕ್ಷಿ ಮತಾಂಧತೆಯ ಬೆಂಕಿಯಲ್ಲಿ ಬೆಂದುಹೋಯಿತು. ಅವನು ಇತಿಹಾಸವಾದ. ವೈಚಾರಿಕ ವಿಜ್ಞಾನದ ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗದ. ಅವನು ಸುಟ್ಟುಹೋಗುತ್ತಿದ್ದಾಗ ಪಾದ್ರಿಯೊಬ್ಬ ಕ್ರೈಸ್ತಧರ್ಮದ ಸಂಕೇತವಾದ ಶಿಲುಬೆಯನ್ನು ಜ್ವಾಲೆಗಳ ಮಧ್ಯೆ ಬ್ರೂನೋನ ಮುಖದತ್ತ ತೂರಿಸಿದ. ಅದನ್ನು ಚುಂಬಿಸಿ ಕಡೆಗಳಿಗೆಯಲ್ಲಾದರೂ ತನ್ನ ಪಾತಕದಿಂದ ಪಾರಾಗಲಿ ಎಂಬುದು ಅವನ ಆಶಯ. ಈ ಢೋಂಗಿಯೆಲ್ಲಾ ಬೇಡವೆಂದು ಬ್ರೂನೋ ತನ್ನ ಮುಖವನ್ನು ಬೇರೆಡೆಗೆ ತಿರುಗಿಸಿದನಂತೆ.

❖ ❖ ❖

ಬ್ರೂನೋ ನೇಪಲ್ಸ್ ಸನಿಹದ ನೋಲಾ ಎಂಬ ಊರಿನಲ್ಲಿ ೧೫೪೮ರಲ್ಲಿ ಜನಿಸಿದನು. ತರ್ಕ ಹಾಗೂ ತತ್ವಶಾಸ್ತ್ರಗಳನ್ನು ಹೆಚ್ಚಿನ ಆಸ್ಥೆಯಿಂದ ಅವನು ಅಭ್ಯಸಿಸಿದ. ಮುಂದೆ ಪಾದ್ರಿಯಾಗಲು ಬೇಕಾದ ಧಾರ್ಮಿಕ ಶಿಕ್ಷಣವನ್ನೂ ಅವನು ಪಡೆದ. ಚಿಕ್ಕಂದಿನಿಂದಲೂ ಆಲೋಚನೆಗಳಲ್ಲಿ ತೊಡಗಿ ಹೊಸ ಹೊಸ ದಾರ್ಶನಿಕ ಚಿಂತನೆಗಳ ಮೂಲಕ ಜೀವನವನ್ನು ಅರ್ಥಮಾಡಿಕೊಳ್ಳಲೆತ್ನಿಸುವುದು ಅವನ ಹವ್ಯಾಸವಾಗಿತ್ತು. ಅವನ ಈ ಮನೋವೃತ್ತಿ ತನಗನಿಸಿದ್ದನ್ನು ಬೇರೆಯವರ ಮುಂದೆ ನೇರವಾಗಿ, ನಿರ್ದಾಕ್ಷಿಣ್ಯವಾಗಿ ತೋಡಿಕೊಳ್ಳಲು ಪ್ರೇರಣೆಯಾಗಿತ್ತು. ವಾದಗಳು ಏರ್ಪಟ್ಟರೆ ಎದುರಾಳಿಯನ್ನು ಲೆಕ್ಕಿಸದೆ ಅಮಿತ ಸ್ಫೂರ್ತಿಯಿಂದ ವಾದಿಸುವುದು ಅವನಿಗೆ ಕರಗತವಾಗಿತ್ತು. ಇದೇಕೆ ಹೀಗಿರಬಾರದು ಎಂದು ಅವನು ಪ್ರಶ್ನೆಗಳನ್ನು ಪುಂಖಾನುಪುಂಖವಾಗಿ ಎತ್ತಿದನೆಂದರೆ ಎದುರಾಳಿಗಳು ನಿರುತ್ತರರಾಗಬೇಕಿತ್ತು. ಹೀಗಾಗಿ ಬ್ರೂನೋ ಸ್ನೇಹಿತರಿಗಿಂತ ವೈರಿಗಳನ್ನೇ ಹೆಚ್ಚು ಸಂಪಾದಿಸಿದನು.

ಮಧ್ಯಯುಗದ ಯುರೋಪ್‌ನಲ್ಲಿ ಕ್ರಿಶ್ಚಿಯನ್ ಕ್ಯಾಥೋಲಿಕ್ ಚರ್ಚ್ ಬಹಳ ಪ್ರಬಲವಾಗಿತ್ತು. ಇಟಲಿಯ ರೋಮನ್ನು ತನ್ನ ಕೇಂದ್ರವಾಗಿಟ್ಟುಕೊಂಡು ಅದು ಇಡೀ ಯುರೋಪಿನ ಜನರ ಧಾರ್ಮಿಕ ಜೀವನ ಕ್ರಮವನ್ನು ನಿಯಂತ್ರಿಸುತ್ತಿತ್ತು. ರಾಜಕಾರಣದಲ್ಲೂ ಮೂಗು ತೂರಿಸುತ್ತಿತ್ತು. ಯಾವುದೇ ಕ್ಷೇತ್ರದಲ್ಲಿ ಯಾರಾದರೂ ಹೊಸ ಆಲೋಚನೆ, ಸಿದ್ಧಾಂತಗಳನ್ನು ಪ್ರಚುರಪಡಿಸಿದರೆ ಅವು ಮೊದಲು ಚರ್ಚಿನ 'ಸೆನ್ಸಾರ್'ನಿಂದ ಪರಿಷ್ಕರಣೆಗೆ ಒಳಪಡಬೇಕಿತ್ತು. ಅವುಗಳನ್ನು ತಿದ್ದುವ ಸ್ವಘೋಷಿತ ಅಧಿಕಾರ ಚರ್ಚಿನದಾಗಿತ್ತು. ಅದರ ತೀರ್ಮಾನಗಳನ್ನು ವಿರೋಧಿಸುವವರು ಅದು ರೂಪಿಸಿದ್ದ ಇನ್‌ಕ್ವಿಸಿಷನ್ (ವಿಚಾರಣಾ ಮಂಡಳಿ) ನೀಡುವ ಶಿಕ್ಷೆಗೆ ಗುರಿಯಾಗಬೇಕಿತ್ತು. ಇನ್‌ಕ್ವಿಸಿಷನ್ ಸಂಶೋಧಿಸಿದ್ದ ಅನೇಕ ಹೊಸ ಚಿತ್ರಹಿಂಸಾ ವಿಧಾನಗಳು ಯೂರೋಪಿನಲ್ಲಿ ಕುಖ್ಯಾತವಾಗಿದ್ದವು. ಹೀಗಾಗಿ ಚರ್ಚನ್ನು ಎಂದೂ ಎದುರು ಹಾಕಿಕೊಳ್ಳಲು ಜನತೆ ಬಯಸುತ್ತಿರಲಿಲ್ಲ.

ಕ್ರಿಸ್ತಪೂರ್ವದಷ್ಟು ಹಿಂದೆಯೇ ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ ಪ್ರತಿಪಾದಿಸಿದ್ದ ಬಹುತೇಕ ವಿಚಾರಗಳನ್ನೇನೋ ಚರ್ಚ್ ಎತ್ತಿ ಹಿಡಿದಿತ್ತು. ಉದಾಹರಣೆಗೆ, ಅವನ 'ಭೂಕೇಂದ್ರವಾದ'. ಅದರ ಪ್ರಕಾರ ಸೂರ್ಯ-ಚಂದ್ರಾದಿ ಗ್ರಹಗಳು, ನಕ್ಷತ್ರಗಳು ಭೂಮಿಯನ್ನು ಸುತ್ತುತ್ತಿರುತ್ತವೆ ಎಂದು ತಿಳಿಯಲಾಗಿತ್ತು. ಚರ್ಚ್ ಭೂಕೇಂದ್ರವಾದವನ್ನು ತನ್ನದೇ ಆದ ಧಾರ್ಮಿಕ ಲಾಭಗಳಿಗೋಸ್ಕರ ಸಮರ್ಥಿಸಿತ್ತು. ಈ ವಾದ ಕೊಪರ್ನಿಕಸ್ (೧೪೭೩ - ೧೫೪೩)ನ ಕಾಲದವರೆಗೂ ಉಳಿದುಬಂತು. ಅವನು ಸೌರವ್ಯೂಹದ ಕೇಂದ್ರ ಸೂರ್ಯ ಎಂದದ್ದಲ್ಲದೆ ವಿಶ್ವ ಅಗಾಧವಾಗಿದೆ ಮತ್ತು ಭೂಮಿಗೆ ಚಲನೆಯಿದೆ ಎಂದು ವಾದಿಸಿದ್ದನು. ಈ ಸಂಬಂಧ ಕೊಪರ್ನಿಕಸ್ ಬರೆದ ಪುಸ್ತಕವನ್ನು ಬ್ರೂನೋ ಸನ್ಯಾಸಿಮಠದಲ್ಲಿದ್ದಾಗಲೇ ಕದ್ದು ಓದಿದ್ದನು. ಅವನಿಗೆ ಕೊಪರ್ನಿಕಸ್‌ನ ವಾದ ಸರಿಯೆನಿಸಿತು. ಅರಿಸ್ಟಾಟಲನ ವಿಚಾರಗಳು ಅರ್ಥಹೀನ ಎನಿಸತೊಡಗಿದವು. ಅವನ್ನು ಅವನು ಬಹಿರಂಗವಾಗಿ ನಿರಾಕರಿಸಲು ಆರಂಭಿಸಿದ. ಬ್ರೂನೋನ ಮೇಲೆ ಚರ್ಚ್‌ನ ಕೆಂಗಣ್ಣು ಬೀಳಲು ತಡವಾಗಲಿಲ್ಲ. ಅವನನ್ನು ಬಂಧಿಸಲು ರಹಸ್ಯ ಆಜ್ಞೆ ಹೊರಟಿತು. ಬಂಧನದ ಸುಳಿವು ಮೊದಲೇ ಸಿಕ್ಕಿದ್ದರಿಂದ ಬ್ರೂನೋ ಮಠವನ್ನು ತೊರೆದು ರೋಮ್ ಮಾರ್ಗವಾಗಿ ಜಿನೆವಾಕ್ಕೆ ಓಡಿಹೋದನು. ಮುಂದೆ ಅವನ ಜೀವನ ಇಂತಹುದೇ ಪಲಾಯನಗಳಲ್ಲಿ ಕಳೆದುಹೋಯಿತು.

ಹೀಗಾಗಿ ಫ್ರಾನ್ಸ್, ಇಂಗ್ಲೆಂಡ್, ಜರ್ಮನಿ, ಬೊಹಿಮಿಯಾ ರಾಜ್ಯಗಳಲ್ಲಿ ಸುತ್ತಾಡುತ್ತ, ಹೊಟ್ಟೆ ಹೊರೆಯಲು ಮುದ್ರಣಾಲಯಗಳಲ್ಲಿ ಕರಡಚ್ಚು ತಿದ್ದುವ ಕೆಲಸ ಮಾಡುತ್ತ, ಲೇಖನಗಳನ್ನು ಬರೆಯುತ್ತ ಬ್ರೂನೋ ಕಾಲಕಳೆದನು. ಎಲ್ಲಿ ಹೋದರೂ ಅವನು ಚರ್ಚಿನ ಬೆಂಬಲಿಗರನ್ನೋ, ಚರ್ಚಿನವರನ್ನೋ ತನ್ನ ಸ್ವತಂತ್ರ ನಿಲುವುಗಳಿಂದಾಗಿ ಎದುರುಹಾಕಿಕೊಳ್ಳುತ್ತಿದ್ದ. ಜಿನೆವಾದಲ್ಲಿದ್ದಾಗ ಒಂದು ಬಾರಿ ಅವನಿಗೆ ಸೆರೆವಾಸದ ಶಿಕ್ಷೆಯೂ ಆಗಿತ್ತು.

ಬ್ರೂನೋ ಲಂಡನ್ನಿನಲ್ಲಿದ್ದಾಗಲೇ ''ಅನಂತ ವಿಶ್ವ ಮತ್ತು ಅದರ ಪ್ರಪಂಚಗಳು'' ಎಂಬ ಕೃತಿಯನ್ನು ಬರೆದು ಅದರಲ್ಲಿ ಕೊಪರ್ನಿಕಸ್‌ನ ಸೂರ್ಯಕೇಂದ್ರವಾದವನ್ನು ಬಲವಾಗಿ ಸಮರ್ಥಿಸಿದ್ದಲ್ಲದೆ ವಿಶ್ವದಲ್ಲಿ ಕೋಟ್ಯಂತರ ಸೂರ್ಯನಂತಹ ನಕ್ಷತ್ರಗಳಿವೆ; ಅವೆಲ್ಲಕ್ಕೂ ಭೂಮಿಯಂತಹ ಗ್ರಹಗಳಿರಬಹುದು, ಭೂಮಿಯಾಗಲಿ, ಸೂರ್ಯನಾಗಲಿ ವಿಶ್ವದ ಕೇಂದ್ರವಲ್ಲ, ವಿಶ್ವ ಅನಂತವಾದುದು, ಯಾಕೆಂದರೆ ಅದು ಅನಂತ ಸ್ವರೂಪವಾದ ದೇವನಿಂದ ಸೃಷ್ಟಿಸಲ್ಪಟ್ಟಿದೆ ಎಂಬ ವಿಭಿನ್ನ ತಾತ್ವಿಕ ನಿಲುವನ್ನು ಕೊಟ್ಟನು. ಈ ನಿಲುವು ಚರ್ಚಿನವರಿಗೆ ಕಲ್ಪನಾತೀತವಾಗಿತ್ತು. ಬ್ರೂನೋ ಅವರ ತಾಳ್ಮೆ ಪರೀಕ್ಷಿಸಿದ್ದನು. ಭೂಮಿಯ ಜನ ತಮ್ಮ ಸುತ್ತ ಸುತ್ತುತ್ತಿರಬೇಕು; ಭೂಮಿಯ ಸುತ್ತ ಗ್ರಹಗಳೆಲ್ಲಾ ಸುತ್ತಬೇಕು, ಎಂಬುದು ಅವರ ಸರಳ ಆದರೆ ಮೂರ್ಖ ತೀರ್ಮಾನವಾಗಿತ್ತು.

ಅನಂತ ದೇವರು ನಶ್ವರ ವಿಶ್ವವನ್ನು ಸೃಷ್ಟಿಸಿದ್ದಾನೆ ಎಂಬ ನಂಬಿಕೆಗೆ ಚರ್ಚ್ ಕಟಿಬದ್ಧವಾಗಿತ್ತು. ಸೃಷ್ಟಿಕರ್ತ ಸೃಷ್ಟಿಗಿಂತ ಯಾವತ್ತೂ ಉಚ್ಚಮಟ್ಟದಲ್ಲಿರುತ್ತಾನೆ. ಅವರಿಬ್ಬರೂ ಒಂದೇ ಅಂದರೆ ಅನಂತ ಆಗಲಿಕ್ಕೆ ಸಾಧ್ಯವೇ ಇಲ್ಲ. ವಿಚಾರ ಹೀಗಿರುವಾಗ ಬ್ರೂನೋನ ವಿಶ್ವರಚನೆಯ ಪರಿಕಲ್ಪನೆಯಲ್ಲಿ ಸ್ವರ್ಗ ಮತ್ತು ನರಕಗಳಿಗೆ ಜಾಗವೇ ಇರಲಿಲ್ಲ. ಇದು ಕೂಡ ಚರ್ಚಿನ ನಿಲುವಿಗೆ ವಿರುದ್ಧವಾಗಿತ್ತು. ಭೂಮಿಯಡಿ ನರಕವೂ, ನಕ್ಷತ್ರಗಳಾಚೆ ಸೃಷ್ಟಿಕರ್ತನಿರುವ ಸ್ವರ್ಗವೂ ಇರುವುವೆಂದು ಅದು ಹೇಳುತ್ತಿತ್ತು. ಜನರನ್ನು ತನಗೆ ವಿಧೇಯರನ್ನಾಗಿಸಿಕೊಳ್ಳಲು ಸ್ವರ್ಗ, ನರಕದ ಕಲ್ಪನೆ ಚರ್ಚಿಗೆ ಸಹಾಯಕವಾಗಿತ್ತು. ಬ್ರೂನೋನ ಪ್ರಕಾರ ಇವೆಲ್ಲವೂ ಅರ್ಥಹೀನ. ಬ್ರೂನೋನಿಂದಾಗಿ ಚರ್ಚಿಗೆ ಇನ್ನೂ ಒಂದು ಫಜೀತಿ ಎದುರಾಯಿತು. ಬ್ರೂನೋ ಹೇಳುವ ಹಾಗೆ ಅನೇಕ ನಕ್ಷತ್ರಗಳಿಗೆ ಗ್ರಹಗಳಿವೆ ಎಂದು ಒಪ್ಪಿದರೆ ಭೂಮಿಗೆ ಮಾತ್ರ ಸೃಷ್ಟಿಕರ್ತ ಸೀಮಿತನಾಗುವುದಿಲ್ಲ. ಅವನು ತನ್ನ ಸೃಷ್ಟಿಯಾದ ಇನ್ನೂ ಅನೇಕ 'ಭೂಮಿ'ಗಳ ಕಡೆ ಗಮನ ಹರಿಸಬೇಕಾಗುತ್ತದೆ. ಅಂದರೆ ಅದ್ವಿತೀಯ ಎಂದುಕೊಂಡಿದ್ದ ಕ್ರಿಶ್ಚಿಯನ್ ಧರ್ಮವಿರುವ ಭೂಮಿ ವಿಶ್ವದಲ್ಲಿ ತೀರಾ ಸಾಮಾನ್ಯವಾಗಿಬಿಡುತ್ತದೆ. ಇದೆಲ್ಲಾ ಚರ್ಚಿನವರಿಗೆ ಸರಿಕಾಣಲಿಲ್ಲ. ತಮ್ಮ ಪರಂಪರಾನುಗತ ನಂಬಿಕೆಗಳ ಬುಡವನ್ನೇ ಬ್ರೂನೋ ಅಲುಗಾಡಿಸುತ್ತಿದ್ದಾನೆಂದು ಅವರಿಗೆ ಆತಂಕವುಂಟಾಯಿತು.

ನಿರಂತರ ಅಲೆದಾಟಗಳ ನಡುವೆಯೇ ಬ್ರೂನೋ

**ಸತ್ಯ**

ಮಹಾಭಾರತ ಬರೆದ
ಮಹರ್ಷಿ ವ್ಯಾಸ
ಅದನ್ನೇ ಮತ್ತೆ ಮತ್ತೆ ಬರೆಯುವುದು
ಸಂತರದವರಿಗಾಯ್ತು ಹವ್ಯಾಸ





[illegible]

ಅನೇಕ ಪುಸ್ತಕ, ಪ್ರಬಂಧಗಳನ್ನು ಬರೆದ. ಅವುಗಳಲ್ಲಿ ಸೌರವ್ಯೂಹ ಮತ್ತು ವಿಶ್ವದ ಬಗ್ಗೆ ಮಾತ್ರವಲ್ಲದೆ ಚರ್ಚಿನ ಇನ್ನೂ ಅನೇಕ ನಿಲುವುಗಳ ಒಳಹೊರಗನ್ನು ಚರ್ಚಿಸಿದ. ಮಾನವಾತ್ಮ ಮತ್ತು ನಿಸರ್ಗದ ನಡುವೆ ಕೇಂದ್ರಿತ ಚೇತನವಾದ ದೇವರನ್ನು ನಿಸರ್ಗ ಕೇಂದ್ರಿತ ಚೇತನವಾಗಿ ಗ್ರಹಿಸಬೇಕೆಂದು ಕರೆಕೊಟ್ಟ. ಹೀಗೆ ಖಗೋಳ ವಿಜ್ಞಾನ ಮತ್ತು ತತ್ವಶಾಸ್ತ್ರಗಳನ್ನು ಬೆರೆಸಿ ಅವನು ಒಡ್ಡಿದ ವಿಲಕ್ಷಣ ಸವಾಲುಗಳಿಗೆ ಚರ್ಚಿನವರ ಬಳಿ ಉತ್ತರವೇ ಇರಲಿಲ್ಲ. ಅವರಿಗೆ ಅವನೊಬ್ಬ ಬಗೆಹರಿಯದ ಅರೆತಲೆ ಶೂಲೆಯಾದ.

ಬ್ರೂನೋ ಕವಿಯೂ ಆಗಿದ್ದ. ಅವನ ಒಂದು ಪ್ರಮುಖ ಕವಿತೆ 'ದ ಮೋಣಡೆ'. ಅದರಲ್ಲಿ ಅಲೌಕಿಕತೆಯನ್ನು ನಿರಾಕರಿಸುವ ಅವನ ದೃಷ್ಟಿಕೋನವನ್ನು ಗ್ರಹಿಸಬಹುದು. ತನ್ನ ಕವಿತೆಗಳನ್ನು ಪ್ರಕಟಿಸುವ ಸಲುವಾಗಿ ಅವನು ಜರ್ಮನಿಯ ಫ್ರಾಂಕ್‌ಫರ್ಟ್‌ಗೆ ಆಗಮಿಸಿದ. ಇಲ್ಲಿದ್ದಾಗಲೇ ಆಗರ್ಭ ಶ್ರೀಮಂತ ಗಿಯೋವಿನಿ ಮೊಚನಿಗೊ ವೆನಿಸಿಗೆ ಬಂದು ತನಗೆ ತತ್ವಶಾಸ್ತ್ರ, ಭೌತಶಾಸ್ತ್ರ ಮುಂತಾದ ವಿಷಯಗಳನ್ನು ಕಲಿಸಬೇಕೆಂದು ಕೋರಿಕೊಂಡ. ಬ್ರೂನೋಗೂ ತನ್ನವರಾದ ಇಟಲಿಯ ಜನರಿಂದ ಬಹಳಕಾಲ ದೂರವಿದ್ದದ್ದು ಬೇಸರ ತಂದಿತ್ತು. ಅವನು ಕೂಡಲೇ ಮೊಚನಿಗೊವಿನ ಕೋರಿಕೆ ಪರಿಗಣಿಸಿ ವೆನಿಸಿಗೆ ಆಗಮಿಸಿದ. ಆದರೆ ಬ್ರೂನೋ ಹೇಳುವ ವಿಚಾರಗಳು ಮೊಚನಿಗೊವಿಗೆ ರುಚಿಸಲಿಲ್ಲ. ತನಗೆ ಉಪಯೋಗಕ್ಕೆ ಬರುವಂಥ ಯಾವುದಾದರೂ ವಾಮಾಚಾರದ ವಿದ್ಯೆಗಳನ್ನು ಕಲಿಸಿಕೊಡಬೇಕೆಂದು ಅವನು ಬ್ರೂನೋಗೆ ದುಂಬಾಲುಬಿದ್ದ. ಅಂತಹುದೇನನ್ನೂ ತಿಳಿದಿರದ, ಅಂತಹುದರಲ್ಲಿ ವಿಶ್ವಾಸವಿರದಿದ್ದ ಬ್ರೂನೋ ಈ ರೀತಿಯ ಬೋಧನೆ ತನ್ನಿಂದಾಗದು ಎಂದು ಕೈ ಚೆಲ್ಲಿದ. ಅವನು ನಿರಾಕರಿಸಿದ್ದು ತನಗಾದ ಅವಮಾನವೆಂದು ಬಗೆದ ಮೊಚನಿಗೊ ಸೇಡಿನ ಕ್ರಮವಾಗಿ ಧರ್ಮದ್ರೋಹಿ ಬ್ರೂನೋ ತನ್ನ ವಶದಲ್ಲಿರುವುದಾಗಿಯೂ ಅವನನ್ನು ಬಂಧಿಸಲು ಕ್ರಮ ಕೈಗೊಳ್ಳಬೇಕೆಂದೂ ರಹಸ್ಯವಾಗಿ ಚರ್ಚಿನ ವಿಚಾರಣಾ ಮಂಡಳಿಗೆ ಸಂದೇಶ ಕಳುಹಿಸಿದ. ಬ್ರೂನೋನನ್ನು ಹಿಡಿದು ಶಿಕ್ಷಿಸಬೇಕೆಂದು ವರ್ಷಗಟ್ಟಲೆ ಚಾತಕಪಕ್ಷಿಯಂತೆ ಕಾಯುತ್ತಿದ್ದ ವಿಚಾರಣಾ ಮಂಡಳಿ ತಕ್ಷಣ ಚುರುಕಾಗಿ ಬ್ರೂನೋನ ಮೇಲೆ ನಾಸ್ತಿಕವಾದದ ಪ್ರಚಾರ, ಕೆಟ್ಟ ನಡತೆ, ಧರ್ಮಭ್ರಷ್ಟತೆ, ದೇವನಿಂದೆಯಂತಹ ಆಪಾದನೆಗಳನ್ನು ಹೊರಿಸಿ ಅವನನ್ನು ಸೆರೆಹಿಡಿಯಿತು. ಎಂಟು ವರ್ಷ ನಿರಂತರ ಚಿತ್ರಹಿಂಸೆಯೊಂದಿಗೆ ಅವನ ವಿಚಾರಣೆ ನಡೆಯಿತು. ತಾನು ಹೇಳಿದ್ದೆಲ್ಲಾ ತಪ್ಪು ಎಂದು ಒಪ್ಪಿಕೊಳ್ಳಲು ಅವನನ್ನು ಮಂಡಳಿ ಒತ್ತಾಯಿಸಿತು. ಆದರೆ ಬ್ರೂನೋ ಮಾತ್ರ ತನ್ನ ಹೇಳಿಕೆಗಳೆಲ್ಲಾ ಎಂದಿಗೂ ಸತ್ಯ ಎಂದು ವಾದಿಸಿದ. ಶಿಕ್ಷೆ ಅನುಭವಿಸಬೇಕಾದ ತನಗಿಂತಲೂ ಶಿಕ್ಷೆ ನೀಡಲು ತುದಿಗಾಲಲ್ಲಿ ನಿಂತಿರುವ ವಿಚಾರಣಾ ಮಂಡಳಿಯೇ ಹೆಚ್ಚು ಹೆದರಿದಂತಿದೆ ಎಂದೂ ಅವನು ವ್ಯಂಗ್ಯವಾಡಿದ. ಹೀಗಾಗಿ ಬ್ರೂನೋನನ್ನು ತಿದ್ದುವ ಮಾರ್ಗವೇ ಇಲ್ಲವೆಂದು ನಿರ್ಧರಿಸಿ ಅವನ ದೇಹದಿಂದ ಹನಿ ರಕ್ತವನ್ನು ಚೆಲ್ಲದೆ ಅವನಿಗೆ ಮರಣದಂಡನೆ ವಿಧಿಸಬೇಕೆಂದು ವಿಚಾರಣಾ ಮಂಡಳಿ ತೀರ್ಪು ನೀಡಿ ವಿಚಾರಣೆಯ ದೀರ್ಘ ನಾಟಕಕ್ಕೆ [illegible] ಹನಿರಕ್ತ ಚೆಲ್ಲದ ಮರಣದಂಡನೆಯೆಂದರೆ ಜೀವಂತ ಸುಡುವುದೇ ಆಗಿತ್ತು. ಅಂತೆಯೆ ಕ್ರಿ. ಶ. ೧೬೦೦ರ ಫೆಬ್ರವರಿ ೧೭ರಂದು ಬ್ರೂನೋನನ್ನು ಜೀವಂತ ಸುಡಲಾಯಿತು.

ಬ್ರೂನೋ ಒಬ್ಬ ವಿಚಿತ್ರ, ವಿಶಿಷ್ಟ ವಿಜ್ಞಾನಿ. ಅವನು ಎಂದೂ ಪ್ರಯೋಗಗಳನ್ನು ಮಾಡಲಿಲ್ಲ. ಅವನ ಕಾಲದಲ್ಲಿನ್ನೂ ಆಧುನಿಕ ವಿಜ್ಞಾನ ಕುಡಿಯೊಡೆಯುತ್ತಿತ್ತು. ಎಲ್ಲಾ ಸಂಶೋಧನೆಗಳೂ ಚರ್ಚಿನ ಮರ್ಜಿಗೆ ಒಳಪಡಬೇಕಿದ್ದುದರಿಂದ ವಿಜ್ಞಾನಿಗಳು ಹೆಚ್ಚಾಗಿ ಊಹೆಗಳಿಗೆ ಮೊರೆಹೋಗುತ್ತಿದ್ದರು. ಬ್ರೂನೋ ಕೂಡಾ ಇದಕ್ಕೆ ಹೊರತಾಗಿರಲಿಲ್ಲ. ಬ್ರೂನೋನ ತೀರ್ಮಾನಗಳೆಲ್ಲಾ ಊಹೆಯಾಧಾರಿತವಾಗಿದ್ದರೂ ಅವನಿಗೆ ಇವತ್ತು ತಾನು ಹೇಳಿದ್ದು ನಾಳೆ ನಿಜವಾಗಲೇಬೇಕು ಎಂಬ ಅಚಲ ಆತ್ಮವಿಶ್ವಾಸವಿತ್ತು. ಅವನಂತಹ ವಿಕ್ಷಿಪ್ತ, ನಿರ್ಭೀತ ಚಿಂತಕರು ವಿಜ್ಞಾನದ ಇತಿಹಾಸದಲ್ಲಿ ಅಪರೂಪವೇ ಸರಿ.

ಕೆ. ಎಸ್. ರವಿಕುಮಾರ್
ಭಾರತೀಯ ಜೀವವಿಮಾ ನಿಗಮ, ಹಾಸನ-೫೭೩ ೨೦೧

# ಪರರಂತೆ ತನ್ನ ಬಗೆದೊಡೆ




ಎಚ್. ಎಮ್. ಟಿ.
ಬಹುಮಾನಿತ
ಲೇಖನ

"ರೀ, ರೀ, ನೀವೂ ಆ ಪ್ರೊಫೆಸರ್ ಕಟ್ಟೋಮನಿ ತರ ಕಟ್ಟು ಕಟ್ಟು ಸಿಗರೇಟು ಸೇದ್ರೀ".

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಾಂಬ್ ಬಿದ್ದಿದ್ರೂ, ಇಷ್ಟು ಶಾಕ್ ಆಗ್ತಿರಲಿಲ್ಲ, ಎವರೆಸ್ಟ್ ಶಿಖರ ಗಾಳಿಗೆ ಹಾರಿ ಹೋಗಿದ್ರೂ, ಇಷ್ಟು ಆಶ್ಚರ್ಯ ಆಗ್ತಿರಲಿಲ್ಲ. ಆದರೆ ಹಠಾತ್ತಾಗಿ ನನ್ನ ಅರ್ಧಾಂಗಿ ಸ್ವತಃ ತಾನೇ ನನಗೆ ದುಶ್ಚಟಗಳ ದಾಸನಾಗಲು ಒತ್ತಾಯಿಸುವುದ ಕಂಡು ಸಖೇದಾಶ್ಚರ್ಯವಾಯ್ತು.

ಸಡನ್ನಾಗಿ ಆಕೆಯ ತಲೆ ಕೆಟ್ಟು ಹೋಯಿತೇ ? (ತಲೆ ಇದ್ದರೆ ತಾನೇ ಕೆಡಲು ? ಅದು ಬೇರೆ ಪ್ರಶ್ನೆ!) ಅಥವಾ ಬಾಯಿಗೆ ಸರಿಯಾಗಿ ಮಾತನಾಡುವ ಪರಿ ಮರೆತು ಹೋಯಿತೆ ? ಏನಾಗಿರಬಹುದು ಈಕೆಗೆ ? ಇತ್ಯಾದಿ ಸಾವಿರಾರು ಪ್ರಶ್ನೆಗಳು ಕ್ಷಣಮಾತ್ರದಲ್ಲಿ ಮನಃ ಪಟಲದಲ್ಲಿ ಮೂಡುತ್ತಿದ್ದಂತೆಯೇ, ನನ್ನ ಉತ್ತರಕ್ಕೂ ಕಾಯದೆ ನನ್ನ ಮನದನ್ನೆ ತನ್ನ ಮನದಾಸೆಯ ಬಿನ್ನಹವನ್ನು ಮುಂದುವರೆಸಿದಳು.

''ನೋಡ್ರಿ, ಆ ಪ್ರೊಫೆಸರ್ ಹೆಂಡತಿ ಆ ಸಿಗರೇಟಿನ ಚಿನಾರಿಗಳನ್ನೆಲ್ಲಾ ಸೇರಿಸಿ ತರ ತರಾ ಕಲಾಕೃತಿಗಳನ್ನ ಮನೆ ತುಂಬಾ ಮಾಡಿಟ್ಟಿದ್ದಾರೆ. ನಾನೂ ಅವರ ಹಾಗೆ ಮಾಡಿ, ನಿಮ್ಮ ಕೈಲಿ ಜಾಣೆ ಎನ್ನಿಸಿಕೊಳ್ಳಬೇಡ್ವಾ ?''

''ಬೇಡ'' ಎಂದರೆ 'ಹಾಗಾದ್ರೆ ಈ ದಿನ ರಾತ್ರಿ ನಿಮಗೆ ಊಟಾನೂ ಬೇಡ' ಅಂತಾಳೆ ಗ್ಯಾರಂಟಿ. ಅವರು ಬೇಕಾದರೆ ಸಿಗರೇಟು ಕಂಪೆನಿಯವರಿಗೆ ಬಿಟ್ಟಿ ಜಾಹೀರಾತು ನೀಡಲಿ ; ನಮಗೇನು ? ಆದರೆ ಇವಳು ಕೇಳ್ಬೇಕಲ್ಲಾ! ಇವಳದೊಂದು ವಿಚಿತ್ರ ಸ್ವಭಾವ. 'ತಾನೂ ಎಲ್ಲರಂತೆ ಆಗಬೇಕು' ಎಂಬುದೇ ಅದು. ಅದರಲ್ಲೇನು ವಿಚಿತ್ರ ಅಂತೀರಾ ? ಈಗಲೇ ಗೊತ್ತಾಗಲಿಲ್ವಾ ನಿಮಗೆ ? ಸಿಗರೇಟು ಪ್ಯಾಕಿನ ಚಿನಾರಿ ಪೇಪರ್ ಬೇಕಾದ್ರೆ, ನಾನು ರಾಶಿ ರಾಶಿ ಸಿಗರೇಟು ಸೇದಿ ನನ್ನ ಆರೋಗ್ಯವನ್ನು ಹಾಳುಗೆಡವಿಕೊಂಡು, ಇವಳನ್ನು ಆ ಪ್ರೊಫೆಸರ್ ಹೆಂಡತಿಯ ಹಾಗೆ ತಯಾರು ಮಾಡಬೇಕು. ಕರ್ಮ ! ಕರ್ಮ !

ನಿಮಗೊಂದು ವಿಷಯ ಹೇಳ್ತೀನಿ ಕೇಳಿ. ಒಂದು ತಿಂಗಳ ಮೊದಲು ಒಂದು ದಿನ ಹಾರಿ ಬಂದವಳೇ, ತನಗೆ ಒಂದು ಹೀರೋ ಹೊಂಡ ಬೇಕು ಅಂದಳು. ಯಾಕೆಂದು ಕೇಳಿದೆ.

''ನೋಡ್ರಿ, ಪಕ್ಕದ ರೋಡಿನಲ್ಲಿರೋ ಮುದುಕಿ ಹೀರೋ ಹೊಂಡಾ ಬಿಡುತ್ತೆ, ನಾನೂ ಅವಳ ಹಾಗೆ 'ಸುಯ್' ಅಂತ ಬಿಡಬೇಕು ರೀ'' ಎಂದಳು. ಏನೋ ಒಂದು ಪೆಪರ್‌ಮಿಂಟ್ ಕೇಳಿದ ಹಾಗೆ. ಸದ್ಯ, ಏರೋಪ್ಲೇನ್ ಕೇಳಲಿಲ್ಲವಲ್ಲಾಂತ ಸಮಾಧಾನ ಆಯ್ತು. ನಾನೇ ಇನ್ನೂ ಸೈಕಲ್‌ನಿಂದ ಪ್ರಮೋಶನ್ ತೆಗೆದುಕೊಂಡಿಲ್ಲ; ಇವಳಿಗೆಲ್ಲಿಂದ ತರಲಿ 'ಹೀರೋ ಹೊಂಡಾ', ಅಲ್ಲಲ್ಲ ಜೀರೋ ಹೊಂಡಾ ? ಅದಕ್ಕೇ ... ಹೊಂಡಗಳಿಂದಲೇ [illegible] ಹೋಗದೆ, 'ಜುಂಯ್' ಅಂತ ಜಾರಿ, 'ದಬ್' ಅಂತ ಬಿದ್ದೋಗ್ತಿ ಎಂದು ಹೆದರಿಸಿದೆ. 'ಊಹುಂ', ನನ್ನ ಉಪಾಯ ಫಲಿಸಲಿಲ್ಲ. ''ಮುದುಕಿ ಹೋಗುತ್ತೆ, ನಾನೂ ಹೋಗ್ತೀನಿ'' ಅಂತ ಒಂದೇ ಮಂತ್ರ ಅವಳದು.

ಕಡೆಗೆ ''ನೀನೂ ಮುದುಕಿ ಆಗು. ಆಗ ಹೋಂಡಾ ಕೊಡಿಸ್ತೀನಿ. ಮತ್ತೆ ಸುಯ್ ಅಂತಾದರೂ ಬಿಡು, ಗುಂಯ್ ಅಂತಾದರೂ ಬಿಡು'' ಅಂತ ನಾನು ಪ್ರಾಮಿಸ್ ಮಾಡಿದ ಮೇಲೇ ಆಕೆ ಸುಮ್ಮನಾಗಿದ್ದು.

ಮೊನ್ನೆ ಒಂದು ದಿನ ಏನಾಯ್ತುಂತೀರಾ ! ಯಾರೋ ಇವಳ ಗೆಳತಿಯೊಬ್ಬಳು, ಮನೆ ಮನೆಗೆ ಹೋಗಿ, ಅದ್ಯಾವ್ಯಾವುದೋ ಏಜೆನ್ಸೀದು ಸಾಮಾನು ಮಾರಿ, ಸಾವಿರ ಸಾವಿರ ಸಂಪಾದಿಸಿದ್ದಾಳೆಂದು ವರದಿ ಒಪ್ಪಿಸಿದಳು. ಆ ಸಾಮಾನುಗಳನ್ನ ಮಾರಲಿಕ್ಕೆ ಐದೈದು ಜನರನ್ನ ಏಜೆಂಟ್ ಮಾಡಿದರೆ, ಅವರು ಮಾರಿದ್ದರಲ್ಲೂ ಅದೆಷ್ಟೋ ರಾಶಿ (ಬಹುಶಃ ಒಂದು ಮನೆ ಕಟ್ಟಬಹುದೇನೋ, ಇವಳು ವರ್ಣಿಸುವ ರೀತಿ ನೋಡಿದರೆ !) ಕಮಿಶನ್ ಇವರ ಕಿಸೆಗೂ ಸೇರಿ, ಇವರು ಬಾಳಿನ ಏಣಿ ಏರಿ 'ಲಕ್ ಪತಿ'ಗಳಾಗಲು ಕೆಲವೇ ತಿಂಗಳುಗಳು ಸಾಕಂತೆ, ಎಂದೆಲ್ಲಾ ಹೊಗಳಿ ಇವಳೂ 'ಏಣಿ ಅಂಟು', ಅಲ್ಲಲ್ಲ 'ಏಜೆಂಟು' ಆಗೇಬಿಟ್ಟಳು. ಮೊದಲೇ ಹೇಳಿದೆನಲ್ಲಾ, ಬೇಡಾಂದರೆ ಕೇಳುವ ಜಾತಿ ಇವಳಲ್ಲ. ಆದ್ದರಿಂದ ಹೇಳಿ ಕೆಟ್ಟವನಾಗದೆ, ಅವಳಾಡುವ ಆಟದಲ್ಲಿ ಕೆಟ್ಟೇ ಹೋದೆ.

ಅದು ಯಾವುದೋ ಶ್ಯಾಂಪೂ, ಸೋಂಪು ಅಂತ ಒಂದು ಮಣ ಹೊತ್ತುಕೊಂಡು , ರಣರಣ ಬಿಸಿಲಲ್ಲಿ, ಯಾರು ಝಣ ಝಣ ಹಣ ಸುರಿದು ತನ್ನನ್ನು ಹಣವಂತೆ ಪಟ್ಟಕ್ಕೆ ಏರಿಸುತ್ತಾರೇಂತ ಬಾಯಿ ಬಾಯಿ ಬಿಟ್ಟುಕೊಂಡು, ಸ್ನೇಹಿತರು, ಪರಿಚಿತರು, ಅಲ್ಪ ಪರಿಚಿತರು, ಸಂ-ಬಂಧಿಗಳು ಎಲ್ಲರ ಮನೆಗೂ ಧಾಳಿ ಇಟ್ಟಳು. ಧಾರೆ ಧಾರೆಯಾಗಿ ಬೆವರು ಇಳಿದರೂ, ಇವಳ ಬಿಳಿ ಬಣ್ಣ ಕರಗಿ ಕಪ್ಪಿನ ಬಣ್ಣ ಮೆರಗು ಬಂದರೂ, ಚಪ್ಪಲಿ ಸವೆದು ಕಾಲುಗಳು ನೆಲಕಚ್ಚಿದರೂ ಪರ್ಸ್ ತುಂಬಲಿಲ್ಲ; ಚೀಲ ಖಾಲಿಯಾಗಲಿಲ್ಲ. ಅಸಲು ಹಣವೇ ಹಿಂದೆ ಬರಲಿಲ್ಲ. ಹಾಗಾಗಿ ಲಾಭ ಲೋಭಾನದ ಹೊಗೆಯಾಗಿ ಎತ್ತಲೋ ಹೋಯಿತು. ಮಾರಲು ತರಿಸಿದ್ದ ಸಾಮಾನನ್ನು ಬೇಡದಿದ್ದರೂ ನಾವೇ ಉಪಯೋಗಿಸಿ ಧನ್ಯರಾದೆವು. ಅಂತೂ ಇವಳೂ ಕೆಲದಿನಗಳ ಮಟ್ಟಿಗೆ ಪರಸ್ತ್ರೀಯಂತೆ ಏಜೆಂಟ್ ಸ್ತ್ರೀಯಾಗಿ, ಸೆಂಟೂ ಮಾರಲಾಗದೆ ಮನೆಗೇ ಅಂಟಿಹೋದಳು.

ಇಲ್ಲಿಗೆ ಮುಗಿಯಿತು ಅಂತ ಖುಷಿಪಟ್ಟುಕೊಂಡಿರಾ? ಇಲ್ಲ, ಇನ್ನೂ ಇದೆ ಧಾರಾವಾಹಿಯಂತೆ, ಕೇಳಿ (ಓದಿ!).

ಅವಳ್ಯಾರೋ ಮೂರು ಮಹಡಿ ಮಹಾರಾಣಿ, ಅವಳ ಮನೆಯ ಎದುರು ಸುಂದರ ಉದ್ಯಾನ ಮಾಡಿದ್ದಾಳಂತೆ. ಇನ್ನು ನನ್ನ ಮನದ ರಾಣಿ ತಾನೂ ಉದ್ಯಾನ ರಾಣಿ ಆಗದಿದ್ದರೆ ಆಗುತ್ತದೆಯೇ ?

'ಮಹಾರಾಣಿ'ಗಾದರೆ ಮನೆ ಮುಂದೆ ಜಾಗ ಉಂಟು. ನಮ್ಮ ಮನೆಯಿಂದ ಕಾಲು ಹೊರಗೆ ಇಟ್ಟರೆ ಬೀದಿಯಲ್ಲೇ ಬಿದ್ದಿರುತ್ತೇವೆ ಬೀದಿ ನಾಯಿಗಳಂತೆ, ನಮಗೇಕೆ ಈ ಗಿಡಗಳ ಕಾಟ ? ಆದರೆ ಆಕೆಯದು ಒಂದೇ ಹಟ - 'ಪರಿಸರವನ್ನು ಪ್ರೇಮಿಸಬೇಕು. ಗಿಡ ಬೆಳೆಸಿ ಗಾಳಿ ಕುಡೀಬೇಕು,' ಇತ್ಯಾದಿ ಇತ್ಯಾದಿ.

ಇಲ್ಲದ ಜಾಗದಲ್ಲಿ ಎಲ್ಲಿಂದ ಗಿಡ ಬರಿಸುತ್ತಾಳೆ ಎಂಬ ಕುತೂಹಲ ನನಗೆ. ಏನು ಜಾದು ಮಾಡಬಹುದು ನನ್ನ ಜಾಣೆ ಎಂಬ ಆಲೋಚನೆಯಲ್ಲಿ ರಾತ್ರಿ ಇಡೀ ನಾನು ನಿದ್ರಿಸಲಿಲ್ಲ, ಅವಳು ಮಾತ್ರ ಸುಖವಾಗಿ ಗೊರಕೆ ಗಾಯನದೊಂದಿಗೆ ನಿದ್ರಿಸಿದಳು.

ದುಡ್ಡು ಕೊಟ್ಟು ಗಿಡಗಳನ್ನೂ ಕುಂಡಗಳನ್ನೂ ತರಬಾರದೆಂದು ಕಟ್ಟಪ್ಪಣೆ ಮಾಡಿ ಬೆಳಿಗ್ಗೆ ಮನೆಯಿಂದ ಹೊರಬಿದ್ದೆ. ಸಂಜೆ ಹಿಂದಿರುಗಿದಾಗ ನಮ್ಮ ಮನೆಯ ಕಿಟಕಿ, ಸಣ್ಣ ಬಾಟಲ್ ಒಂದನ್ನು ಕಟ್ಟಿಕೊಂಡು, ಟಿಬೆಟ್ಟನ ಹೆಂಗಸು ಮಗುವನ್ನು ಬೆನ್ನಿಗೆ ಕಟ್ಟಿಕೊಂಡಂತೆ ಶೋಭಿಸುತ್ತಿತ್ತು. ಅದರಲ್ಲಿ ನೀರು ಹಾಗೂ ಒಂದು ಪುಟ್ಟ ಗಿಡ. ಅದೇ ನಮಗೆ ಹಣ ನೀಡುವ 'ಮನಿಪ್ಲ್ಯಾಂಟ್'. ಕೆಲವೇ ದಿನಗಳಲ್ಲಿ ಅದು ಮನೆ ತುಂಬಾ ವ್ಯಾಪಿಸಿ, ಎಲ್ಲೆಲ್ಲೂ ತಾನೇ ತಾನಾಗಿ ರಾರಾಜಿಸಿತು. ನಮ್ಮ ಮನೆ 'ಹಣದ ಸದನ'ವಾಗದಿದ್ದರೂ, 'ಹಸಿರು ಉದ್ಯಾನ' ಆಯಿತು. ಆಕೆಯ 'ಪರರಂತೆ ಆಗುವ' ಇನ್ನೊಂದಾಸೆ ಫಲಿಸಿತು.

ಯುಗಾದಿ ಹಬ್ಬ ಹತ್ತಿರವಾಗುತ್ತಿದ್ದಂತೆಯೇ, ಒಂದು ದಿನ ''ರೀ ಬಂಗಡೆ ಮೀನು, ಭೂತಾಯಿ ಮೀನು, ಮೊಟ್ಟೆ ಎಲ್ಲಾ ಬೇಕೂರೀ'' ಎಂದಳು. ಇವಳಿಗೆ ೧೦೦% ತಲೆ ಕೆಟ್ಟಿದೆ ಎಂದು ನನಗೆ ಖಾತರಿ ಆಯ್ತು. ಕಟ್ಟಾ ಸಸ್ಯಾಹಾರಿಗಳಾದ ನಮಗೆ ಏಕೆ ಈ ಶಾಕ ಪ್ರಾಣಿಗಳು? ಮೀನಾಕ್ಷಿಯಾದ ಈಕೆ 'ಮೀನು ಭಕ್ಷಿ' ಆದದ್ದು ಯಾವಾಗ?

''ಎಲೈ ಮೀನಾಕ್ಷಿಯೇ, ನಿನ್ನ ಕಣ್ಣಲ್ಲೇ ಮೀನಿರುವಾಗ, ನಿನಗೇಕೆ ಬಂಗಡೆ ಮೀನು, ಭೂಮಿಯ ಮೀನು?'' ಎಂದು ಮಿಡುಕಿದೆ.

''ನೋಡ್ರೀ, ಈ ಪುಸ್ತಕದಲ್ಲಿ ಮೀನಿನ ಅಡುಗೆ ಬಂದಿದೆ. ಪಕ್ಕದ ಮನೆಯ ಮಾರ್ಗರೆಟ್ ಮಾಡಿದ್ದಂತೆ. ಫಸ್ಟ್ ಕ್ಲಾಸ್ ಆಗಿತ್ತಂತೆ. ನಾನೂ ಮಾಡ್ತೀನಿ. ಹಬ್ಬಕ್ಕೆ ನಮ್ಮ ಸಿಹಿ ತಿಂಡಿಯ ಬದಲು ಇದನ್ನೇ ಮಾರ್ಗರೆಟ್‌ಗೆ ಕೊಟ್ಟು, ಅವಳ ಹತ್ತಿರ 'ಹ್ಯಾಪಿ ಯುಗಾದಿ' ಹೇಳಿಸಿಕೊಂಡು ಬರ್ತೀನಿ. ಆಗ ಅವಳ ಹಾಗೆ ನಾನೂ ಅಡುಗೆಯಲ್ಲಿ ಜಾಣೇಂತ ಅವಳಿಗೆ ಗೊತ್ತಾಗುತ್ತೆ ಅಲ್ವಾ?'' ಎಂದು ಮುಗ್ಧ

ಸತ್ಯವತಿ

ಮಗುವಿನಂತೆ ಕೇಳಿದಾಗ ನಗಬೇಕೋ ಅಳಬೇಕೋ ಗೊತ್ತಾಗದೆ ಮಗನ ಮುಖ ನೋಡಿದೆ. ಅವ ಹಲ್ಲು ಕಿರಿದ, ನಾನೂ ಬಾಯಿ ತೆರೆದು ಕೆಟ್ಟದಾಗಿ ನಗಾಡಿದೆ. ತನ್ನ ಅಪೀಲು ರಿಜೆಕ್ಟ್ ಆಗಿದ್ದು ಕಂಡು ಮೀನಾಕ್ಷಿ, ಅನಲಾಕ್ಷಿಯಾಗಿ ತನ್ನ ರಾಜಧಾನಿಯಾದ ಅಡುಗೆ ಮನೆ ಹೊಕ್ಕು ಮಾಯವಾದಳು.

ಅದೊಂದು ದಿನ ಬಹಳ ಜಾಲಿಯಾಗಿ ನನ್ನ ಮೀನಾಕ್ಷಿಯೊಂದಿಗೆ 'ವಸ್ತು ಪ್ರದರ್ಶನ'ಕ್ಕೆ ಹೋಗಿದ್ದೆ. ಸುಂದರ ಸ್ವಪ್ನಗಳನ್ನು ಹೆಣೆಯುತ್ತಾ, ಇಂದ್ರನಗರಿಯಲ್ಲಿ ಸಾಗುತ್ತಿರುವವನಂತೆ ತೇಲಿ ಹೋಗುತ್ತಿದ್ದ ನನ್ನ ಶರ್ಟನ್ನು ಜಗ್ಗಿ, ನನ್ನನ್ನು ಇಹಲೋಕಕ್ಕೆ ಇಳಿಸಿ, ''ಅಲ್ಲಿ ನೋಡ್ರಿ ಎಷ್ಟು ಚೆನ್ನಾಗಿದೆ!'' ಎಂದಳು ಸಂಭ್ರಮದಿಂದ.

ಅತ್ತ ನೋಡಿದಾಗ, ಅಲ್ಲಿ ಕೇಶ ಸುಂದರಿಯರ ಜಾತ್ರೆಯೇ ಕಂಡಿತು. ಯಾರೋ ಮಾರಾಟವಾಗದ ಕೇಶತೈಲ ತಯಾರಕ, ಇದ್ದ-ಬದ್ದ ಉದ್ದಜಡೆಯರನ್ನೆಲ್ಲಾ ಆರಿಸಿ ತಂದು ಅಲ್ಲಿಯ ಸ್ಟೇಜ್ ಮೇಲೆ ಪ್ರದರ್ಶಿಸುತ್ತಿದ್ದ. ''ನಮ್ಮ ಕಂಪೆನಿಯ ಕೇಶವರ್ಧಕ ತೈಲವನ್ನು ಉಪಯೋಗಿಸಿ, ಇವರಂತೆಯೇ ನಿಮ್ಮ ಕೇಶ ಸೌಂದರ್ಯವನ್ನು ವರ್ಧಿಸಿಕೊಳ್ಳಿರಿ'' ಎಂದು ಗಂಟಲು ಹರಿದುಕೊಳ್ಳುತ್ತಿದ್ದ.

ಯಾವಾಗಲೋ ಮಾಯವಾದ ಮೀನಾಕ್ಷಿ, ''ನನ್ನಾಕೆ ಕಾಣೆಯಾಗಿದ್ದಾಳೆ, ಹುಡುಕಿ ಕೊಟ್ಟವರಿಗೆ ಈ ಕೇಶತೈಲವನ್ನು ಫ್ರೀಯಾಗಿ ಕೊಡುತ್ತೇನೆ'', ಎಂದು ನಾನು ಅನೌನ್ಸ್ ಮಾಡುವ ಮೊದಲೇ ಹಾಜರಾದಳು. ಅವಳ ಕೋಮಲ ಕೈಗಳಲ್ಲಿ ಕೋಲುದ್ದ ಬಾಟಲ್ ! ಅದರ ತುಂಬಾ ಕೇಶವರ್ಧಕ ತೈಲ !

ಇಂಥದ್ದೆಲ್ಲಾ ಪರೀಕ್ಷಿಸದೆ ತೆಗೆದುಕೊಳ್ಳಬಾರದು, ಉಪಯೋಗಿಸಬಾರದು, ಮುಂತಾದ ನನ್ನ ವ್ಯರ್ಥಾಲಾಪಗಳಿಗೆ ಕಿವಿಗೊಡದೆ, ದಿನಕ್ಕೆ ಒಂದು ಹೊತ್ತು ಹಾಕಲು ಅದರ ಮೇಲೆ ಸೂಚಿಸಿದ್ದರೂ, ದಿನಕ್ಕೆ ಮೂರು ಹೊತ್ತೂ ತಲೆಗೆ ತಿಕ್ಕೀ ತಿಕ್ಕೀ, ಅದರ ಕಮಟು ವಾಸನೆಯಿಂದ ನಾವ್ಯಾರೂ ಮನೆಯೊಳಗೆ ಬಾರದಂತೆ ಮಾಡಿದಳು. ಆ ತೈಲದ ಮಹತ್ವದಿಂದ ಮೊದಲೇ ಅಲ್ಪಕೇಶಿಯಾಗಿದ್ದ ಮೀನ ಈಗ ಕೇಶರಹಿತಳಾಗಿ, ಥೇಟ್ ದೂರದರ್ಶನದ ಪಿ-ಚಾನೆಲ್‌ನ ಬೋಡುಮಂಡೆಯ ಹಾಡುಗಾರ್ತಿಯಂತೆ ಶೋಭಿಸಿದಳು. ತನ್ನ ಹೊಸರೂಪದಿಂದ ಕಂಗಾಲಾದ ಆಕೆಗೆ, 'ಅವರಂತಲ್ಲದಿದ್ದರೂ, ಇವಳಂತಾದರೂ ಆಗಿ' ಪರರಂತೆ ಆದೆಯಲ್ಲಾ ಎಂದು ಸಮಾಧಾನಪಡಿಸಬೇಕಾಯ್ತು. 'ಕೇಶರಹಿತ ಶಿರ'ದಿಂದಾಗಲಿ, ವಿವಿಧ ಕೇಶಾಲಂಕಾರದ ವಿಗ್‌ನಿಂದಾಗಲೀ ಮೀನ ಮೆರೆಯಬಹುದೆಂದು ವರ್ಣಿಸಿದ ಮೇಲೇ ಅವಳಿಗೆ ತೃಪ್ತಿಯಾದದ್ದು !

ಇಷ್ಟೆಲ್ಲಾ ಆದ ನಂತರವೂ ವಿಪರ್ಯಾಸವೇನೆಂದರೆ, ಮತ್ತೂ ಇತರರಂತೆ ಆಗುವ ಬಯಕೆ ಅವಳನ್ನು ಬಿಟ್ಟಗಲದೆ, ಮತ್ತಷ್ಟು ಗಟ್ಟಿಯಾಗಿ ಅವಳಲ್ಲೇ ಬೇರೂರಿದ್ದು. ಹೀಗೆ ಹೇಳ್ತೀನಿ ಅಂತೀರಾ, ಮುಂದಿನ ಪ್ರಸಂಗ ಓದಿ.

ಇನ್ನೊಂದು ದಿನ ತೀರಾ ಅನಿರೀಕ್ಷಿತವಾಗಿ ಒಳನುಗ್ಗಿ, ಮಧ್ಯಾನ್ಹದ ಸುಖನಿದ್ರೆಯಲ್ಲಿದ್ದ ನನ್ನನ್ನು ಬಡಿದೆಬ್ಬಿಸಿ, ''ರೀ ನೀವು ಈ ದಿನವೇ ಲಯನ್ ಆಗಬೇಕು'' ಎಂದು ಹುಕುಂ ಮಾಡಿದಳು. ಅರೆ ನಿದ್ದೆಯಲ್ಲೂ ಗಾಬರಿ ಆದೆ.

''ಲೇ, ಮಂಗ ಮಾನವ ಆದಾಂತ ಕೇಳಿದ್ದೇನೆ. ಅದರೆ ಮಾನವ ಹಿಂತಿರುಗಿ ಮಂಗ ಆದಾಂತ ಕೇಳಿಲ್ಲ. (ಮಂಗನ ಹಾಗೆ ಆಡುವುದು ಬೇರೆ ವಿಷಯ). ಇನ್ನು 'ಸಿಂಗ' ಆಗುವುದು ಎಲ್ಲಿಂದ ಬಂತು ? ಏನೇ ನಿನ್ನ ಹುಚ್ಚಾಟ ? ನಾನ್ಯಾಕೆ ಸಿಂಹ ಆಗ್ಬೇಕು ?'' ಎಂದು ಆಲಾಪಿಸಿದೆ.

''ನಾನು ಒಂದು ಹೇಳಿದ್ರೇ, ನೀವು ಇನ್ನೊಂದು ಹೇಳ್ತೀರ. 'ಲಯನ್' ಅಂದ್ರೆ ಕಾಡಿನ ಸಿಂಹ ಅಲ್ರೀ. ಅದೇ ಲಯನ್ಸ್ ಕ್ಲಬ್ಬಿನ.......''

''ಸಿಂಹ'' ನಾನು ವಾಕ್ಯ ಪೂರೈಸಿದೆ.

''ಥೂ ನೀವೊಬ್ರು ! ಆ ಕ್ಲಬ್ಬಿಗೆ ನೀವು ಮೆಂಬರಾದ್ರೆ [illegible] ''ಲಯನೆಸ್'' ಅಂತ ಹೇಳಬಾರದಾ ?'' [illegible] [illegible]

''ನಿನ್ನ ಸಿಂಹಕಟಿ ನೋಡಿದವರೆಲ್ಲಾ [illegible] ಸಿಂಹಿಣಿ, [illegible] ಸಾವಿರಾರು ರೂಪಾಯಿ ಸುರಿದು ಆ ಕ್ಲಬ್ಬಿಗೆ ಮೆಂಬರ್ ಆಗಿ 'ಸಿಂಹಿಣಿ' ಅಂತ ಯಾಕೆ ಕರೆಸಿಕೊಳ್ಳಬೇಕು ?''

''ನಿಮ್ಮ ಸೋದರಮಾವನ ಮಗ ಪರಮೇಶಿ ಈಗ ಲಯನ್ ಆಗಿರೋದ್ರಿಂದ್ಲೇ, ಅವನ ಹೆಂಡತಿ ರಮಾ ಲಯನೆಸ್ ಆಗಿ, ಅದರ ಪ್ರೆಸಿಡೆಂಟೂ ಆಗಿ, ಏನೇನೋ ಸೇವೆಗೀವೆ ಅಂತ ಓಡಾಡಿ, ಪೇಪರ್ ತುಂಬಾ ಫೋಟೋ ಹಾಕಿಸ್ಕೊಂಡು ಮೆರೀತಿರೋದು. ಅದಕ್ಕೇ ಹೇಳಿದ್ದು. ನೀವೂ ಲಯನ್ ಆದರೆ, ನಾನೂ ರಮಾ ತರಾನೇ ಆಗಿ ಪೇಪರ್ ತುಂಬಾ ಮೆರೀಬಹುದು ಅಂತ,'' ಸಂಭ್ರಮದಿಂದ ವರದಿ ಒಪ್ಪಿಸಿದಳು.

ನನಗೆ ಸಿಂಹ ಪಟ್ಟವಾಗಲಿ, ಸಿಂಹರಾಜನ ಪಟ್ಟವಾಗಲಿ ಇಷ್ಟವಿಲ್ಲವೆಂದು ಹೇಳಿ 'ನರಸಿಂಹ'ರೂಪ ತಾಳಿದೆ. ನನ್ನ ಪರ್ಸನ್ನು ನೋಡಿ ಪಟ್ಟ ಕಟ್ಟಬೇಕೆಂಬ ಬುದ್ಧಿ ಇವಳಿಗಿಲ್ಲವಲ್ಲಾ ಎಂದು ನಾನು ಹಾರಾಡತೊಡಗಿದಾಗ ಮಗ ಪ್ರಹ್ಲಾದನನ್ನು ನನ್ನೆದುರಿಗಿಟ್ಟು , ಇವಳು ಮಾಯವಾದಳು.

''ಜನಕನೇ ! ನಾನು ಹೇಳುವುದನ್ನು ಕೇಳುವಿರಾ?'' ಎಂದು ಪ್ರಹ್ಲಾದ ನಾಟಕದ ಡೈಲಾಗ್ ಶುರುಮಾಡುತ್ತಿದ್ದಂತೆಯೇ, ನಾಟಕ ಪ್ರಿಯನಾದ ನಾನು ಪುಂಗಿಯ ನಾದಕ್ಕೆ ಮಣಿವ ನಾಗನಂತೆ, ಮಗನ ಉಲಿತಕ್ಕೆ ಮಾರುಹೋಗಿ ಶಾಂತನಾದೆ.

''ತಂದೆಯೇ ! ಹಾದಿಯಲ್ಲಿ ಹೋಗುವ ಭಿಕ್ಷುಕನಂ ಕಂಡು, 'ನೀನೂ ಭಿಕ್ಷೆ ಎತ್ತಬೇಕೆ ಪ್ರಾಣಕಾಂತ ; ಆಗ ನಾನಾಗುವೆ ಭಿಕ್ಷುಕಿ ಹೇ ನಾಥಾ !' ಎನ್ನಲಿಲ್ಲವಲ್ಲಾ ನನ್ನ ಪ್ರೀತಿಯ ಮಾತಾ ''ಎಂಬ ಸಮಯೋಚಿತ ಸಮಾಧಾನೋಕ್ತಿಗಳನ್ನಾಡಿದ.

ಕಾಲಿಲ್ಲದ, ಕಣ್ಣಿಲ್ಲದ, ಕಜ್ಜಿದೇಹದ, ಕೆಟ್ಟ ಸ್ವರದ ಭಿಕ್ಷುಕ ಗಾಲಿಯ ಮಣೆಯ ಮೇಲೆ ಕುಳಿತಿರಲು, ಅದನ್ನು ತಳ್ಳುತ್ತಾ ದಾರಿಯುದ್ದಕ್ಕೂ ಭಿಕ್ಷೆ ಬೇಡಿ, ಕೈ ತುಂಬಾ ಸಿಗುವ ಚಿಲ್ಲರೆಯನ್ನು ಸೀರೆಯ ಸೆರಗಲ್ಲಿ ಗಂಟು ಕಟ್ಟಿಕೊಳ್ಳುವ ಆತನ ಹರಿದ ಸೀರೆಯ ತೂಳೆಯದ ಮೈಯಿಯ ಹೆಂಡತಿ ನೆನಪಾಗಿ ನಡುಗಿದೆ.

ಹೆದರಿ, ಬೆದರಿ, ಹೌಹಾರಿ, ಬೆವರಿ, ದೀನನಾಗಿ, 'ಅಹುದಲ್ಲ ! ಹೇ ಪರಮಾತ್ಮ ! ನಿಜವಾಗಿಯೂ ಇಂಥ ಹೀನ ಆಲೋಚನೆಯನ್ನು ಮಾತ ಆಕೆಗೆ ಕೊಡಬೇಡ' ಎಂದು ದೇವದೇವನನ್ನೇನೋ ಪ್ರಾರ್ಥಿಸಿದೆ. ಅದರೆ, 'ತನ್ನಂತೆ ಪರರ ಬಗೆದೊಡೆ' ಕೈಲಾಸ ಸಿಗುವುದಂತೆ; 'ಪರರಂತೆ ತನ್ನ ಬಗೆದೊಡೆ' ಪಾತಾಳಲೋಕವೂ ಸಿಗಲಾರದು, ಎಂಬ ಶುದ್ಧ ಸತ್ಯವನ್ನು ನನ್ನ ಕಣ್ಮಣಿಗೆ ಅರ್ಥಮಾಡಿಸಬಲ್ಲವರಾರಪ್ಪಾ ? ಎಂಬ ನನ್ನ ಆತಂಕ ತುಂಬಿದ ಪ್ರಶ್ನೆಗೆ ಮಾತ್ರ ಇದುವರೆಗೂ ಯಾರಿಂದಲೂ ಉತ್ತರ ದೊರೆತಿಲ್ಲ.

[illegible]
W/O ಡಾ|| ಎಸ್. ಹರಿಕೃಷ್ಣನ್, ಸರ್ಜನ್ ಡೆಂಟಿಸ್ಟ್,
[illegible]

## ಹೊಸತು ಎಚ್‌ಎಮ್‌ಟಿ ಲೇಖನ ಸ್ಪರ್ಧೆ

*ವಿಡಂಬನೆ, ಲಲಿತ ಪ್ರಬಂಧ ಮತ್ತು ಪ್ರವಾಸ ಕಥನ - ಈ ಯಾವುದೇ ಸಾಹಿತ್ಯ ಪ್ರಕಾರದಲ್ಲಿ, 'ಹೊಸತು' ಸಂಪಾದಕರು ಅತ್ಯುತ್ತಮವೆಂದು ಪರಿಗಣಿಸುವ ಒಂದು ಬರಹಕ್ಕೆ ಸಾರ್ವಜನಿಕ ಉದ್ದಿಮೆಗಳಲ್ಲಿ ಪ್ರತಿಷ್ಠಿತ ಸಂಸ್ಥೆಯಾದ ಎಚ್‌ಎಮ್‌ಟಿ ಪ್ರತಿ ತಿಂಗಳೂ ಒಂದು ಕೈಗಡಿಯಾರವನ್ನು ಬಹುಮಾನವಾಗಿ ನೀಡುವ ಮೂಲಕ ಲೇಖಕರನ್ನು ಪ್ರೋತ್ಸಾಹಿಸಲು ಮುಂದೆ ಬಂದಿದೆ ಎಂಬುದನ್ನು ತಿಳಿಸಲು ಹರ್ಷಿಸುತ್ತೇವೆ.*

*ಲೇಖನಗಳು 'ಹೊಸತು' ಸಂಚಿಕೆಯ ಸುಮಾರು ಎರಡು ಮುದ್ರಿತ ಪುಟಗಳಲ್ಲಾಗುವಷ್ಟಿದ್ದು (ಸುಮಾರು ಒಂದು ಸಾವಿರ ಪದಗಳು) ನಮ್ಮ ಪತ್ರಿಕೆಗೆಂದೇ ಬರೆದವಾಗಿರಬೇಕು. ಬೇರೆಲ್ಲೂ ಪ್ರಕಟವಾಗಿರ ಕೂಡದು. ಪ್ರವಾಸ ಲೇಖನದೊಂದಿಗೆ ಅದಕ್ಕೆ ಸಂಬಂಧಿಸಿದ ಒಂದೆರಡು ಛಾಯಾಚಿತ್ರಗಳನ್ನು ಕಳಿಸಬಹುದು. ಬರೆಹ, ಹಾಳೆಯ ಒಂದೇ ಮಗ್ಗುಲಿನಲ್ಲಿ ಸ್ಫುಟವಾದ ಅಕ್ಷರಗಳಲ್ಲಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಕ್ಕೆ ಪಡೆಯಲಿಚ್ಛಿಸುವವರು ಸಾಕಷ್ಟು ಅಂಚೆ ಚೀಟಿ ಅಂಟಿಸಿದ ಸ್ವ ವಿಳಾಸ ಬರೆದ ಲಕೋಟೆ ಲಗತ್ತಿಸಿರಬೇಕು. ಲಕೋಟೆಯ ಮೇಲೆ **'ಹೊಸತು - ಎಚ್‌ಎಮ್‌ಟಿ ಲೇಖನ ಸ್ಪರ್ಧೆಗಾಗಿ'** ಎಂದು ನಮೂದಿಸಿರಬೇಕು. ಬಹುಮಾನದ ಬಗ್ಗೆ ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ. ಆಯಾ ತಿಂಗಳ ಏಳನೆಯ ತಾರೀಖಿನೊಳಗೆ ನಮಗೆ ತಲುಪಿದ ಲೇಖನಗಳನ್ನು ಪರಿಶೀಲಿಸಿ, ಆಯ್ಕೆಯಾದ ಲೇಖನವನ್ನು ಮುಂದಿನ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. ವಿಜೇತರಿಗೆ ಎಚ್‌ಎಮ್‌ಟಿ ಸಂಸ್ಥೆಯವರು ಬಹುಮಾನ ನೀಡುವ ವ್ಯವಸ್ಥೆ ಮಾಡುತ್ತಾರೆ. ಒಂದೇ ಸಂಚಿಕೆಯಲ್ಲಿ ಮೂರೂ ಪ್ರಕಾರಗಳ ಬರಹಗಳು ಪ್ರಕಟವಾದಾಗ ಅವುಗಳ ಪೈಕಿ ಯಾವುದಕ್ಕೆ ಬಹುಮಾನವೆಂಬುದನ್ನು ಸಂಪಾದಕರು ತೀರ್ಮಾನಿಸುತ್ತಾರೆ.*

*ದೆಹಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದಲ್ಲಿ ಇತಿಹಾಸದ ಪ್ರಾಧ್ಯಾಪಕರಾಗಿರುವ ಪ್ರೊ॥ ಕೆ. ಎನ್. ಪಣಿಕ್ಕರ್ ಹೆಸರಾಂತ ಇತಿಹಾಸ ತಜ್ಞರು. ಇನ್ನೊಬ್ಬ ಪ್ರಮುಖ ಇತಿಹಾಸಕಾರರಾಗಿರುವ ಪ್ರೊ॥ ಸುಮಿತ್ ಸರ್ಕಾರ್ ಮತ್ತು ಪಣಿಕ್ಕರ್ ಇತ್ತೀಚೆಗೆ ಭಾರತ ಇತಿಹಾಸ ಸಂಶೋಧನಾ ಮಂಡಳಿಗೆ ಸಂಬಂಧಿಸಿದ ಚರಿತ್ರೆಯ ಪುಸ್ತಕಗಳ ಪ್ರಕಟಣೆಯ ವಿಷಯ ಕುರಿತಂತೆ ಸುದ್ದಿಯಲ್ಲಿದ್ದರು. ಈ ಮಂಡಳಿ ನಿಯೋಜಿತ ''ಸ್ವಾತಂತ್ರ್ಯದತ್ತ'' ಎಂಬ ಪುಸ್ತಕ ಮಾಲಿಕೆಯ ಎರಡು ಸಂಪುಟಗಳಿಗೆ - ಅಂದರೆ ಕ್ರಮವಾಗಿ ೧೯೪೦ ಮತ್ತು ೧೯೪೬ರ ಕಾಲಾವಧಿಯ ಇತಿಹಾಸಕ್ಕೆ ಸಂಬಂಧಪಟ್ಟಂತೆ - ಪಣಿಕ್ಕರ್ ಮತ್ತು ಸುಮಿತ್ ಸರ್ಕಾರ್ ಅವರು ಸಂಪಾದಕರಾಗಿ ದುಡಿದಿದ್ದಾರೆ. ಎಲ್ಲಾ ಕೆಲಸ ಮುಗಿದು, ಪುಸ್ತಕಗಳು ಅಚ್ಚಿನ ಮನೆಯಲ್ಲಿದ್ದಾಗ, ಈ ಸಂಪುಟಗಳ ಪ್ರಕಟಣೆಯನ್ನು ತಡೆಹಿಡಿಯಲಾಗಿದೆ ಎಂದು ಇತಿಹಾಸ ಸಂಶೋಧನಾ ಮಂಡಲಿಯ ಅಧ್ಯಕ್ಷ ಬಿ. ಆರ್. ಗ್ರೋವರ್ ಏಕಪಕ್ಷೀಯವಾಗಿ ಆಜ್ಞೆ ಹೊರಡಿಸಿದರು. ಗ್ರೋವರ್ ಅವರು ಹಿಂದುತ್ವವಾದಿ ಚರಿತ್ರೆಯ ವಕ್ತಾರರಲ್ಲಿ ಒಬ್ಬರೆನ್ನುವುದು ರಹಸ್ಯವೇನೂ ಅಲ್ಲ. ಹೀಗಾಗಿ ಇವರ ಹಠಾತ್ ಆಜ್ಞೆ ದೇಶದುದ್ದಕ್ಕೂ ಖಂಡನೆಗೆ ಗುರಿಯಾಯಿತು. ಇದು ಕೋಮುವಾದಿ ಶಕ್ತಿಗಳು ಶೈಕ್ಷಣಿಕ ವಿಷಯಗಳಲ್ಲಿ ಮಾಡುತ್ತಿರುವ ಮಧ್ಯಪ್ರವೇಶದ ಒಂದು ಉದಾಹರಣೆ ಮಾತ್ರ.*

*ಪ್ರೊ॥ ಕೆ. ಎನ್. ಪಣಿಕ್ಕರ್ ಅವರು ಇತ್ತೀಚೆಗೆ ಬೆಂಗಳೂರಿನಲ್ಲಿದ್ದಾಗ, ಈ ವಿವಾದದ ಬಗ್ಗೆ ಹಾಗೂ ಕೋಮುವಾದದ ಅನೇಕ ಅವತಾರಗಳ ಬಗ್ಗೆ ಮಾತುಕತೆ ನಡೆಸಿದರು. ಅದನ್ನು ಭಾಗಶಃ ಇಲ್ಲಿ ಪ್ರಕಟಿಸಲಾಗುತ್ತಿದೆ.*

# ಇತಿಹಾಸ ತಜ್ಞ ಪ್ರೊ॥ ಕೆ. ಎನ್. ಪಣಿಕ್ಕರ್

**ಸಂದರ್ಶನ : ಶಿವಸುಂದರ್, ಶ್ರೀಧರ ವಿ. ಎಸ್.**

**ಪ್ರಶ್ನೆ :** ನಿಮ್ಮ ಸಂಪಾದಕತ್ವದಲ್ಲಿ ಹೊರಬರಬೇಕಾಗಿದ್ದ ಭಾರತ ಸ್ವಾತಂತ್ರ್ಯ ಹೋರಾಟದ ಇತಿಹಾಸದ ಸಂಪುಟವನ್ನು ಪ್ರಕಟಿಸದಂತೆ ತಡೆಹಿಡಿಯಲಾಗಿದೆ. ಶೈಕ್ಷಣಿಕ ವಿಷಯಗಳಲ್ಲಿ ಹೆಚ್ಚುತ್ತಿರುವ ಕೋಮುವಾದಿ ಪ್ರಾಬಲ್ಯಕ್ಕೆ ಇದೊಂದು ನಿದರ್ಶನ. ಈ ಕ್ರಮದ ಬಗ್ಗೆ ಹೆಚ್ಚಿನ ವಿವರಣೆ ಏನಾದರೂ ನೀಡಬಹುದೆ?

**ಪ್ರೊ॥ ಕೆ. ಎನ್. ಪಣಿಕ್ಕರ್ :** ಇದೆಲ್ಲಾ ಪ್ರಾರಂಭವಾಗಿದ್ದು ಸಂಶೋಧನಾ ಮಂಡಲಿಯನ್ನು ಪುನರ್‌ರೂಪಿಸುವುದರಿಂದಲೇ. ಮಂಡಲಿಯ ಅವಧಿ ಮೂರು ವರ್ಷದ್ದು. ಪ್ರೊ॥ ಎಸ್. ಶೆಟ್ಟರ್ ಇದರ ಅಧ್ಯಕ್ಷರಾಗಿದ್ದರು. ಭಾ.ಜ.ಪ. ನೇತೃತ್ವದ ಸರ್ಕಾರ ಬಂದ ಮೇಲೆ ಹೊಸದಾಗಿ ಮಂಡಲಿಯನ್ನು ರೂಪಿಸಿ, ಹೊಸ ಸದಸ್ಯರನ್ನು ನೇಮಕ ಮಾಡಲಾಯಿತು. ಹೊಸ ಸದಸ್ಯರಲ್ಲಿ ಅನೇಕ ಮಂದಿ ಆರ್.ಎಸ್.ಎಸ್. ಹಿನ್ನೆಲೆಯಿಂದ ಬಂದಂಥವರೇ. ಅದರಲ್ಲೂ ಈಗ ನೇಮಕವಾಗಿರುವ ಅಧ್ಯಕ್ಷ ಬಿ. ಆರ್. ಗ್ರೋವರ್ ಬಾಬ್ರಿ ಮಸೀದಿಯ ಧ್ವಂಸವನ್ನು ನೇರವಾಗಿ ಬೆಂಬಲಿಸಿದವರು. ಇವರು ಬರುವುದಕ್ಕೆ ಮುಂಚೆಯೇ ಇತಿಹಾಸದ ಮಂಡಲಿ ಭಾರತದ ಸ್ವಾತಂತ್ರ್ಯ ಸಂಗ್ರಾಮವನ್ನು ಕುರಿತಂತೆ ಬೃಹತ್ ಸಂಪುಟಗಳ ಒಂದು ಮಾಲೆಯನ್ನು ನಿಯೋಜಿಸಿತ್ತು. ಪ್ರತಿ ಸಂಪುಟಕ್ಕೂ ಬೇರೆ ಬೇರೆ ಇತಿಹಾಸಕಾರರನ್ನು ಸಂಪಾದಕರಾಗಿ ನಿಯಮಿಸಲಾಗಿತ್ತು. ಈ ಮಾಲಿಕೆಯ ಪ್ರಧಾನ ಸಂಪಾದಕರು ಪ್ರೊ॥ ಎಸ್. ಗೋಪಾಲ್. ನಾನು ೧೯೪೦ರ ಕಾಲಾವಧಿಗೆ ಸಂಬಂಧಪಟ್ಟ ಚರಿತ್ರೆಯ ಸಂಪುಟದ ಸಂಪಾದಕ. ಎಲ್ಲಾ ಕೆಲಸ ಮುಗಿದು ಅದನ್ನು ಪ್ರಕಟಣೆಗಾಗಿ ದೆಹಲಿಯ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್‌ಗೆ ಕಳುಹಿಸಲಾಗಿತ್ತು. ಮುದ್ರಣದ ಕೆಲಸವೂ ಪ್ರಾರಂಭವಾಗಿತ್ತು.

''ಅಧಿಕಾರದ ಹಸ್ತಾಂತರ'' ಎಂಬ ಶೀರ್ಷಿಕೆಯಡಿ - ಬ್ರಿಟಿಷ್ ದೃಷ್ಟಿಕೋಣದ, ಬ್ರಿಟಿಷರಿಂದಲೇ ರಚಿತವಾದ - ಭಾರತ ಸ್ವಾತಂತ್ರ್ಯ ಹೋರಾಟದ ಚರಿತ್ರೆಯ ಪುಸ್ತಕಕ್ಕೆ ಪ್ರತಿಕ್ರಿಯೆಯಾಗಿ ಇದನ್ನು ಯೋಜಿಸಲಾಗಿತ್ತು. ನಮ್ಮ ಈ ಸಂಪುಟಗಳನ್ನು ಹಿಂದಕ್ಕೆ ಪಡೆಯಬೇಕೆಂದು ಗ್ರೋವರ್ ಈ ಮೊದಲು ಆಗ್ರಹಪಡಿಸಿದ್ದರು. ಅವರೇ ಅಧ್ಯಕ್ಷರಾದ ಮೇಲೆ ಅವರ ಈ ವಾದವನ್ನು ಕಾರ್ಯರೂಪಕ್ಕೆ ತಂದೇಬಿಟ್ಟರು. ಪ್ರಕಟಣೆಗಾಗಿ ಸಿದ್ಧವಾದ ಪುಸ್ತಕಗಳನ್ನು ಹಿಂದಕ್ಕೆ ಪಡೆಯುವ ಅಧಿಕಾರ ಅಧ್ಯಕ್ಷರಿಗಿಲ್ಲ. ವಿಚಿತ್ರವೆಂದರೆ, ಪುಸ್ತಕದ ಹಸ್ತಪ್ರತಿಯನ್ನು ವಾಪಸು ಕಳುಹಿಸುವಂತೆ ಗ್ರೋವರ್ ಪ್ರಕಾಶಕರಾದ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್‌ಗೆ ಟಿಪ್ಪಣಿಯೂ [illegible] ಖಾಸಗಿಯಾಗಿ ಬರೆದರು. ಹೀಗೆ ಮಾಡಿದ [illegible] ಇತಿಹಾಸದಲ್ಲಿಲ್ಲ.

**ಪ್ರ :** ತಮ್ಮ ಈ ಕ್ರಮಕ್ಕೆ ಅಧ್ಯಕ್ಷರು ನೀಡುವ ಕಾರಣ?

**ಕೆ. ಎನ್ :** ಕಾರಣಗಳು ಹಾಸ್ಯಾಸ್ಪದವಾಗಿವೆ. ಗ್ರೋವರ್ ಅವರ ವಾದ ಏನೆಂದರೆ ಮೊದಲು ಸಿದ್ಧಪಡಿಸಿದ ಕೃತಿಗಳು ತಪ್ಪಿನಿಂದ ಕೂಡಿದ್ದುದರಿಂದ, ನಂತರ ತಯಾರಾದ ಕೃತಿಗಳನ್ನೂ ಮರುಪರುಶೀಲನೆಗೆ ಒಳಪಡಿಸಬೇಕು ಎಂದು. ಆದರೆ ಮರುಪರುಶೀಲನೆಯ ಅಗತ್ಯವಾಗಲಿ, ಅವಕಾಶವಾಗಲಿ ಈ ಪುಸ್ತಕಗಳಿಗೆ ಇಲ್ಲ. ಕೇವಲ ಪ್ರಧಾನ ಸಂಪಾದಕರಾದ ಎಸ್. ಗೋಪಾಲ್ ಅವರಿಗೆ ಮಾತ್ರ ಈ ಅಧಿಕಾರವಿದೆ. ಅವರು ನಮ್ಮ ಈ ಸಂಪುಟಗಳ ಹಸ್ತಪ್ರತಿಯನ್ನು ಆಮೂಲಾಗ್ರ ಪರಿಶೀಲಿಸಿದ ನಂತರ ಅವರ ಸಲಹೆ ಮೇರೆಗೆ ಅಗತ್ಯವಿದ್ದೆಡೆ ಬದಲಾವಣೆಗಳನ್ನು ಮಾಡಿದ ಮೇಲೆಯೇ ಮುದ್ರಣಕ್ಕೆ ಕಳುಹಿಸಿಕೊಟ್ಟದ್ದು. ಮಂಡಲಿ ಇಂತಹ ಯೋಜನೆಗಳನ್ನು ಪ್ರಾಯೋಜಿಸುವ, ಅದಕ್ಕೆ ಅನುವು ಮಾಡಿಕೊಡುವಂಥ, ಸಂಸ್ಥೆಯೇ ವಿನಾ, ಅದೇ ನೇರವಾಗಿ ಹಸ್ತಪ್ರತಿಯ ಮರುಪರಿಶೀಲನೆಯಂಥ ಕೆಲಸವನ್ನು ಮಾಡತಕ್ಕದ್ದಲ್ಲ. ಈಗ ಈ ಸಂಪುಟಗಳ ಪ್ರಕಾಶಕರಾದ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಹಸ್ತಪ್ರತಿಯನ್ನು ಗ್ರೋವರ್ ಅವರಿಗೆ ವಾಪಸು ನೀಡಲು ನಿರಾಕರಿಸಿ, ಅವರ ವಿರುದ್ಧ ಕಾನೂನು ಕ್ರಮ ತೆಗೆದುಕೊಳ್ಳುವ ನೋಟೀಸನ್ನು ನೀಡಿದೆ.

**ಪ್ರ :** ಬ್ರಿಟನ್ನಿನ ಪ್ರಕಾಶನ ''ಅಧಿಕಾರದ ಹಸ್ತಾಂತರ''ಕ್ಕೂ ನಿಮ್ಮ ಸಂಪುಟಕ್ಕೂ ಇರುವ ವ್ಯತ್ಯಾಸಗಳಾದರೂ ಏನು ?

**ಕೆ. ಎನ್ :** ಭಾರತದ ಸ್ವಾತಂತ್ರ್ಯ ಹೋರಾಟದ ಕುರಿತ ಬ್ರಿಟನ್ನಿನ ಅಧಿಕೃತ ದಾಖಲೆ ''ಅಧಿಕಾರದ ಹಸ್ತಾಂತರ.'' ಅದು ಬ್ರಿಟನ್ನಿನ ಲಂಡನ್ ಆಫೀಸಿನಲ್ಲಿ ಲಭ್ಯವಿರುವ ಅಧಿಕೃತ ದಾಖಲೆಗಳನ್ನೂ ವರದಿಗಳನ್ನೂ ಆಧರಿಸಿ ರಚಿತವಾದಂಥ ಚರಿತ್ರೆಯೇ ಹೊರತು, ನಮ್ಮ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಜನಸಾಮಾನ್ಯರ ದೃಷ್ಟಿಕೋನದಿಂದ ಬರೆದ ಚರಿತ್ರೆಯಲ್ಲ. ಇದು ಏಕಪಕ್ಷೀಯವಾಗಿರುವುದರಿಂದ ಹೋರಾಟದ ಅನೇಕ ಸಂಗತಿಗಳು, ಕಥೆಗಳು ಇಲ್ಲಿ ಸೇರ್ಪಡೆಯಾಗಿಲ್ಲ. ಆದರೆ ನಮ್ಮ ಸಂಪುಟಗಳು ವಿವಿಧ ರೀತಿಯ ಮೂಲಗಳನ್ನು ಆಧರಿಸಿವೆ ಮತ್ತು ನಮ್ಮ ರಾಷ್ಟ್ರೀಯ ಹಾಗೂ ವಿವಿಧ ರಾಜ್ಯಗಳಲ್ಲಿ ಲಭ್ಯವಿರುವ ಪತ್ರಾಗಾರದಲ್ಲಿನ ಮಾಹಿತಿಗಳನ್ನೊಳಗೊಂಡಿವೆ. ಎಲ್ಲಕ್ಕಿಂತಲೂ ಮುಖ್ಯವಾಗಿ ಈ ಸಂಪುಟಗಳು ಅನೇಕ ಖಾಸಗಿ ಪತ್ರವ್ಯವಹಾರ, ವರದಿ, ಭಾಷಣ ಮತ್ತಿತರ ರೂಢಿಮೂಲವಲ್ಲದ ಆಕರಗಳನ್ನು ತನ್ನ ಇತಿಹಾಸ ಕಥನದಲ್ಲಿ ಅಳವಡಿಸಿಕೊಂಡಿದೆ. ಹೀಗಾಗಿ ನಮ್ಮ ಸಂಪುಟಗಳು ಹೆಚ್ಚಿನ ಮಾಹಿತಿಯನ್ನೂ ಜನಪರ ಧೋರಣೆಯನ್ನೂ ಹೊಂದಿವೆ.

**ಪ್ರ :** ಹಾಗಾದರೆ, ಬ್ರಿಟಿಷ್ ಪ್ರಕಟಿತ ಚರಿತ್ರೆ ಇನ್ನೂ ವಸಾಹತುಶಾಹಿ ಧೋರಣೆಯಿಂದ ಮುಕ್ತವಾಗಿಲ್ಲ ಎಂದು ಹೇಳಬಹುದಲ್ಲವೆ? ಭಾರತದ ಸ್ವಾತಂತ್ರ್ಯದ ನಂತರವೂ ವಸಾಹತುಶಾಹಿ ಧೋರಣೆ ಮತ್ತು ಯೋಜನೆಗಳ ಮುಂದುವರಿಕೆಯ ಬಗ್ಗೆ ಬೇರೆಡೆ ಲೇಖನಗಳಲ್ಲಿ ಪ್ರಸ್ತಾಪಿಸಿದ್ದೀರಿ. ಹಾಗಾದರೆ ನಿಜಕ್ಕೂ ೧೯೪೭ರಲ್ಲಿ ನಡೆದದ್ದು ಅಧಿಕಾರ ಬದಲಾವಣೆ ಮಾತ್ರವಲ್ಲವೆ ?

**ಕೆ. ಎನ್ :** ಈ ಮಾತನ್ನು ನಾನು ವಿಶೇಷವಾಗಿ ನಮ್ಮ ಶಿಕ್ಷಣ ಪದ್ಧತಿಯನ್ನು ಕುರಿತಂತೆ ಪ್ರಸ್ತಾಪಿಸಿದ್ದೆ. ೧೯೪೭ರ ನಂತರ ನಮ್ಮ ಶಿಕ್ಷಣ ನೀತಿ ವಸಾಹತುಶಾಹಿಯ ನಿರ್ವಚನೆಯನ್ನೇ ಗುರಿಯಾಗಿಟ್ಟುಕೊಂಡು ಮುಂದುವರೆಯಬೇಕಿತ್ತು. ಆದರೆ ಅದು ಆಗೇ ಇಲ್ಲ. ಅಲ್ಲಿ ಇಲ್ಲಿ ಕೊಂಚ ಸುಧಾರಣೆ ಬಿಟ್ಟರೆ, ಸ್ವಾತಂತ್ರ್ಯದ ನಂತರವೂ ಅನೇಕ ವಿಷಯಗಳಲ್ಲಿ ವಸಾಹತುಶಾಹಿ ಧೋರಣೆಯನ್ನೇ ಮತ್ತೆ ಎತ್ತಿ ಹಿಡಿಯಲಾಗುತ್ತಿದೆ.

**ಪ್ರ :** ಇದು ಕೇವಲ ಶಿಕ್ಷಣ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಲ್ಲ, ಅಲ್ಲವೇ?

**ಕೆ. ಎನ್ :** ಇಲ್ಲ. ಬೇರೆ ಕ್ಷೇತ್ರಗಳಲ್ಲೂ ಇಂದು ಸ್ಪಷ್ಟವಾಗಿಯೇ ವಸಾಹತುಶಾಹಿಯೇ ಮುಂದುವರಿದಿದೆ. ಉದಾ : ನಮ್ಮ ಆಡಳಿತ ವ್ಯವಸ್ಥೆ, ಅಧಿಕಾರಶಾಹಿ ಸಂಸ್ಕೃತಿ ಇತ್ಯಾದಿ. ನಮಗೆ ಕೇವಲ ರಾಜಕೀಯ ವಿಮೋಚನೆ ದೊರೆಯಿತೇ ಹೊರತು, ಆರ್ಥಿಕ, ಸಾಮಾಜಿಕ ಸ್ವಾತಂತ್ರ್ಯ ಸಿಕ್ಕೇ ಇಲ್ಲ. ಒಂದು ಅಯ್ದು ಗಣ್ಯರ ಗುಂಪು ಇಡೀ ರಾಷ್ಟ್ರ ಪ್ರಭುತ್ವವನ್ನು ತನ್ನ

ಹಿಡಿತದಲ್ಲಿಟ್ಟುಕೊಂಡಿದೆ.

**ಪ್ರ :** ಇದಕ್ಕೆ ಪಶ್ಚಿಮದಿಂದ ಸ್ವೀಕರಿಸಲಾಗಿರುವ ನಮ್ಮ ರಾಷ್ಟ್ರ-ಪ್ರಭುತ್ವದ ಸ್ವರೂಪವೇ ಕಾರಣವಿರಬಹುದೇ?

**ಕೆ. ಎನ್ :** ಇದು ಬಹುಮಟ್ಟಿಗೆ ನಿಜ. ರಾಷ್ಟ್ರ-ಪ್ರಭುತ್ವದ ಅಧಿಕಾರ ಸ್ವರೂಪ ಬಹುಪಾಲಿನ ಜನರನ್ನು ತನ್ನ ತೆಕ್ಕೆಯಿಂದ ಆಚೆಗೆ ಇಟ್ಟಿದೆ. ರಾಜಕೀಯವಾಗಿ ಜನಗಳಿಗೆ ಈ ಕೇಂದ್ರದ ವಲಯದೊಳಗೆ ಪ್ರವೇಶ ಪಡೆಯುವ ಅವಕಾಶವಿದೆಯಾದರೂ ಆರ್ಥಿಕವಾಗಿ ಅಥವಾ ಸಾಮಾಜಿಕವಾಗಿ ಇಲ್ಲ. ಇದಕ್ಕೆ ಮುಖ್ಯಕಾರಣ, ರಾಷ್ಟ್ರ-ಪ್ರಭುತ್ವದ ವರ್ಗ ಸ್ವರೂಪ ಇವತ್ತಿಗೂ ಬಂಡವಾಳಶಾಹಿಯಾಗಿಯೇ ಉಳಿದಿರುವುದು. ನೆಹರೂ ಕಾಲದ ಸಮಾಜವಾದಿ ಆರ್ಭಟ ಕೂಡ ಈಗ ಉಳಿದಿಲ್ಲ. ಜೊತೆಗೆ ಬಂಡವಾಳಶಾಹಿ ವರ್ಗದ ಗುಣಲಕ್ಷಣಗಳಲ್ಲಿ ಐವತ್ತರ ದಶಕಕ್ಕೂ ಇವತ್ತಿಗೂ ಮೂಲಭೂತ ವ್ಯತ್ಯಾಸವಾಗಿದೆ. ಆಗ ಬಂಡವಾಳಶಾಹಿ ವರ್ಗ ರಾಷ್ಟ್ರೀಯವಾದಿಯಾಗಿತ್ತು. ಸ್ವಾತಂತ್ರ್ಯ ಹೋರಾಟದಲ್ಲಿ ತನ್ನನ್ನು ತಾನು ಸ್ವಲ್ಪಮಟ್ಟಿಗೆ ತೊಡಗಿಸಿಕೊಂಡಿತ್ತು. ಆದರೆ ಈಗ ಅದರ ಮುಂದೆ ಅಂತಹ ಯಾವುದೇ ಸಾಮಾಜಿಕ, ರಾಜಕೀಯ ಆದರ್ಶಗಳಿಲ್ಲ. ಹಾಗಾಗಿ ಅದು ಈಗ ಹೊರಗಿನ ಬಂಡವಾಳದ ಅಧೀನ ವರ್ಗವಾಗಿ ಬೆಳೆದು ನಿಂತಿದೆ, ವಿದೇಶಿ ಬಂಡವಾಳಗಾರರ ಏಜೆಂಟ್‌ನಂತೆ ವರ್ತಿಸುತ್ತಿದೆ.



**ಪ್ರ :** ಚರಿತ್ರೆ ಎಂಬುದು ಕೋಮುವಾದಿ ಶಕ್ತಿಗಳಿಗೆ ಒಂದು ಪ್ರಮುಖ ಸಾಧನ. ನಿಮ್ಮ ಚರಿತ್ರೆ ಸಂಪುಟದ ಬಗ್ಗೆ ಈಗ ಇರುವ ವಿವಾದವೇ ಇದಕ್ಕೆ ಸಾಕ್ಷಿ. ಚರಿತ್ರೆಯನ್ನು ಯಾಕೆ ಮತ್ತು ಹೇಗೆ ಈ ಕೋಮು ಶಕ್ತಿಗಳು ಬಳಸಿಕೊಳ್ಳುತ್ತವೆ ?

**ಕೆ. ಎನ್ :** ಕೋಮು ಗುಂಪುಗಳಿಗೆ ಚರಿತ್ರೆ ಒಂದು ಮಹತ್ವಪೂರ್ಣ ತಾತ್ವಿಕ ಅಗತ್ಯ. ಇದು ಎರಡು ರೀತಿಯಲ್ಲಿ ಕೆಲಸ ಮಾಡುತ್ತದೆ; ಒಂದು, ಹಿಂದು ಕೋಮುವಾದಕ್ಕೆ ಆಂತರಿಕ ಶಕ್ತಿ ಸಂಚಯನವನ್ನು ಒದಗಿಸುವುದು; ಇನ್ನೊಂದು, ಈ ಶಕ್ತಿ ಪ್ರಯೋಗಕ್ಕೆ ಒಂದು ವೈರಿಯನ್ನು ರೂಪಿಸುವುದು. ಇವೆರಡಕ್ಕೂ ಚರಿತ್ರೆಯನ್ನು ಒಂದು ಸಾಧನವನ್ನಾಗಿ ಅದು ಬಳಸಿಕೊಳ್ಳುತ್ತದೆ. ಮೊದಲನೆಯದಕ್ಕೆ ಉದಾಹರಣೆಯೆಂದರೆ, ಹಿಂದುತ್ವದ ಮೂಲವನ್ನು ವೇದ ಕಾಲದಲ್ಲಿ ಗುರುತಿಸಿ ಅದರ ಮೂಲಕ ಹಿಂದುತ್ವಕ್ಕೆ ಒಂದು ಅನಾದಿ ಸ್ವರೂಪವನ್ನು ತೊಡಿಸುವ ಪ್ರಯತ್ನ... ಹೀಗೆ ತನ್ನ ಇವತ್ತಿನ ಕೋಮುತತ್ವ ಸಮರ್ಥನೆಗೆ ಕೋಮುವಾದವು ಇತಿಹಾಸದ ಮೊರೆ ಹೋಗುತ್ತದೆ. ಎರಡನೆಯದಕ್ಕೆ ಉದಾಹರಣೆ ಎಂದರೆ, ಹಿಂದೂಗಳು ಇಂದು ನಿರ್ವೀರ್ಯರಾಗಲು, ತಮ್ಮ ಹಿಂದಿನ ಶಕ್ತಿ, ಅಧಿಕಾರವನ್ನು ಕಳೆದುಕೊಂಡಿರುವುದಕ್ಕೆ, ಹಿಂದೂ ಸಮಾಜದ ಪತನವೇ ಕಾರಣ ಎಂದು ನಿರೂಪಿಸುವುದು. ಈ ಆರೋಪಕ್ಕೆ ಒಂದು ನೆಪವನ್ನು ಹುಡುಕಲೇಬೇಕಲ್ಲವೆ ? ಹಿಂದೂಗಳ ಇಂದಿನ ಅಧಃಪತನಕ್ಕೆ ಮೂಲ ಹಾಗೂ ಏಕೈಕ ಕಾರಣ ಮುಸ್ಲಿಮರೇ ಎಂದು ಅವರತ್ತಲೇ ತಮ್ಮ ದೌರ್ಬಲ್ಯಕ್ಕೆ ಬೊಟ್ಟುಮಾಡಿ ತೋರಿಸುವುದನ್ನು ಕೋಮುವಾದ ಯಶಸ್ವಿಯಾಗಿ ಮಾಡಿಕೊಂಡು ಬಂದಿದೆ.

**ಪ್ರ:** ಆದರೆ ಚರಿತ್ರೆಯನ್ನು ಇದೇ ರೀತಿ ವಸಾಹತುಶಾಹಿ ಶಕ್ತಿಗಳೂ ಬಳಸಿಕೊಂಡಿದ್ದವಲ್ಲವೆ ? ವಸಾಹತು ಯೋಜನೆ, ಕೋಮುವಾದ ಇವೆರಡಕ್ಕೂ ಚರಿತ್ರೆಯನ್ನು ಬಳಸಿಕೊಳ್ಳುವುದರಲ್ಲಿ ಏನಾದರೂ ವ್ಯತ್ಯಾಸವಿದೆಯೆ?

**ಕೆ. ಎನ್ :** ವಸಾಹತುಶಾಹಿ ಕೂಡ ತನ್ನ ಯಜಮಾನತ್ವದ ಪ್ರತಿಪಾದನೆಗಾಗಿ ಚರಿತ್ರೆಯನ್ನು ಸಾಧನವನ್ನಾಗಿ ಬಳಸಿಕೊಳ್ಳುತ್ತದೆ, ನಿಜ. ಆದರೆ ಇವೆರಡರ ಗುರಿ ಸಾಧನೆಯಲ್ಲಿ ವ್ಯತ್ಯಾಸವಿದೆ. ವಸಾಹತುಶಾಹಿ ಚರಿತ್ರೆಯನ್ನು ಮೂಲಭೂತವಾಗಿ ಆಡಳಿತಾತ್ಮಕ ಅಗತ್ಯಗಳಿಗೆ ಬಳಸಿಕೊಳ್ಳುತ್ತದೆ. 'ಸ್ಥಳೀಯ' ಜನರನ್ನು ಅರ್ಥಮಾಡಿಕೊಂಡರೆ ಮಾತ್ರ ಅವರ ಮೇಲೆ ಹತೋಟಿ ಸಾಧ್ಯ. ಮತ್ತು ಅವರನ್ನು ಅರ್ಥಮಾಡಿಕೊಳ್ಳುವುದೆಂದರೆ ಆ ಜನರ ಇತಿಹಾಸ, ಸಂಸ್ಕೃತಿಯನ್ನು ಅರಿತುಕೊಳ್ಳುವುದು. ಹೀಗಾಗಿ ಆಳುವವರ ದೃಷ್ಟಿಕೋನದಿಂದ ಆಳಿಸಿಕೊಳ್ಳುವವರ ಒಂದು ರೀತಿಯ ಏಕಪಕ್ಷೀಯ ಚರಿತ್ರೆ ಸೃಷ್ಟಿಯಾಗುತ್ತದೆ. ಇನ್ನೊಂದು ಬಗೆಯ ಬಳಕೆ : ವಸಾಹತುಗಳ ಚರಿತ್ರೆ ಪಾಶ್ಚಿಮಾತ್ಯ ಜಗತ್ತಿಗೆ ತನ್ನದೇ [illegible] ಕಟ್ಟಿಕೊಳ್ಳಲು. ತನ್ನ [illegible] ಭವ್ಯಗೊಳಿಸಿಕೊಳ್ಳಲು [illegible] ರಾಷ್ಟ್ರೀಯವಾದಿ ಚರಿತ್ರೆ ಕೂಡ ತನ್ನ [illegible] ಬಳಸಿಕೊಳ್ಳುತ್ತದೆ. ಈ ಕ್ರಮಕ್ಕೂ ಕೋಮುವಾದದ [illegible] ಮುಖ್ಯವಾದ ವ್ಯತ್ಯಾಸವಿದೆ. ರಾಷ್ಟ್ರೀಯತೆಗಾಗಿ ಹುಟ್ಟುವ ಚರಿತ್ರೆ, [illegible] ಹುಟ್ಟುಹಾಕುವುದರ ಜತೆಗೆ, ವಸಾಹತುಶಾಹಿಯಿಂದ [illegible] ಮರೆತಂತಹ ಅನೇಕ ಸತ್ಯಾಂಶಗಳನ್ನು ತನ್ನ ಇತಿಹಾಸ [illegible]. ಉದಾಹರಣೆಗೆ, ನಮ್ಮ ದೇಶದ ರಾಷ್ಟ್ರೀಯತೆಯ ಚರಿತ್ರೆ ವಸಾಹತುಪೂರ್ವ ಭಾರತದಲ್ಲಿದ್ದ ವಿಜ್ಞಾನ, ಶಿಕ್ಷಣ ಪದ್ಧತಿ ಇತ್ಯಾದಿಗಳ ಬಗ್ಗೆ ಮಹತ್ವಪೂರ್ಣ ಸಂಶೋಧನೆಗೆ ಎಡೆಮಾಡಿಕೊಟ್ಟಿದೆ. ಆದರೆ ಕೋಮುವಾದ ಪ್ರೇರಿತ ಚರಿತ್ರೆಯಲ್ಲಿ ಕೇವಲ [illegible] ಮಾತ್ರ ತುಂಬಿರುತ್ತವೆ. ಒಂದು ರೀತಿಯಲ್ಲಿ ಕೋಮುವಾದಿ ಚರಿತ್ರೆ ಎಂದರೆ ಚರಿತ್ರೆಗೆ ಅಪಮಾನ ಮಾಡಿದಂತೆ. ಅದು ಚರಿತ್ರೆಯ ನಿರಾಕರಣೆ. ಜತೆಗೆ, ರಾಷ್ಟ್ರೀಯವಾದಿ ಚರಿತ್ರೆಗೆ ಜನರನ್ನು ಒಗ್ಗೂಡಿಸುವ ಹಂಬಲ ಇದ್ದರೆ, ಕೋಮುವಾದಿ ಚರಿತ್ರೆಯ ಮೂಲ ಉದ್ದೇಶವೇ ಸಮಾಜವನ್ನು ಒಡೆಯುವುದು.

**ಪ್ರ :** ಹೀಗೆ ಚರಿತ್ರೆಯನ್ನು ತನ್ನ ವಿಭಜನಕಾರಿ ದುರ್ಲಾಭಕ್ಕೆ ಬಳಸಿಕೊಳ್ಳುವ ಕೋಮುವಾದಿ ರಾಜಕೀಯದ ಪ್ರಸ್ತುತ ಸ್ಥಿತಿ-ಗತಿ ಏನು? ಅದರಲ್ಲಿ ಈಗ ಬದಲಾವಣೆ ಏನಾದರೂ ಇದೆಯೆ?

**ಕೆ. ಎನ್ :** ಕಳೆದ ಎರಡು ವರ್ಷಗಳಲ್ಲಿ ಕೋಮುವಾದ ಒಂದು ಹೊಸ ಹಂತವನ್ನು ತಲುಪಿದೆ. ಮೊದಲು ಅದರ ಮೂಲ ಗಮನ ಇದ್ದದ್ದು ಕೋಮುವಾದದ ಬಲ ಸಂವರ್ಧನೆಗೆ. ಈ ಕಾರ್ಯಕ್ಕೆ ಅದು ಕೆಲವು ಹುನ್ನಾರಗಳನ್ನು ಬಳಸಿ, ಸಮಾಜವನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವ ಪ್ರಯತ್ನದತ್ತ ಕಾರ್ಯಮಗ್ನವಾಗಿತ್ತು. ಅದರ ರಾಜಕೀಯ ಫಲಗಳು ಕೇವಲ ಕೆಲವೇ ರಾಜ್ಯಗಳಲ್ಲಿ ಆಡಳಿತ ಯಂತ್ರವನ್ನು ಹತೋಟಿಗೆ ತೆಗೆದುಕೊಳ್ಳುವುದಕ್ಕೆ ಸೀಮಿತವಾಗಿತ್ತು. ೧೯೯೦ರವರೆಗೂ ಬಹಳಷ್ಟು ರಾಜಕೀಯ ಪಕ್ಷಗಳ ತಾತ್ವಿಕತೆ ಅಂತರಂಗದಲ್ಲಿ ಏನೇ ಇರಲಿ, ಬಹಿರಂಗವಾಗಿಯಾದರೂ, ಕೋಮುವಾದಿ ವಿರೋಧದ ನೆಲೆಯಲ್ಲೇ ರೂಪುಗೊಂಡಿತ್ತು. ಆದರೆ ಈಗ ಅದು ಬದಲಾಗಿದೆ. ೧೯೯೦ರ ನಂತರ ಕೋಮುವಾದಿ ಶಕ್ತಿಗಳು ರಾಜಕೀಯ ಅಧಿಕಾರವನ್ನು ಪಡೆದು, ಸರ್ಕಾರದ ಮೇಲೆ ತಮ್ಮ ಅಧಿಪತ್ಯವನ್ನು ಸಾಧಿಸಿವೆ. ಹೀಗಾಗಿ ಸಂಪೂರ್ಣ ರಾಜಕೀಯ ಅಧಿಕಾರ ಸಿಕ್ಕಿಲ್ಲದಿದ್ದರೂ ಸಾಕಷ್ಟು ರಾಜಕೀಯ ವರ್ಚಸ್ಸನ್ನು ಪಡೆಯುವಲ್ಲಿ ಕೋಮುವಾದ ಯಶಸ್ವಿಯಾಗಿದೆ. ಇದರರ್ಥ ಏನೆಂದರೆ ನಮ್ಮ ದೇಶದ ಆಡಳಿತ ವರ್ಗ ಖಾಸಗೀಕರಣ ಮತ್ತು ಜಾಗತೀಕರಣಕ್ಕೆ ತಮ್ಮ ಸಂಪೂರ್ಣ ಸಹಮತ, ಬೆಂಬಲವನ್ನು ನೀಡಿದ್ದರೂ, ಕೋಮುವಾದಕ್ಕೆ ಅಷ್ಟೊಂದು ಬೆಂಬಲವನ್ನು ನೀಡಿದ್ದಿಲ್ಲ. ಅಂದರೆ ಕೋಮುಶಕ್ತಿಗಳಿಗೆ ಸಮಾಜದ ಆಳುವ ವರ್ಗಗಳ ಮೇಲೆ ಸಂಪೂರ್ಣ ಹತೋಟಿ ಸಾಧಿಸಲು ಆಗಿಲ್ಲ. ಆದಾಗ್ಯೂ ಕೋಮುಶಕ್ತಿಗಳು ಕ್ರಮೇಣ ಸೇನೆ, ಪೊಲೀಸು, ನ್ಯಾಯಾಂಗ, ಶಿಕ್ಷಣ ಇತ್ಯಾದಿ ಆಡಳಿತಾಂಗಗಳ ಮೇಲೆ ತನ್ನ ಸ್ವಾಮಿತ್ವವನ್ನು ಹೇರಲು ಪ್ರಯತ್ನಿಸುತ್ತಿದೆ. ಉದಾಹರಣೆಗೆ, ರಾಜಸ್ತಾನದಲ್ಲಿ ಕೆಲಕಾಲದ ಹಿಂದೆ ಪೊಲೀಸು ಇಲಾಖೆಯ ಹುದ್ದೆಗಳನ್ನು ಆರ್.ಎಸ್.ಎಸ್. ಹಿನ್ನೆಲೆಯಿದ್ದ ವ್ಯಕ್ತಿಗಳಿಗೇ ಕೊಡಲಾಗಿದೆ. ಇವರ ಗಂಭೀರ ಪರಿಣಾಮಗಳ ಬಗ್ಗೆ ನಮ್ಮ ಯಾವುದೇ ರಾಜಕೀಯ ಪಕ್ಷಗಳಾಗಲಿ, ಸಾಮಾನ್ಯ ಜನತೆಯಾಗಲೀ ಯೋಚಿಸಲು ಹೋಗೇ ಇಲ್ಲ. ಕೋಮುಶಕ್ತಿಗಳಿಗೆ ರಾಜಕೀಯ ಅಧಿಕಾರ ಬಂದ ಕೂಡಲೇ ಅದು ನಾಗರಿಕ ಸಮಾಜದ ಎಲ್ಲಾ ಅಂಗಗಳಲ್ಲೂ ತನ್ನ ಪ್ರಭಾವವನ್ನು ಬೀರಲು ಪ್ರಯತ್ನಿಸುತ್ತದೆ. ರಾಷ್ಟ್ರ-ಪ್ರಭುತ್ವದ ಎಲ್ಲಾ ಸಾಧನೆ-ಸಲಕರಣೆಗಳನ್ನೂ ತನ್ನ ಉದ್ದೇಶಕ್ಕೆ ಬಳಸಿಕೊಂಡು ಅವುಗಳನ್ನು ಕೋಮುವಾದದಿಂದ [illegible]

ಬಹಳ ಕಷ್ಟದ ಕೆಲಸ. ಇದನ್ನು ಸ್ವಲ್ಪವೂ ಅರ್ಥಮಾಡಿಕೊಳ್ಳದೆ, ಚಂದ್ರಬಾಬು ನಾಯ್ಡು ಮುಂತಾದವರು ಕೋಮುಪಕ್ಷಗಳಿಗೆ ಬೆಂಬಲ ನೀಡುತ್ತಾ, ತನ್ಮೂಲಕ ತಮ್ಮ ಬೇರುಗಳನ್ನು ತಾವೇ ಕಡಿದುಕೊಳ್ಳಲು ಮುಂದಾಗಿದ್ದಾರೆ.

ಪ್ರ : ಈ ಹಿನ್ನೆಲೆಯಲ್ಲಿ ಕೋಮುವಾದಕ್ಕೂ ಸಾಮ್ರಾಜ್ಯಶಾಹಿಗೂ ಇರುವ ಅಂತರಾಳದ ಸಂಬಂಧವನ್ನು ನೀವು ಹೇಗೆ ಅರ್ಥೈಸುತ್ತೀರಿ?

**ಕೆ. ಎನ್** : ತನ್ನ ತಾತ್ವಿಕತೆಯಲ್ಲಿ ಕೋಮುವಾದ ಯಾವಾಗಿನಿಂದಲೂ ವಸಾಹತುಶಾಹಿ ಸಾಮ್ರಾಜ್ಯಶಾಹಿ ಪರವೇ. ಅದರ ಇಡೀ ಇತಿಹಾಸದಲ್ಲಿ ಯಾವುದೇ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟದಲ್ಲಿ ಭಾಗವಹಿಸಿದ ಪುರಾವೆ ಅದಕ್ಕಿಲ್ಲ. ೧೯೪೭ ರಿಂದ ೧೯೯೦ರವರೆಗೆ ಅಮೆರಿಕ ವಿರುದ್ಧ ಅದು ಮಾತನಾಡುತ್ತಾ ಬಂದಿದೆ ಯಾದರೂ ಅವರ ಸ್ವದೇಶಿ ತತ್ವ ಜಾಗತೀಕರಣದ ವಿರುದ್ಧದ ನಿಲುವಿನಿಂದ ಮೂಡಿ ಬಂದಂಥದ್ದಲ್ಲ. ಹಾಗೆ ನೋಡಿದರೆ ಕಾಂಗ್ರೆಸ್ಸಿನ ಜಾಗತೀಕರಣದ ನಿಲುವಿಗಿಂತಲೂ ಭಾಜಪದ ಜಾಗತೀಕರಣ ವಾದ ಹೆಚ್ಚು ಅಪಾಯಕಾರಿಯಾದದ್ದು. ಎಲ್ಲಾ ಆಳುವ ವರ್ಗಗಳೂ ಇನ್ನೂ ಸಂಪೂರ್ಣ ಕೋಮುವಾದಿಯಾಗಿಲ್ಲ. ಹೀಗಿರುವಾಗ ಭಾಜಪ ಒಂದು ಕಡೆ ಹಿಂದೂ ಕೋಮುವಾದಿಗಳನ್ನೂ, ಇನ್ನೊಂದೆಡೆ ಸಂಪೂರ್ಣ ಜಾಗತೀಕರಣದ ಪರ ಇರುವ ಆಳುವ ವರ್ಗಗಳನ್ನೂ ಒಟ್ಟಿಗೇ ತನ್ನ ಜತೆ ಕರೆದೊಯ್ಯಬೇಕಿದೆ. ಆಳುವ ವರ್ಗದ ಆಸಕ್ತಿಗಳ ವಿಭಜನೆಯ ಮೂಲಕ, ವಿಭಿನ್ನ ಗುಂಪುಗಳನ್ನು ಒಂದೆಡೆ ಸೇರಿಸಲು ಅದು ಯತ್ನಿಸುತ್ತಿದೆ. ವಿಶ್ವ ಹಿಂದೂ ಪರಿಷತ್ ಮತ್ತು ಆರ್.ಎಸ್.ಎಸ್.ನಂತಹ ಮೂಲಭೂತವಾದಿ ಗುಂಪುಗಳಿಗೆ ಮುಸ್ಲಿಂರನ್ನು ಮತ್ತು ಕ್ರಿಶ್ಚಿಯನ್‌ರನ್ನು ಭಾರತದಿಂದ ನಿವಾರಿಸುವ ಬಯಕೆ ಎಷ್ಟೇ ಇದ್ದರೂ, ಹಿಂದೂ ಕೋಮುವಾದದ ರಾಜಕೀಯ ಆಕಾಂಕ್ಷೆಗಳು ಫಲಿತವಾಗಬೇಕಿದ್ದಲ್ಲಿ, ಅದು ಮುಸ್ಲಿಂ ಮತ್ತು ಕ್ರಿಶ್ಚಿಯನ್ ವಿರೋಧಿ ನಿಲುವನ್ನು ಮೀರಿ ಹೋಗ ಬೇಕಾಗುತ್ತದೆ. ಆದ್ದರಿಂದ ಹಿಂದೂ ಕೋಮುವಾದದ ನಿಜವಾದ ಉದ್ದೇಶ ಹಿಂದುಗಳ ಸಂಘಟನೆಯೇ. ಮುಸ್ಲಿಂ ಅಥವಾ ಕ್ರಿಶ್ಚಿಯನ್ ವಿರೋಧಿ ನಿಲುವು ಈ ಉದ್ದೇಶಕ್ಕೆ ಬೇಕಾದ ಸಾಧನ ಮಾತ್ರ ಎಂಬುದನ್ನು ನಾವು ಅರಿಯಬೇಕು. ಆದ್ದರಿಂದ ಅರಬ್ ರಾಷ್ಟ್ರಗಳ ಮೂಲಭೂತವಾದಕ್ಕೂ ಹಿಂದೂ ಕೋಮುವಾದಕ್ಕೂ ಬಹಳ ವ್ಯತ್ಯಾಸಗಳಿವೆ.

ಪ್ರ : ಮೂಲಭೂತವಾದ ಆಧುನಿಕತೆಗೆ ವಿರೋಧವಾದದ್ದಲ್ಲವೆ ?

**ಕೆ. ಎನ್** : ನಾವು 'ಆಧುನಿಕ'ವಾಗಿರುವುದಕ್ಕೂ, 'ಆಧುನಿಕ'ತೆಯನ್ನು ಒಪ್ಪುವುದಕ್ಕೂ ಒಂದು ವ್ಯತ್ಯಾಸವನ್ನು ಗುರುತಿಸಬೇಕು. ಹಿಂದೂ ಕೋಮುವಾದ ಆಧುನಿಕತೆಯ ಎಲ್ಲಾ ಆವಿಷ್ಕಾರಗಳನ್ನೂ ಬಳಸಿಕೊಳ್ಳುತ್ತದೆ ; ಆದರೆ ಅದು ಆಧುನಿಕ ಅಲ್ಲ. ಉದಾಹರಣೆಗೆ ಸಂವಿಧಾನದ ಪುನರ್‌ರಚನೆಯ ಪ್ರಯತ್ನವನ್ನೇ ಗಮನಿಸಿ. ವಿಶ್ವ ಹಿಂದೂ ಪರಿಷತ್ ಮತ್ತು ಆರ್.ಎಸ್.ಎಸ್.ಗಳು ಮನುವಾದಿಗಳೇ ವಿದ್ಯಾರ್ಥಿ ಪರಿಷತ್ತು ಒಂದು ಹೊಸ ಹಿಂದೂ ಪರ ಸಂವಿಧಾನವನ್ನೇ ರಚಿಸಿದೆ. ಸಂವಿಧಾನ ಆಧುನಿಕತೆಯ ಒಂದು ಕೂಸು. ಆದರೆ ಹಿಂದುತ್ವವಾದಿಗಳ ಪುನರ್‌ರಚನೆಯ ಪ್ರಯತ್ನ ಮಾತ್ರ 'ಆಧುನಿಕ'ತೆಯ ವಿರೋಧಿಯಾದದ್ದು. ಹಿಂದುತ್ವವಾದ ಒಂದು ಮತಾಧಾರಿತ ಸಮಾಜವನ್ನು ಕಟ್ಟಲು ಬಯಸುತ್ತದೆ, ಇದು ಖಂಡಿತ ಆಧುನಿಕ ಕ್ರಮವಲ್ಲ. ಇಡೀ ಸಂವಿಧಾನ ಪುನರ್‌ರಚನೆಯ ವಿವಾದದ ಉದ್ದೇಶ, ಬಹುಶಃ ಸಂವಿಧಾನವನ್ನು ತಿದ್ದಲೇಬೇಕು ಎನ್ನುವ ಮನಃಸ್ಥಿತಿಯನ್ನು, ಅದರ ಪರ ಜನಾಭಿಪ್ರಾಯವನ್ನು ಮೂಡಿಸುವ ಪ್ರಯತ್ನವೇ ವಿನಾ ಅದನ್ನು ಈಗಲೇ ತಿದ್ದಬೇಕು ಎನ್ನುವುದಲ್ಲ. ಒಂದು ಬಾರಿ ಇಂತಹ ಜನಾಭಿಪ್ರಾಯವನ್ನು ಮೂಡಿಸಲು ಸಫಲವಾದಲ್ಲಿ, ಅದನ್ನು ಹೇಗೆ, ಎಲ್ಲಿ ತಿದ್ದಬೇಕು ಎನ್ನುವುದು ಅಷ್ಟೇನೂ ದೊಡ್ಡ ಶ್ರಮದ ಕೆಲಸವಲ್ಲ. ಈ ಇಡೀ ಸಂವಿಧಾನ ಪುನರ್‌ರಚನೆಯ ಪ್ರಯತ್ನ ಒಂದು ಮುಕ್ತಾಯದ ಮುಂಚಿನ ಆಟವಿದ್ದಂತೆ ! ಅಂತಿಮ ಪಂದ್ಯವೇ ನಿಜವಾದದ್ದು !

ಪ್ರ : ಕೋಮುವಾದ ಹೀಗೆ ದಿನನಿತ್ಯದ ಬದುಕಿನಲ್ಲಿ, ಸಾರ್ವಜನಿಕ ಕ್ಷೇತ್ರಗಳಲ್ಲಿ, ಪ್ರವೇಶ ಪಡೆಯುತ್ತಿರುವ ಈ ಸಂದರ್ಭದಲ್ಲಿ ಇದನ್ನು ಎದುರಿಸುವ ಬಗೆ ಹೇಗೆ? ನಮ್ಮ ಕೋಮುವಾದಿ ವಿರೋಧಿ ಹೋರಾಟದ ನೆಲೆ ಯಾವುದಿರಬೇಕು?

**ಕೆ. ಎನ್** : ಕೋಮು-ವಿರೋಧಿಯಾಗಿ ಅಂತೂ ಅಲ್ಲ, ಬದಲಿಗೆ ಸೆಕ್ಯುಲರ್ (ಧರ್ಮ ನಿರಪೇಕ್ಷ) ಆಗಿ! ಈಗ ನಿಜವಾದ ಅಂತಹ ಪಕ್ಷಗಳೇ ಇಲ್ಲವಾಗಿವೆ. ಬಿಜೆಪಿ ಹೊರತಾದ ಪಕ್ಷಗಳು ಧರ್ಮನಿರಪೇಕ್ಷತೆಯನ್ನು ಕೇವಲ ಪ್ರಣಾಳಿಕೆಯಾಗಿ ಇಟ್ಟುಕೊಂಡಿವೆಯೇ ವಿನಾ ಅದನ್ನು ಒಂದು ಗಂಭೀರವಾದ ತಾತ್ವಿಕ ಆಯ್ಕೆಯಾಗಿ ಸ್ವೀಕರಿಸಿಲ್ಲ. ಎಡ ಪಕ್ಷಗಳು ಮಾತ್ರ ಸೆಕ್ಯುಲರ್ ತತ್ವಕ್ಕೆ ಬದ್ಧವಾಗಿವೆ.

ಕೋಮು ಪಕ್ಷಗಳಿಗೆ ಈಗ ನಾಗರಿಕ ಸಮಾಜದ ಮೂಲಕ ಮಾತ್ರ ತಾನು ಅಧಿಕಾರದ ಗದ್ದುಗೆಯನ್ನು ಏರಲು ಸಾಧ್ಯವೆಂದು ಮನವರಿಕೆಯಾಗಿದೆ. ಆದರೆ ದುರಂತವೆಂದರೆ ಯಾವುದೇ ರಾಜಕೀಯ ಪಕ್ಷಗಳು ನಾಗರಿಕ ಸಮಾಜದ ಜತೆ ಸಾಮೀಪ್ಯದಿಂದ ಕೆಲಸ ಮಾಡುತ್ತಿಲ್ಲ. ಎಲ್ಲಾ ಸೆಕ್ಯುಲರ್ ಶಕ್ತಿಗಳೂ ಸಹ ಜನಸಾಮಾನ್ಯರಲ್ಲಿ ಸ್ವಾಭಾವಿಕವಾಗಿಯೇ ಇರುವ ಸೆಕ್ಯುಲರ್ ಗುಣಗಳನ್ನೇ ಆಧರಿಸಿ, ಅದು ಕೋಮುಶಕ್ತಿಗಳಿಂದ ನಾಶವಾಗದಂತೆ ರಕ್ಷಿಸಬೇಕಾಗಿದೆ. ಸಾಮಾನ್ಯ ಜನರ ಸೆಕ್ಯುಲರ್ ಮನೋಧರ್ಮಕ್ಕೆ ರಾಜಕೀಯ ಅಭಿವ್ಯಕ್ತಿ ಇಲ್ಲ. ಈ ಕೆಲಸವನ್ನು ಸೆಕ್ಯುಲರ್ ಶಕ್ತಿಗಳು ಮಾಡಬೇಕಿದೆ.

ಪ್ರ : ಅಂದರೆ, ಈ ದೇಶದ ಸಾಮಾನ್ಯ ಜನ ಸಹಜವಾಗಿಯೇ 'ಸೆಕ್ಯುಲರ್' ಆಗಿದ್ದಾರೆಂದು ನಿಮ್ಮ ಅಭಿಮತವೇ? ಇದರಲ್ಲಿ ಧಾರ್ಮಿಕ ನಂಬುಗೆಯ ಪಾತ್ರವೇನು? ಒಂದು ಕಡೆ ಧಾರ್ಮಿಕತೆ ಇನ್ನೊಂದೆಡೆ ಧರ್ಮನಿರಪೇಕ್ಷತೆ - ಇವೆರಡೂ ಒಟ್ಟಿಗೇ ಇರಲು ಸಾಧ್ಯವೆ?

**ಕೆ. ಎನ್** : ಜನರಲ್ಲಿರುವ ಸಹಜ ಧರ್ಮ ನಿರಪೇಕ್ಷತೆ ಅವರ ದಿನನಿತ್ಯದ ಜೀವನದ ಅನುಭವದಿಂದ ಮೂಡಿಬಂದಿರುವ ವಿವೇಕವೇ ಹೊರತು, ಅದೊಂದು ತಾತ್ವಿಕತೆಯಿಂದ ರೂಪಿತವಾದ ಮನೋಧರ್ಮವಾಗಿ ಅಲ್ಲ. ಸಂದರ್ಭಕ್ಕೆ ಅನುಗುಣವಾಗಿ ನಂಬಿಕೆಗಳೂ ಬದಲಾಗುತ್ತವೆ. ಕೋಮುವಾದ ಉಂಟುಮಾಡುವ ಅಪನಂಬಿಕೆ ಜನಸಾಮಾನ್ಯರ ಸಹಜಗುಣವಾದ ಧರ್ಮ ಸಹಿಷ್ಣುತೆಯನ್ನು ನಾಶ ಮಾಡಿಬಿಡಬಹುದು. ಧರ್ಮ ನಿರಪೇಕ್ಷತಾ ತತ್ವ ಜನಸಾಮಾನ್ಯರಲ್ಲಿರಬಹುದಾದ ಸೆಕ್ಯುಲರ್ ಮನೋಭಾವಕ್ಕೆ ಒಂದು ವಿಚಾರವಾದದ ತಳಹದಿಯನ್ನು ನಿರ್ಮಿಸಿ ಪರಧರ್ಮವನ್ನು, ಇತರರ ಧಾರ್ಮಿಕ ನಂಬುಗೆಗಳನ್ನು ಗೌರವಿಸುವಂಥ ವಾತಾವರಣ ಸೃಷ್ಟಿಯಾಗುವತ್ತ ಶ್ರಮಿಸಬೇಕು.

ಇಂತಹ ಕೆಲಸ ಬಹುಮಟ್ಟಿಗೆ ಸಾಧ್ಯವಾಗುವುದು ಸ್ಥಳೀಯ ನೆಲೆಗಳಲ್ಲಿ. ಸ್ಥಳೀಯ ಮಧ್ಯಪ್ರವೇಶದ ಮೂಲಕ ಮಾತ್ರ ಕೋಮುಶಕ್ತಿಗಳನ್ನು ಎದುರಿಸಲು ಸಾಧ್ಯ. ಕೋಮುವಾದಿಗಳು ಕೂಡ ಸಣ್ಣ, ಸಣ್ಣ ಗುಂಪುಗಳನ್ನು ಪ್ರಚೋದಿಸುವ ಮೂಲಕ ತಮ್ಮ ಬಲ ಸಂವರ್ಧನೆಯನ್ನು ಮಾಡಿಕೊಳ್ಳುತ್ತಾ ಬಂದಿದ್ದಾರೆ. ಆದ್ದರಿಂದಲೇ ಕೋಮು ವಿರೋಧಿ ವಿಚಾರವಾದಿ ಗುಂಪುಗಳು ಅದೆಷ್ಟೇ ಸಣ್ಣ ಪ್ರಮಾಣದಲ್ಲಿ ಕೆಲಸ ಮಾಡಲಿ, ಅದರ ಪ್ರಭಾವ ಮತ್ತು ಉಪಯೋಗ ಮಹತ್ವದ್ದೇ. ಸ್ಥಳೀಯ ಪ್ರತಿಭಟನೆಯಿಂದ ಮಾತ್ರ ಕೋಮು ಶಕ್ತಿಗಳ ಮುನ್ನಡೆಯನ್ನು ಯಶಸ್ವಿಯಾಗಿ ತಡೆಗಟ್ಟಲು ಸಾಧ್ಯ. ಇತಿಹಾಸ ಮಂಡಲಿ ವಿವಾದದಲ್ಲಿ ಬಂದ ಪ್ರತಿಭಟನೆಯೇ ಇದಕ್ಕೆ ಸಾಕ್ಷಿ. ಈ ವಿವಾದದಲ್ಲಿ ಹೊರಬಿದ್ದ ಅತ್ಯಂತ ಸಮಾಧಾನಕರ ಅಂಶವೆಂದರೆ ಈ ದೇಶದಲ್ಲಿ ಸೆಕ್ಯುಲರ್ ಶಕ್ತಿ ಮತ್ತು ವಿಚಾರವಂತರ ಗುಂಪುಗಳು ಇನ್ನೂ ಜೀವಂತವಾಗಿವೆ ಎನ್ನುವುದು. ಒಂದು ಕಡೆ ರಾಷ್ಟ್ರೀಯ ಮತ್ತು ಸ್ಥಳೀಯ ಮಾಧ್ಯಮಗಳು ಈ ವಿವಾದಕ್ಕೆ ದೊಡ್ಡ ಪ್ರಚಾರ ನೀಡಿದವು. ಇನ್ನೊಂದೆಡೆ ಯಾರ ಒತ್ತಡ, ಸಂಘಟನೆ ಇಲ್ಲದೆಯೂ ಅನೇಕ ವಿಚಾರವಾದಿ ಗುಂಪುಗಳು, ಬುದ್ಧಿಜೀವಿಗಳು, ಶೈಕ್ಷಣಿಕ ತಜ್ಞರು, ಕೋಮುವಾದಿಗಳಿಂದ ಚರಿತ್ರೆಯ ಮೇಲೆ ಆದ ಈ ಹಲ್ಲೆಯನ್ನು ಪ್ರತಿಭಟಿಸಿದರು. ಇದೊಂದು ಆಶಾದಾಯಕ ಸಂಗತಿಯೇ.

ಪ್ರ : ಅಧಿಕಾರ ಗ್ರಹಣ ಕೋಮುವಾದದ/ ಕೋಮು ಪಕ್ಷಗಳ ಗುರಿಯಾದರೂ, ಅದಕ್ಕಿಂತ ಮೀರಿದ ಒಂದು ಆಳವಾದ ಉದ್ದೇಶವಿರುವಂತಿದೆ. ಕೋಮುವಾದದ ನಿಜವಾದ ಬೇರು ಫ್ಯಾಸಿಸಂನಲ್ಲಿದೆ ಎಂದೆನಿಸುತ್ತದೆ. ನಿಮ್ಮ ಅಭಿಪ್ರಾಯದಲ್ಲಿ ಕೋಮುವಾದಕ್ಕೂ, ಫ್ಯಾಸಿಸಂಗೂ ಇರಬಹುದಾದ ಅಂತರ್ ಸಂಬಂಧ ಎಂಥದ್ದು ?

**ಕೆ. ಎನ್** : ಫ್ಯಾಸಿಸಂಗೆ ಹಲವಾರು ಮಾರ್ಗಗಳಿವೆ. ಅದು ತನ್ನ ಗುರಿ ಸಾಧನೆಗಾಗಿ ಅನೇಕ ವೇಷಗಳನ್ನು ಧರಿಸಬಲ್ಲದು. ನಮ್ಮ ದೇಶದಲ್ಲಿ ಫ್ಯಾಸಿಸಂ ಕೋಮುವಾದದ ರೂಪವನ್ನು ತಾಳುವ ಎಲ್ಲಾ ಸೂಚನೆಗಳೂ, ''ಅರ್ಹತೆ''ಗಳೂ ಇವೆ. ಇದು ಸಾಮಾನ್ಯವಾಗಿ ಎರಡು ರೀತಿಯಲ್ಲಿ ಸಂಭವಿಸುತ್ತದೆ. ಒಂದು, ಅವೈಚಾರಿಕ ಆಚರಣೆಗಳಿಂದ, ಇನ್ನೊಂದು ಒತ್ತಡ ಮತ್ತು ಬಲ ಪ್ರದರ್ಶನದಿಂದ. ಇವೆರಡನ್ನೂ ಅತ್ಯಂತ ಮುತುವರ್ಜಿಯಿಂದ ಹಿಂದೂ ಕೋಮುವಾದ ಮಾಡುತ್ತಾ ಬಂದಿರುವು

ದನ್ನು ಗಮನಿಸಿದರೆ ಅದರ ಫ್ಯಾಸಿಸ್ಟ್ ಸ್ವರೂಪ ಬಯಲಾಗುತ್ತದೆ. ಇವರ ಅವೈಚಾರಿಕ ಆಚರಣೆಗೆ ದೊಡ್ಡ ಉದಾಹರಣೆ ಎಂದರೆ, ಇವತ್ತಿನವರೆಗೂ, ಹಿಂದುತ್ವ ವಾದಿಗಳಿಗೆ ತಮ್ಮ ಕೋಮುವಾದ ಜನರಿಗೆ ಕ್ಷೇಮ ಮತ್ತು ನೆಮ್ಮದಿಯನ್ನು ಹೇಗೆ ತಂದುಕೊಡಬಲ್ಲದು ಎಂಬುದನ್ನು ವಿವರಿಸಲು ಸಾಧ್ಯವಾಗಿಲ್ಲ. ಜನಸಾಮಾನ್ಯರ ಏಳಿಗೆಗೆ ಬೇಕಾದ ಕಿಂಚಿತ್ ಅಂಶವೂ ಅವರ ವಾದದಲ್ಲಿಲ್ಲ. ಆದ್ದರಿಂದ ತಮ್ಮ ಗುರಿಸಾಧನೆಗಾಗಿ ಅವರು ಬಲಪ್ರದರ್ಶನ ಮತ್ತು ಒತ್ತಡವನ್ನು ಬಳಸದೆ ವಿಧಿಯಿಲ್ಲ. ಆಳುವ ವರ್ಗದ ಐಡಿಯಾಲಜಿಯಾದ ಹಿಂದುತ್ವವನ್ನು ಎಲ್ಲರ ಮೇಲೂ –ನಾಜಿಗಳು ತಮ್ಮ ಆರ್ಯನ್ ಪಾರಮ್ಯತೆಯ ಥಿಯರಿಯನ್ನೇ ಎಲ್ಲರ ಮೇಲೂ ಹೇರಿದ ಹಾಗೆ – ಹೇರುತ್ತಾ, ಸರ್ವಾಧಿಕಾರದತ್ತ ಮುನ್ನುಗ್ಗುವುದು ಒಂದು ಟಿಪಿಕಲ್ ಫ್ಯಾಸಿಸ್ಟ್ ತಂತ್ರವಲ್ಲದೆ ಬೇರೇನೂ ಅಲ್ಲ.

**ಪ್ರ** : ಈಗ ಹಿಂದೂ ಕೋಮುವಾದದ ರೂಪದಲ್ಲಿ ಫ್ಯಾಸಿಸಂ ತಲೆ ಎತ್ತುತ್ತಿರುವ ಸಂದರ್ಭದಲ್ಲಿ ದೇಶದಲ್ಲಿನ ಸೆಕ್ಯುಲರ್ ಶಕ್ತಿಗಳಿಗೆ ಮುಂದೆ ಎಂಥ ಭವಿಷ್ಯವಿದೆ ?

**ಕೆ. ಎನ್** : ಪ್ರಗತಿಪರ ವಿಚಾರಗಳ ಮಧ್ಯಪ್ರವೇಶ ವಿಲ್ಲದೆ ಇದ್ದರೆ, ಕೋಮುವಾದ ನಿಶ್ಚಯವಾಗಿ ಫ್ಯಾಸಿಸಂ ಹಾದಿ ಹಿಡಿಯುತ್ತದೆ. ಮುಂದಿನ ಒಂದೆರಡು ವರ್ಷಗಳಲ್ಲಿ ಇಂಡಿಯಾ ಮತ್ತು ಪಾಕಿಸ್ತಾನದ ನಡುವೆ ಯುದ್ಧ ವೇನಾದರೂ ಸಂಭವಿಸಿದಲ್ಲಿ ಬಿಜೆಪಿ ಸಂಪೂರ್ಣವಾಗಿ ಬಹುಮತ ಪಡೆಯುವ ಎಲ್ಲಾ ಸಾಧ್ಯತೆಗಳೂ ಇದೆ. ಆದರೆ ನಾನು ಚರಿತ್ರೆಯ ಅನಿವಾರ್ಯತೆಯ ಬಗ್ಗೆ ನಂಬಿಕೆ ಇರುವವನಲ್ಲ. ಮಾನವನ ಮಧ್ಯಪ್ರವೇಶದಿಂದ ಚರಿತ್ರೆ ಕೂಡ ಬದಲಾಗುವುದು. ಎಲ್ಲಾ ಸೆಕ್ಯುಲರ್ ಶಕ್ತಿಗಳು - ಅಂದರೆ ಕೇವಲ ರಾಜಕೀಯ ಪಕ್ಷಗಳು ಮಾತ್ರವಲ್ಲ - ಒಂದುಗೂಡಿದರೆ ಭಾಜಪವನ್ನು ಅಧಿಕಾರದಿಂದ ಕಿತ್ತೊಗೆಯಬಹುದು. ಹಾಗಿದ್ದರೂ ಸೆಕ್ಯುಲರ್ ಶಕ್ತಿಗಳ ಪುನರ್ ಸಂಯೋಜನೆ ಎರಡು ವಿಧಾನಗಳಲ್ಲಿ ಆಗಬೇಕಿದೆ. ಒಂದು, ಸಾಮ್ರಾಜ್ಯಶಾಹಿ ವಿರೋಧಿಯಾಗುವ ಮೂಲಕ, ಇನ್ನೊಂದು, ಬಡಜನತೆಯ ಪರವಾದ ನೀತಿಯನ್ನು ತಳೆಯುವುದರ ಮೂಲಕ. ಇವೆರಡಕ್ಕೂ ಮೂಲಭೂತ ವಾದ ಬೃಹತ್ ಕಾರ್ಯವೆಂದರೆ, ಕೇವಲ ರಾಜಕೀಯ ವಲಯದಲ್ಲಿ ಮಾತ್ರವಲ್ಲದೆ, ಬಹುಮುಖ್ಯವಾಗಿ ಸಾಮಾಜಿಕ ಮತ್ತು ಆರ್ಥಿಕ ನೆಲೆಗಳಲ್ಲಿ ಪ್ರಜಾ ಪ್ರಭುತ್ವವನ್ನು ಸೃಷ್ಟಿಸುವುದು.

**ಪ್ರ** : ಆದರೆ ಇಂದು ಎಲ್ಲಾ ಥರದ ರಾಜಕೀಯ ಪಕ್ಷಗಳೂ ಜಾಗತೀಕರಣವನ್ನು ಅನಿವಾರ್ಯವೆಂದು ಒಪ್ಪಿಕೊಂಡಿರುವ ಈ ಸಂದರ್ಭದಲ್ಲಿ, ಸಾಮ್ರಾಜ್ಯ ಶಾಹಿಯನ್ನು ವಿರೋಧಿಸಲು ಹೇಗೆ ಸಾಧ್ಯ?

**ಕೆ. ಎನ್** : ಜಾಗತೀಕರಣದ ವಿರೋಧವೆಂದರೆ, ಪರದೇಶದ ಬಂಡವಾಳಕ್ಕೆ ಸಂಪೂರ್ಣ ನಿಷೇಧ ಎನ್ನುವುದಲ್ಲ. ಕೊಂಚಮಟ್ಟಿಗೆ ಜಾಗತೀಕರಣ ಅನಿವಾರ್ಯ. ಆದರೆ ಅದು ರಾಷ್ಟ್ರ-ಪ್ರಭುತ್ವದ ಸಾಮರ್ಥ್ಯವನ್ನೇ ಕುಗ್ಗಿಸುವ ಮಟ್ಟದಲ್ಲಿ ಆಗಬಾರದು. ಒಂದು ರಾಷ್ಟ್ರಕ್ಕೆ ತನಗೆ ಬೇಕಾದ ವಿದೇಶಿ ಬಂಡವಾಳ ಹೂಡಿಕೆಯನ್ನು ನಿರ್ಧರಿಸುವ ಶಕ್ತಿ, ಸಾಮರ್ಥ್ಯಗಳು ಇರಬೇಕಾದುದು ಅತ್ಯವಶ್ಯ. ಜಾಗತೀಕರಣದ ನಿರಾಕರಣೆ ಎಂದರೆ ಪ್ರತ್ಯೇಕತಾ ನೀತಿಯನ್ನೇ ಪಾಲಿಸಬೇಕು ಎಂದೇನೂ ಇಲ್ಲವಲ್ಲ ?

**ಪ್ರ** : ಆದರೆ ಇಂದಿನ ವಿಶ್ವ ವ್ಯಾಪಾರ ಸಂಸ್ಥೆಯ ನಿರ್ಬಂಧಗಳನ್ನು ನೋಡಿದರೆ ನೀವು ಹೇಳಿದ ಆಯ್ಕೆಗೆ ಏನಾದರೂ ಅವಕಾಶವಿರಲು ಸಾಧ್ಯವೆ?

**ಕೆ. ಎನ್** : ಅದು ಅಂತರರಾಷ್ಟ್ರೀಯ ಒತ್ತಡವನ್ನು ನಾವು ಹೇಗೆ ನಿರ್ವಹಿಸುತ್ತೇವೆ ಎನ್ನುವುದರ ಮೇಲೆ ನಿಂತಿದೆ. ಅಂತರರಾಷ್ಟ್ರೀಯ ಬಂಡವಾಳಶಾಹಿ ಇಂದು ಭಾರತದಂಥ ಮಾರುಕಟ್ಟೆಯನ್ನು ಕಳೆದುಕೊಳ್ಳಲು ಸಿದ್ಧವಿಲ್ಲ. ಇದು ನಮ್ಮ ದೇಶಕ್ಕೆ ಬೇಕಾದ ಸುಧಾರಣೆಯನ್ನು ಮಾಡಿಕೊಳ್ಳಲು ಅವಕಾಶವನ್ನು ನೀಡುತ್ತದೆ. ಇದರೊಟ್ಟಿಗೆ ತಳುಕು ಹಾಕಿಕೊಂಡಿರುವ ಅತ್ಯಂತ ಮುಖ್ಯ ವಿಷಯವೆಂದರೆ ನಾವು ನಮ್ಮ ದೇಶಕ್ಕೆ ಯಾವ ರೀತಿಯ ಆಧುನಿಕತೆಯನ್ನು, ಪ್ರಗತಿಯ ಮಾದರಿಯನ್ನು ಆಯ್ದುಕೊಳ್ಳಬೇಕಾಗಿದೆ ಎನ್ನುವುದು. ನಮಗೆ ಸಂಪನ್ಮೂಲಗಳ ಸಮಾನ ವಿತರಣೆ, ಸಮಾನ ಹಕ್ಕು ಎಂಬ ತತ್ವದಲ್ಲಿ ನಂಬಿಕೆ ಇದ್ದರೆ, ಬಂಡವಾಳಕ್ಕೆ ಕೊರತೆಯೇ ಇಲ್ಲ.

**ಶಿವಸುಂದರ್, ಶ್ರೀಧರ ವಿ. ಎಸ್.**
ನಂ. ೧, ಮೂರನೇ ಕ್ರಾಸ್, ಅಶೋಕ ನಗರ
ಬನಶಂಕರಿ ೧ನೇ ಹಂತ, ಬೆಂಗಳೂರು - ೫೦

# ರಾಕ್ಷಸರು ಯಜ್ಞಕುಂಡದಲ್ಲೇ ಏಕೆ ಮಾಂಸ ಎಸೆಯಬೇಕಿತ್ತು?

*ದೇವ-ಮಾನವ-ರಾಕ್ಷಸರ ಪರಸ್ಪರ ಸಂಬಂಧಗಳು ಜೀವನ ಕ್ರಮವನ್ನು ಸಕ್ರಮಗೊಳಿಸುವ ತರ್ಕಬದ್ಧ ನಿರೂಪಣೆಗಳಂತೆ ತೋರುತ್ತವೆ. ರಾಕ್ಷಸರೂ ಕೆಲವೊಮ್ಮೆ ದೇವತೆಗಳನ್ನು ಒಲಿಸಿಕೊಂಡರೆಂದು ಹೇಳುತ್ತಾರೆ. ಆದರೆ ಅವರದೆಂದೂ ಗಟ್ಟಿ ಸಂಬಂಧವಾಗಲಿಲ್ಲ. ಅಂತೆಯೇ, ಮಾನವರು-ರಾಕ್ಷಸರು ಆತ್ಮೀಯರಾದದ್ದು ಅಪರೂಪ. ಹೀಗೇಕಿರಬೇಕೆಂಬುದರ ಒಂದು ಜಿಜ್ಞಾಸೆ ಅಗತ್ಯವಾಗಿದೆ. ಅದು ಚಾರಿತ್ರಿಕ ಸತ್ಯವೇ ಆಗಿರಬೇಕೆಂಬ ಆಗ್ರಹವಿಲ್ಲದಿದ್ದರೆ ಕುತೂಹಲಕರ ಪ್ರಶ್ನೆಗಳನ್ನೆತ್ತಲು ಸಾಹಿತ್ಯದಲ್ಲಿ ಸಾಮಗ್ರಿ ಇದೆ. ಜಿಜ್ಞಾಸೆ ಈ ರೂಪದಲ್ಲಿಯೂ ಇರಲು ಸಾಧ್ಯವಿದೆಯಲ್ಲವೆ? ಈ ಮಾದರಿಯಲ್ಲಿ ನೀವೂ ತರ್ಕ ಬೆಳೆಸಬಲ್ಲಿರಾ?*

**ಕಂನಾಡಿಗಾ ನಾರಾಯಣ**

ರಾಮಾಯಣ, ಮಹಾಭಾರತಗಳೆರಡೂ ಭಾರತೀಯರ ಜೀವನಾಡಿಗಳಿದ್ದಂತೆ. ಇಲ್ಲಿನ ಘಟನೆಗಳು, ಸನ್ನಿವೇಶಗಳು ನಮ್ಮ ಮನಸ್ಸಿನಲ್ಲಿ ಹೇಗೆ ಅಚ್ಚೊತ್ತಿಬಿಟ್ಟಿವೆಯೆಂದರೆ, ಆ ಅಂಶಗಳ ಸತ್ಯಾಸತ್ಯತೆಯನ್ನು ವಿವೇಚಿಸಲೂ ನಮ್ಮ ಮನಸ್ಸು ಬಯಸುವುದಿಲ್ಲ. ಏಕೆಂದರೆ ಸಾವಿರಾರು ವರ್ಷಗಳಿಂದ ನಮ್ಮ ಹಿರೀಕರು ಇದು ಇರುವುದು ಹೀಗೆಯೇ ಎಂಬುದನ್ನು ನಮ್ಮ ತಲೆಯೊಳಗೆ ತುರುಕಿಬಿಟ್ಟಿದ್ದಾರೆ. ಅದನ್ನು ಅಷ್ಟು ಸುಲಭವಾಗಿ ನಿರಾಕರಿಸಲು ಅಥವಾ ತಿರಸ್ಕರಿಸಲು ನಾವು ಸಿದ್ಧರಿಲ್ಲ. ಆದರೆ ಈವತ್ತಿನ ಸಂದರ್ಭದಲ್ಲಿ, ಸಾಮಾಜಿಕ ನ್ಯಾಯದ ಬಗ್ಗೆ ಮಾತನಾಡುವ ನಾವು, ಸಾಕಷ್ಟು ವೈಜ್ಞಾನಿಕ ಹಾಗೂ ತಾಂತ್ರಿಕ ಪ್ರಗತಿಯನ್ನು ಸಾಧಿಸಿರುವ ನಾವು, ನಮ್ಮ ಪುರಾಣಗಳಲ್ಲಿ ಹೇಳಿರುವ ವಿಷಯಗಳಲ್ಲಿ ಎಷ್ಟು ಎಷ್ಟರಮಟ್ಟಿಗೆ ಸತ್ಯವಾಗಿದೆ ಎಂಬುದನ್ನು ವೈಜ್ಞಾನಿಕವಾಗಿ, ವೈಚಾರಿಕವಾಗಿ, ವಾಸ್ತವಿಕ ನೆಲೆಗಟ್ಟಿನಲ್ಲಿ ವಿವೇಚಿಸಬೇಕಾದ ಅಗತ್ಯ ಹಿಂದೆಂದಿಗಿಂತಲೂ ಇಂದು ಅಧಿಕವಾಗಿದೆ.

**ಈ 'ದೇವ'ರು - 'ರಾಕ್ಷಸ'ರು ಅಂದರೆ ಯಾರು ?**

ನಿಜ ರಾಕ್ಷಸರೆಂದರೆ ವಿಕಾರವಾಗಿರುವವರು, ದೊಡ್ಡ ದೇಹವುಳ್ಳವರು, ಕೋರೆಹಲ್ಲುಳ್ಳವರು..... ಎಲ್ಲಾ ನಿಜ. (ಸಹಜವಾಗಿ ಕಾಡಿನಲ್ಲಿ ವಾಸಿಸುವವರಾದ್ದರಿಂದ, ಅಲ್ಲಿನ ಅಗತ್ಯಕ್ಕೆ ತಕ್ಕಂತೆ, ಬೇಟೆಯಾಡಿದ ಮಾಂಸ ತಿನ್ನುತ್ತಿದ್ದರಿಂದ, ಅನಿಯಮಿತ ಆಹಾರ ಪದ್ಧತಿಯಿಂದಾಗಿ ದೇಹ ವಿಶಾಲವಾಗಿ ಬೆಳೆದಿರಬಹುದು. ಕಾಡಿನಲ್ಲಿ ಆಹಾರ ಅನ್ವೇಷಣೆ ಮತ್ತು ಪ್ರಾಣ ರಕ್ಷಣೆ ಎರಡೇ ಮುಖ್ಯ ಅಂಶಗಳಾದ್ದರಿಂದ, ಬಾಹ್ಯ ಸೌಂದರ್ಯದ ಬಗ್ಗೆ ಗಮನ ಕೊಡದೇ ಇದ್ದುದರಿಂದ ದೇಹ ವಿಕಾರವಾಗಿ ಬೆಳೆದಿರಬಹುದು. ಅಂತೆಯೇ ಪ್ರಾಣಿಗಳನ್ನು ಬೇಟೆಯಾಡಿ ಹಸಿ ಮಾಂಸವನ್ನೇ ಕಿತ್ತು ತಿನ್ನುತ್ತಿದ್ದುದರಿಂದಾಗಿ, ಕೋರೆಹಲ್ಲುಗಳ ಮೇಲೆ ಹೆಚ್ಚಿನ ಒತ್ತಡ ಬೀಳುತ್ತಿದ್ದುದರಿಂದಾಗಿ, ಸಹಜವಾಗಿಯೇ ಅವು ಉದ್ದುದ್ದ ಬೆಳೆಯುತ್ತಿದ್ದಿರಬೇಕು.) ಆದರೆ ಅವರು ಹಾಗೆ ಆಗಲು ಕಾರಣರಾದವರು ಯಾರು? ಈವತ್ತಿನ ಸಂದರ್ಭಕ್ಕಿಂತಲೂ ಆವತ್ತಿನ ಪರಿಸ್ಥಿತಿ ಅತ್ಯಂತ ವಿಷಮಯವಾಗಿತ್ತು. ಬಲವಿದ್ದವನು ಮಾತ್ರ ಬದುಕಲು ಸಾಧ್ಯವಿತ್ತು. ಹಾಗಾಗಿ 'ದೇವ'ರುಗಳೆಂಬ ಸುಸಂಸ್ಕೃತರು ಹಾಗೂ ನಾಗರಿಕರಾಗುವ ಹಂತದಲ್ಲಿದ್ದ ಮನುಷ್ಯರ ನಡುವೆ, ಅನಾಗರಿಕರಾದ, ಸಂಬಂಧ-ಸಂಘಟನೆಗಳನ್ನು ಅರಿಯದ, ನಿಷ್ಕಪಟಿಗಳಾದ, ಕಾಡಿನಲ್ಲಿ ಹುಟ್ಟಿ ಬೆಳೆದು, ಅಲ್ಲಿ ಸಿಗುವ ಪ್ರಾಣಿ ಪಕ್ಷಿ ಕಂದ ಮೂಲಾದಿಗಳನ್ನಷ್ಟೇ ತಿಂದು ಬದುಕುವುದನ್ನು ಕಲಿತಿದ್ದ ಕಾಡು ಮನುಷ್ಯರು ಏಗುವುದು ಅಷ್ಟು ಸುಲಭವಿರಲಿಲ್ಲ. ಸಾಮಾಜಿಕ ನೀತಿನಿಯಮಗಳೇನನ್ನೂ ಅರಿಯದ, ಅನಾಗರಿಕರಾದ ಈ ಕಾಡು ಮನುಷ್ಯರನ್ನು ಸುಸಂಸ್ಕೃತರಾದ ನಮ್ಮ 'ದೇವ'ರುಗಳು ತಮ್ಮ ಸಹಜ ಆಡುಭಾಷೆಯಾದ ಸಂಸ್ಕೃತದಲ್ಲಿ 'ರಾಕ್ಷಸ'ರು ಎಂದು ಹೆಸರಿಸಿರುವುದೇ ಒಂದು ವಿಪರ್ಯಾಸ.

ನಮಗೆ ತಿಳಿದುಬರುವ ಪೌರಾಣಿಕ ಕಥೆಯಂತೆ ದೇವರು ರಾಕ್ಷಸರು ಅಣ್ಣ ತಮ್ಮಂದಿರಂತೆ. ಮಾನವನ ಮೂಲಪುರುಷ ಎಲ್ಲೋ ಒಂದು ಕಡೆ ಒಬ್ಬನೇ ಆಗಿರುವ ಸಂಭವ ಇರುವುದರಿಂದ, ಅಲ್ಲಿಂದ ಹೊರಟ ದಾಯಾದಿಗಳ ಕವಲುಗಳು ಎರಡು ಮೂರು ವಿಭಿನ್ನ ಸಂಸ್ಕೃತಿಗಳಾಗಿ ಮಾರ್ಪಟ್ಟಿರಲು ಸಾಕು. ಹೀಗೆ ಹೊರಟ ಜನಾಂಗಗಳಲ್ಲಿ ಒಂದು ಗುಂಪು ಕಾಡು ಸೇರಿ ರಾಕ್ಷಸರಾಗಿರಬಹುದು; ಇನ್ನೊಂದು ಗುಂಪು ನಗರ ಸೇರಿ ನಾಗರಿಕರಾಗಿರಬಹುದು. ಅಂತೆಯೇ ಇವೆರಡನ್ನೂ ಮೀರಿಸುವಂತಹ, ಅವತ್ತಿನ ಕಾಲಕ್ಕೇ ಸುಸಂಸ್ಕೃತವೆನ್ನಬಹುದಾದಂತಹ, ಇನ್ನೊಂದು ಜನಾಂಗ ರೂಪುಗೊಂಡು ಇವೆರಡೂ ಗುಂಪುಗಳನ್ನು ದೈಹಿಕವಾಗಿ ದುರ್ಬಲರಾದ್ದರಿಂದ ಕೇವಲ ತನ್ನ ಬುದ್ಧಿಮತ್ತೆಯ ಬಲದಿಂದಲೇ ಆಳಿರಬಹುದು. ಇಂತಹ ಜನಾಂಗವಾದ 'ದೇವ'ರುಗಳು ಸುರಕ್ಷತೆಯ ದೃಷ್ಟಿಯಿಂದಲೇ ಹಿಮಾಲಯದ ತಪ್ಪಲನ್ನು ತಮ್ಮ ವಾಸಸ್ಥಳವಾಗಿ ಮಾಡಿಕೊಂಡಿರಬೇಕು. ಹೀಗೆ ಹಿಮಾಲಯದ ಭೂ ಪ್ರದೇಶ ಎತ್ತರದಲ್ಲಿರುವುದರಿಂದ 'ದೇವ'ರುಗಳು, ಕಾವ್ಯದ ಅನಿವಾರ್ಯ ಅಂಶವಾದ ಉತ್ಪ್ರೇಕ್ಷೆಯಿಂದಾಗಿ, 'ಮೇಲೆ' ವಾಸಿಸುವವರಾಗಿರಬೇಕು. ಎಂದೇ ಹಿಮಾಚ್ಛಾದಿತ ವಾತಾವರಣದಿಂದಾಗಿ ಹಾಗೂ ಬಿಸಿಲಿಗೆ ಒಡ್ಡದ ಕಾರಣಕ್ಕಾಗಿ ಅವರ ತೊಗಲು ಸದಾ ಬಿಳಿಯದ್ದಾಗಿದ್ದು ಇನ್ನಷ್ಟು ಗೌರವ ಮೂಡಲು ಕಾರಣವಾಗಿರಬೇಕು.

**ಏನಿದು ಕಾಮಧೇನು, ಕಲ್ಪವೃಕ್ಷ ?**

'ದೇವ'ರುಗಳ ಮೂಲ ಉದ್ಯೋಗ ವ್ಯಾಪಾರ. ರತ್ನಗಂಬಳಿ, ಕಾಮಧೇನು, ಕಲ್ಪವೃಕ್ಷ ಇವರ ಮಾರಾಟದ ವಸ್ತುಗಳು. ರತ್ನಗಂಬಳಿಯು ಸುಂದರವಾದ, ನಯವಾದ, ಆವತ್ತಿನ ಕಾಲಕ್ಕೆ ತುಂಬಾ ಆಕರ್ಷಕವಾದ ಬಟ್ಟೆಯಿಂದ ಮಾಡಿದ್ದ ಕಂಬಳಿಯಾಗಿದ್ದರೆ, ಕಾಮಧೇನು ಒಂದು ಜಾತಿಯ ಹಸು ಆಗಿದ್ದಿತು. ಈವತ್ತು ನಾವು ಸಿಂಧಿ ಹಸುಗಳು ಎಂದು ಏನು ಕರೆಯುತ್ತೇವೋ, ಬಹುಶಃ ಆ ಲಕ್ಷಣಗಳುಳ್ಳ ಹಸು ಅದು. ಸಾಮಾನ್ಯ ತಳಿಗಳಿಗಿಂತಲೂ ಅಧಿಕ ಹಾಲು ಕೊಡುತ್ತಿದ್ದಂತಹವುಗಳು. ಆದರೆ ಇಲ್ಲಿ ಒಂದು ಅಂಶವನ್ನು ನಾವು ಗಮನಿಸಬೇಕು. ಈವತ್ತಿನ ಪೇಟೆಂಟ್, ಗ್ಯಾಟ್ ಒಪ್ಪಂದಗಳಂತೆ ಹೇಗೆ ಬೀಜದ ಉತ್ಪಾದನೆ [illegible] ದೇಶಗಳಿಗೆ ಸೇರಿದ್ದಾಗಿದೆಯೋ ಹಾಗೆ ಈ ಕಾಮಧೇನುಗಳ ತಳಿ ಉತ್ಪಾದನೆಯ ಹಕ್ಕು ದೇವರುಗಳದೇ ಆಗಿತ್ತು. ಅವರು, ಕಂಪನಿಯ ಮಾರಾಟದ ಪ್ರತಿನಿಧಿಗಳಂತೆ ಈ ಹಸು ಕೇಳಿದಷ್ಟು ಹಾಲು ಕರೆಯುತ್ತದೆ ಎಂದು ಪ್ರಚಾರ ಮಾಡಿ ಮಾರಾಟ ಮಾಡುತ್ತಿದ್ದರೆ ವಿನಃ, ಪುನಃ ಅದು ಗರ್ಭ ಧರಿಸಲು, ಕರು ಹಾಕಿ ಮತ್ತೆ ಹಾಲು ಕರೆಯುವಂತಾಗಲು ಅಗತ್ಯವಾದ ಹೋರಿಗಳನ್ನು ಮಾತ್ರ ಮಾರಾಟ ಮಾಡಲಿಲ್ಲ. ಇದರಿಂದಾಗಿ ಹಸು ಹಾಲು ಕರೆಯುವುದನ್ನು ನಿಲ್ಲಿಸಿದ ನಂತರ ಒಂದೋ ಅದು ನಿರುಪಯುಕ್ತವಾಗುತ್ತಿತ್ತು, ಇಲ್ಲವೇ ಪುನಃ ಅದಕ್ಕೆ ಗರ್ಭ ಧರಿಸುವಂತೆ ಮಾಡಲು ದೇವರ ಮಾರಾಟ ಪ್ರತಿನಿಧಿಗಳನ್ನೇ ಅವಲಂಬಿಸಬೇಕಾಗುತ್ತಿತ್ತು. ಹಾಗಾಗಿ ಎಲ್ಲೂ ಕಾಮಧೇನುಗಳನ್ನು ಕೊಂಡವರು ತಳಿ ಅಭಿವೃದ್ಧಿ ಮಾಡಿದ ಉದಾಹರಣೆಗಳು ಸಿಗುವುದಿಲ್ಲ. ಅಂತೆಯೇ ಕಲ್ಪವೃಕ್ಷ ಸಹ. ಕಲ್ಪವೃಕ್ಷ ನೀವು ಕೇಳಿದ್ದನ್ನೆಲ್ಲವನ್ನೂ ಕೊಡುತ್ತದೆ; ಕುಡಿಯಲು ಅದರ ತಂಪಾದ ಎಳನೀರು ಎಂತಹ ಬಾಯಾರಿಕೆಯನ್ನೂ ನೀಗಿಸುತ್ತದೆ ಹಾಗೂ ಆರೋಗ್ಯಕ್ಕೂ ಅನುಕೂಲಕರವಾಗಿರುತ್ತದೆ. ಊಟದ ರುಚಿ ಇಮ್ಮಡಿಗೊಳಿಸಲು ಅಧಿಕ ಪೌಷ್ಟಿಕಾಂಶವುಳ್ಳ ತಿರುಳಿನ ಕಾಯನ್ನೂ ಕೊಡುತ್ತದೆ. ಅಷ್ಟೇ ಅಲ್ಲ, ಬಿಸಿಲಲ್ಲಿ ನೆರಳನ್ನೂ, ಉರುವಲಿಗೆ (ವೇಗವಾಗಿ ಉರಿಯುವ) ಸೌದೆಯನ್ನೂ ಕೊಡುತ್ತದೆ. ಅಂದರೆ ಅದರಡಿ ನಿಂತು ನೀವು ಏನು ಬಯಸುತ್ತೀರೋ ಅದನ್ನೆಲ್ಲಾ ಕೊಡುತ್ತದೆ. (ಆದರೆ ಅದು ಕೊಡಲಿರುವುದಕ್ಕೆ ಇರುವ ನಿರ್ಬಂಧಗಳನ್ನು ಮಾತ್ರ ಹೇಳುತ್ತಿರಲಿಲ್ಲ). ಒಟ್ಟಿನಲ್ಲಿ ಅವರ ಪ್ರಚಾರದ ವೈಖರಿ ಇವತ್ತಿನ ಯಾವುದೇ ಕಂಪೆನಿಯ ಮಾರಾಟ ಪ್ರತಿನಿಧಿಗಿಂತಲೂ ಕಡಿಮೆಯಿರಲಿಲ್ಲ ಎಂಬುದು ವೇದ್ಯವಾಗುತ್ತದೆ.

ಹೀಗೆ ಅವರು ತಮ್ಮ ವಸ್ತುಗಳನ್ನು ಮಾರಾಟ ಮಾಡಲು ಊರಿಂದೂರಿಗೆ ಅಲೆದಾಡಬೇಕಾದ್ದು ಅನಿವಾರ್ಯವಾಗಿತ್ತು. ಅಂದಿನ ಕಾಲಕ್ಕೆ ಎರಡು ಊರುಗಳ ನಡುವೆ ನೂರಾರು ಮೈಲುಗಳ ಅಂತರವಿದ್ದು, ಈ ಅಂತರವೆಲ್ಲ ದಟ್ಟವಾದ ಕಾಡಿನಿಂದ ಆವೃತವಾಗಿರುತ್ತಿತ್ತು. ಕಾಡಿನಲ್ಲಿ ಹೀಗೆ [illegible]

ಗಳನ್ನೇನೋ ನಿಗ್ರಹಿಸಿ ಮುಂದುವರೆಯಬಹುದಾಗಿತ್ತು. ಆದರೆ ರಾಕ್ಷಸರನ್ನು ಹೀಗೇ ನಿಗ್ರಹಿಸಲು ಪ್ರಯತ್ನಿಸಿದಾಗ ಅವರ ಪ್ರತಿಭಟನೆಯನ್ನೂ ಎದುರಿಸಬೇಕಾಯಿತು. ತಮ್ಮ ಪ್ರದೇಶದಲ್ಲಿ ಅಕ್ರಮವಾಗಿ ಪ್ರವೇಶಿಸಿರುವುದನ್ನೇ ಸಹಿಸದ ರಾಕ್ಷಸರು (ಉದಾಹರಣೆಗೆ ಒಂದು ನಾಯಿ ತನ್ನ ವ್ಯಾಪ್ತಿಯಲ್ಲಿ ಅಕ್ರಮವಾಗಿ ಪ್ರವೇಶಿಸುವ ಯಾವೊಂದು ಪ್ರಾಣಿಯನ್ನಾಗಲೀ, ಮನುಷ್ಯನನ್ನಾಗಲೀ ಹೇಗೆ ಪ್ರತಿರೋಧಿಸುತ್ತದೆ ಎಂಬುದನ್ನು ಗಮನಿಸಿ) ತಮ್ಮ ಮೇಲೆ ಆಕ್ರಮಣ ಮಾಡಲು ಬರುವ – ಭಯದಿಂದಲೂ ಇರಬಹುದು – ಪರಕೀಯರನ್ನು ಹೇಗೆ ತಾನೇ ಸಹಿಸಿಯಾರು. ಸಹಜವಾಗಿಯೇ ದೇವರ ವಿರುದ್ಧ ಹೋರಾಟಕ್ಕಿಳಿದರು. ಹೀಗಾಗಿ ದೈಹಿಕವಾಗಿ ದುರ್ಬಲರಾಗಿದ್ದ ದೇವರು ಇತರೆ ರಾಜರ ಸಹಾಯವನ್ನು ಪಡೆಯುತ್ತಿದ್ದರು ; ಇಲ್ಲವೇ ಅತ್ಯಾಧುನಿಕವಾದ ಆಯುಧಗಳನ್ನು ಬಳಸಲಾರಂಭಿಸಿದರು. ಒಂದು ಕಡೆ ಶಕ್ತಿ, ಇನ್ನೊಂದು ಕಡೆ ಯುಕ್ತಿಯ ಸಂಘರ್ಷ ಏರ್ಪಟ್ಟಿತು.

**ರಾಕ್ಷಸರು ಯಜ್ಞಕುಂಡದಲ್ಲೇ ಏಕೆ ಮಾಂಸ ಎಸೆಯಬೇಕಿತ್ತು ?**

ಪುರಾಣ ಸಂದರ್ಭದಲ್ಲಿ ಮೂರು ಭಿನ್ನ ವರ್ಗ ಅಥವಾ ಜನಾಂಗದ ಜನರನ್ನು ನಾವು ಗುರುತಿಸಬಹುದು. ದೇವ ಜನಾಂಗ, ಸಾಮಾನ್ಯ ಮನುಷ್ಯರು ಹಾಗೂ ರಾಕ್ಷಸ ಜನಾಂಗ. ದೇವ ಜನಾಂಗ ಅತ್ಯಂತ ಸುಸಂಸ್ಕೃತವಾದದ್ದಾಗಿದ್ದರೆ, ರಾಕ್ಷಸ ಜನಾಂಗ ಅಷ್ಟೇ ಅನಾಗರಿಕವಾದದ್ದಾಗಿದ್ದಿತು. ಈ ಎರಡು ಸಂಸ್ಕೃತಿಗಳ ನಡುವಿನ ನರರು, ಅತ್ತ ದೇವರಷ್ಟು ನಾಗರಿಕರೂ ಅಲ್ಲದ, ಇತ್ತ ರಾಕ್ಷಸರಷ್ಟು ಅನಾಗರಿಕರೂ ಅಲ್ಲದ ಸಾಮಾನ್ಯ ಮನುಷ್ಯರಾಗಿದ್ದರು.

ರಾಕ್ಷಸರು ಎಂದರೆ ಕಾಡಿನಲ್ಲಿ ವಾಸಿಸುವವರು, ಅನಾಗರಿಕರು ಎಂಬುದು ತಿಳಿದೇ ಇದೆ. ಅವರಿಗೆ ಪರಕೀಯರೊಂದಿಗೆ ಸೌಹಾರ್ದಯುತ ಸಂಬಂಧ ಹೊಂದಿರಬೇಕೆಂಬ ತತ್ವವೇ ತಿಳಿದಿರಲಿಲ್ಲ, ತದ್ವಿರುದ್ಧವಾಗಿ ನಾಗರಿಕರಾದ ಸಾಮಾನ್ಯ ಮನುಷ್ಯರು ಸುಸಂಸ್ಕೃತರಾದ ದೇವರಿಂದ ಸಿಗುವ ಪ್ರಯೋಜನಗಳನ್ನು ಗಣಿಸಿ, ಅವರನ್ನು ಒಲಿಸಿಕೊಳ್ಳಲು ಹವಣಿಸುತ್ತಿದ್ದರು. ಎಂದೇ ಅವರನ್ನು ಕುರಿತು ಪೂಜೆ, ಯಜ್ಞ, ಯಾಗ ಇತ್ಯಾದಿಗಳನ್ನು ಮಾಡಲು ಮುಂದಾದರು. ಪರಿಣಾಮವಾಗಿ ಪುರೋಹಿತ ಪಂಗಡವು ಮಧ್ಯವರ್ತಿಗಳಂತೆ ನಡೆದುಕೊಂಡಿತು. ಅದರ ನಿರ್ದೇಶನದಂತೆ ಯಜ್ಞವನ್ನು ತೆರೆದ ಹೊರವಲಯದಲ್ಲಿ, ಅಂದರೆ ಅದರಿಂದ ಉಂಟಾಗುವ ಹೊಗೆ ಮತ್ತು ಶಾಖದ ಪರಿಣಾಮವನ್ನು ಕಡಿಮೆ ಮಾಡುವಂಥ ಬಯಲಿನಲ್ಲಿ ಹಾಗೂ ಸಾಧ್ಯವಾದಷ್ಟು ಬಿಸಿಲಿನಿಂದಲೂ ರಕ್ಷಣೆ ಸಿಗುವಂತಹ (ಯಜ್ಞದ ಶಾಖದ ಜೊತೆಗೆ ಬಿಸಿಲೂ ಸೇರಿದರೆ ಆಗುವ ತಾಪವನ್ನು ಕಡಿಮೆ ಮಾಡಿಕೊಳ್ಳಲು) ದೊಡ್ಡ ದೊಡ್ಡ ಮರಗಳ ಅಡಿಯಲ್ಲಿ ಯಜ್ಞಕುಂಡವನ್ನು ನಿರ್ಮಿಸುತ್ತಿದ್ದರು.

ಇಂತಹ ಯಜ್ಞಕುಂಡಗಳಿಗೆ ರಾಕ್ಷಸರು ಮಾಂಸವನ್ನು ಎಸೆದು ಯಜ್ಞದ ಪಾವಿತ್ರ್ಯವನ್ನು ಹಾಳುಗೆಡವುತ್ತಿದ್ದರು ಎಂಬ ವಿವರಣೆ ಕಾಣುತ್ತೇವೆ. ರಾಮಾಯಣದಲ್ಲಿ ವಿಶ್ವಾಮಿತ್ರನು ಈ ರೀತಿಯಲ್ಲಿ ಯಜ್ಞವನ್ನು ಅಪವಿತ್ರಗೊಳಿಸುವ ರಾಕ್ಷಸರನ್ನು ಸಂಹರಿಸಲು ಬಾಲಕರಾದ ರಾಮ ಲಕ್ಷ್ಮಣರನ್ನು ಕರೆದುಕೊಂಡು ಹೋದ ಎಂಬ ಅಂಶವನ್ನು ಗಮನಿಸಬಹುದು. (ವಿಶ್ವಾಮಿತ್ರ ರಾಕ್ಷಸರ ನಿಗ್ರಹಕ್ಕೆ ಮಕ್ಕಳನ್ನೇ ಏಕೆ ಆಯ್ಕೆ ಮಾಡಿಕೊಂಡ ಎಂಬುದು ಕುತೂಹಲಕರ. ರಾಮ ಲಕ್ಷ್ಮಣರನ್ನೇ ಕರೆದೊಯ್ಯಲು ಪಿತೃವಾತ್ಸಲ್ಯ ಕಾರಣವಾಗಿದ್ದರೂ, ಮಕ್ಕಳನ್ನು ಮುಂದಿಟ್ಟುಕೊಂಡು, ಮಾಂಸ ಎಸೆಯಲು ಬರುವ ರಾಕ್ಷಸರನ್ನು ದೊಡ್ಡವರೇ ಕೊಂದರೂ, ಮುಂದೆ ರಾಕ್ಷಸರು ಪ್ರತಿರೋಧ ವ್ಯಕ್ತಪಡಿಸಲು ಬಂದರೆ ಮಕ್ಕಳ ಮೇಲೆ - ಅದೂ ಅಪರಿಚಿತರಾದ ಮಕ್ಕಳ ಮೇಲೆ - ಅಪರಾಧ ಹೊರಿಸಿದರೆ ಅದು ಕ್ಷಮ್ಯ ಆಗಿ ರಾಕ್ಷಸರ ಸೇಡಿನಿಂದ ಬಚಾವಾಗಬಹುದು ಎಂಬುದೂ ಕಾರಣವಿರಬಹುದು).



ಅಷ್ಟಕ್ಕೂ ನಾಗರಿಕ ಜನರು ಕೈಗೊಳ್ಳುವ ಯಜ್ಞವನ್ನು ರಾಕ್ಷಸರು ಏಕೆ ಕೆಡಿಸಬೇಕಿತ್ತು? ಅದರಿಂದ ಅವರಿಗಾಗುತ್ತಿದ್ದ ಲಾಭವಾದರೂ ಏನು? ಈ ಸಮಸ್ಯೆ ನಮ್ಮನ್ನು ಕಾಡದೇ ಬಿಡದು.

ಅನಾಗರಿಕರಾದ ರಾಕ್ಷಸರು ಮೂಲತಃ ಕಾಡಿನಲ್ಲಿ ವಾಸಿಸುವವರಾದ್ದರಿಂದ, ಆಕಸ್ಮಿಕವಾಗಿ ಕಾಡ್ಗಿಚ್ಚಿಗೆ ಬಲಿಯಾದ ಪ್ರಾಣಿಗಳನ್ನು, ಅಂದರೆ ಅರೆ ಬೆಂದ ಮಾಂಸವನ್ನು, ಸಹಜವಾಗಿ ತಿಂದಿರುತ್ತಿದ್ದರು. ಗೆಡ್ಡೆ ಗೆಣಸುಗಳಂತಹ ಕಾಡಿನ ಸಸ್ಯ ಉತ್ಪನ್ನಗಳ ಜೊತೆಗೇ, ಕಾಡು ಪ್ರಾಣಿಗಳಾದ ಮೊಲ, ಜಿಂಕೆ ಮುಂತಾದ ಸಸ್ಯಾಹಾರಿ ಪ್ರಾಣಿಗಳನ್ನೂ (ಯಾವುದೇ ಮಾಂಸಾಹಾರಿ ಪ್ರಾಣಿ, ಮನುಷ್ಯನನ್ನೂ ಒಳಗೊಂಡು, ಇನ್ನೊಂದು ಮಾಂಸಾಹಾರಿ ಪ್ರಾಣಿಯನ್ನು ತಿನ್ನದೇ, ಸಸ್ಯಾಹಾರಿಯನ್ನೇ ತಿನ್ನುತ್ತದೆ ಎನ್ನುವುದು ಕುತೂಹಲಕರ) ತಿಂದು ಹಸಿವನ್ನು ಇಂಗಿಸಿಕೊಳ್ಳುತ್ತಿದ್ದರು. ಆದರೆ ಕಾಡ್ಗಿಚ್ಚಿಗೆ ಸಿಕ್ಕಿ ಬೆಂದ ಮಾಂಸದ ಮೃದುತ್ವ ಹಾಗೂ ರುಚಿಗೂ, ಹಸಿಯಾದ ಮಾಂಸದ ಗಡಸು ಹಾಗೂ ರುಚಿಗೂ ಅಗಾಧ ವ್ಯತ್ಯಾಸವಿರುವುದನ್ನು ಕ್ರಮೇಣ ಗಮನಿಸಿದರು. ಆದರೆ ಕಾಡ್ಗಿಚ್ಚನ್ನು ಸೃಷ್ಟಿಸಲು ಅನಾಗರಿಕರಾದ ಅವರಿಗೆ ಅಸಾಧ್ಯವಾಗಿತ್ತು. ಅಷ್ಟಕ್ಕೂ ಬೆಣಚುಕಲ್ಲುಗಳನ್ನು ಕುಟುಕಿ ಬೆಂಕಿ ಪಡೆಯುವುದು ಅವತ್ತಿನ ಕಾಲದ ನಾಗರಿಕರಿಗೆ ಮಾತ್ರ ಸಾಧ್ಯವಿತ್ತು. ಆದರೂ ಅದು ಅಷ್ಟು ಸುಲಭ ಸಾಧ್ಯವಲ್ಲವಾದ್ದರಿಂದ ಒಮ್ಮೆ ಸೃಷ್ಟಿಸಿದ ಬೆಂಕಿಯನ್ನು ಎಣ್ಣೆ ಮತ್ತಿತರ ಉರುವಲನ್ನು ಬಳಸಿ ಕಾಯ್ದುಕೊಂಡು ಬರುತ್ತಿದ್ದರು (ಮೊಸರನ್ನು ಮಾಡಲು ಎಪ್ಪನ್ನು ಕಾಯ್ದುಕೊಳ್ಳುವಂತೆ); ಮತ್ತು ಮೂಲ ಬೆಂಕಿಯಿಂದ ಹೆಚ್ಚು ಹೆಚ್ಚು ಬಿಡಿಬಿಡಿ ಬೆಂಕಿಯ ತುಣುಕುಗಳನ್ನು ಸೃಷ್ಟಿಸಿಕೊಳ್ಳುತ್ತಿದ್ದರು. ಇಂತಹ ಕಲೆ ಅನಾಗರಿಕರಾದ ರಾಕ್ಷಸರಿಗೆ ತಿಳಿಯುವುದು ಹೇಗೆ ಸಾಧ್ಯ? ಒಂದು ವೇಳೆ ಗೊತ್ತಿದ್ದರೂ ಕಾಡಿನಲ್ಲಿ ವಾಸಿಸುವ ಅವರಿಗೆ ಬೆಂಕಿಯ ಮೂಲವನ್ನು ಗಾಳಿ ಮತ್ತು ಮಳೆಯಿಂದ ರಕ್ಷಿಸಿಕೊಳ್ಳುವುದು ಅಸಾಧ್ಯವಾಗಿತ್ತು.

ಹೀಗಾಗಿ ಬೆಂದ ಮಾಂಸದ ರುಚಿ ಕಂಡಿದ್ದ ರಾಕ್ಷಸರು, ಅವತ್ತಿನ ಕಾಲಕ್ಕೆ ನಾಗರಿಕರೆನಿಸಿಕೊಂಡಿದ್ದವರು ಆಚರಿಸುತ್ತಿದ್ದ ಯಜ್ಞಕ್ಕೆ (ಒಣಗಿದ ಮರ, ಕಟ್ಟಿಗೆ, ತುಪ್ಪ, ಮುಂತಾದ ಉರುವಲಿನಿಂದ ಬೃಹದಾಕಾರವಾಗಿ ಸೃಷ್ಟಿಸುತ್ತಿದ್ದ ಯಜ್ಞ ಕುಂಡಕ್ಕೆ) ತಾವು ಕೊಂದ ಕಾಡು ಪ್ರಾಣಿಗಳನ್ನು ಎಸೆದು ಅವು ಬೆಂದ ನಂತರ ತಿನ್ನುವುದು ಅವರ ಅಭಿಲಾಷೆಯಾಗಿತ್ತು. ಆದರೆ ಸಶಸ್ತ್ರಗಳನ್ನು ಹೊಂದಿದ್ದ ನಾಗರಿಕರ ಎದುರು ನಿರಾಯುಧರಾದ ಅಥವಾ ಆಧುನಿಕವಲ್ಲದ ಆಯುಧಗಳನ್ನು ಹೊಂದಿದ್ದ ಅನಾಗರಿಕರು, ದೈಹಿಕವಾಗಿ ಅಧಿಕ ಶಕ್ತಿವಂತರಾಗಿದ್ದರೂ, ಸೋಲುತ್ತಿದ್ದರು. ಆದ್ದರಿಂದ ಎದುರಿಗೇ ಬಂದು ಯಜ್ಞಕುಂಡಕ್ಕೆ ಮಾಂಸವನ್ನು ಎಸೆಯಲು ಧೈರ್ಯವಿಲ್ಲದೆ ಮರೆಯಿಂದಲೋ, ಮರದ ಮೇಲಿನಿಂದಲೋ, ಎಸೆಯುತ್ತಿದ್ದರು. ಜನರು ಅದನ್ನು ಕಾಣದೇ ತಮ್ಮ ಪಾಡಿಗೆ ತಾವು ಯಜ್ಞವನ್ನು ಮುಗಿಸಿಕೊಂಡು ಹೋದರೆ, ಅಥವಾ ಭಯದಿಂದಲೋ, ಅಪವಿತ್ರತೆಯಿಂದಲೋ ಅವರು ಓಡಿಹೋದರೆ, ತರುವಾಯ ಬಂದು ಬೆಂದ ಮಾಂಸದ ಸ್ವಾದವನ್ನು ಸವಿಯಬಹುದು ಎಂಬುದು ಅವರ ಎಣಿಕೆಯಾಗಿತ್ತು.

ಆದರೆ ಇದನ್ನು ಯಜ್ಞದ ಮಡಿವಂತಿಕೆಯನ್ನು ಮಲಿನಗೊಳಿಸುವ ಉದ್ದೇಶಪೂರ್ವಕ ಪ್ರಯತ್ನವೆಂದು ನಾಗರಿಕರೆನಿಸಿಕೊಂಡವರು ಭಾವಿಸುತ್ತಿದ್ದರು; ಹಾಗೂ ಅಂತಹವರನ್ನು ನಿಗ್ರಹಿಸಲು ಪ್ರಯತ್ನಿಸುತ್ತಿದ್ದರು. ಇಂತಹ ಪ್ರಯತ್ನದಲ್ಲೇ ಸುಬಾಹು, ರಾಮ-ಲಕ್ಷ್ಮಣರ ಬಾಣದಿಂದ ಹತನಾಗಿ, ಮಾರೀಚ ಗಂಭೀರವಾಗಿ ಗಾಯಗೊಂಡು, ಜೀವ ಭಯದಿಂದ ಆ ಭೂಪ್ರದೇಶವನ್ನೇ ಬಿಟ್ಟು ಪಲಾಯನ ಮಾಡಿದ್ದು. ಇದೇ ಕಾವ್ಯದ ಉತ್ಪ್ರೇಕ್ಷೆಯ ಗುಣದಿಂದಾಗಿ, ಮಾರೀಚ ರಾಮನ ಬಲಯುತವಾದ ಬಾಣದ ತುದಿಗೆ ಸಿಕ್ಕು ಸಾವಿರಾರು ಗಾವುದ ದೂರ ಎಸೆಯಲ್ಪಟ್ಟ ಎಂದು ಚಿತ್ರಿತವಾಗಿದೆ.

ಕಂನಾಡಿಗಾ ನಾರಾಯಣ
'ತುಂಗೋತ್ರಿ', ಗಾಡಿಕೊಪ್ಪ, ಶಿವಮೊಗ್ಗ - ೫೭೭ ೨೦೪

# ಪಶ್ಚಿಮ ಗಡಿಯಲ್ಲಿ ಎಲ್ಲವೂ ಸರಿಯಾಗಿಲ್ಲ!

ಹತ್ತೊಂಭತ್ತನೆಯ ಶತಮಾನದ ಮಧ್ಯಭಾಗದಲ್ಲಿ ಫ್ರಾನ್ಸಿನ ಒಬ್ಬ ತತ್ವಜ್ಞಾನಿ ಪ್ರೂಧೋನ್ 'ಬಡತನದ ತತ್ತ್ವ' ಎಂಬ ಗ್ರಂಥವನ್ನು ಬರೆದಿದ್ದ. ಆ ಗ್ರಂಥದಲ್ಲಿ ವ್ಯಕ್ತವಾಗಿದ್ದ ಅಭಿಪ್ರಾಯಗಳ ಅಸಂಬದ್ಧತೆಯನ್ನು ಲೇವಡಿ ಮಾಡಿ ಕಾರ್ಲ್ ಮಾರ್ಕ್ಸ್ ತಾನೊಂದು ಗ್ರಂಥ ಬರೆದ. ಅದರ ಹೆಸರು 'ತತ್ತ್ವಶಾಸ್ತ್ರದ ಬಡತನ' ಎಂದಿತ್ತು! ೧೫೦ ವರ್ಷಗಳ ಬಳಿಕ, ಈಗ ಅಮೆರಿಕಾವು ತನ್ನ ಬಹು ಚರ್ಚಿತ ಯೋಜನೆ ''ಬಡತನದ ಆಡಳಿತಾತ್ಮಕ ನಿರ್ವಹಣೆ''ಯ ರೀತಿಯಲ್ಲಿ ನೋಡಿದರೆ ಅದು ನಿಜವಾಗಿಯೂ ಬಡತನದ ನಿರ್ವಹಣೆ ಅಲ್ಲ, ನಿರ್ವಹಣೆಯ ಬಡತನ ಎನಿಸದೆ ಇರದು.

ಅಮೆರಿಕಾಕ್ಕೆ ಮತ್ತು ಅದರ ಕೃಪಾಪೋಷಿತ ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತು ವಿಶ್ವ ವ್ಯಾಪಾರ ಸಂಸ್ಥೆಗಳಿಗೆ ಪ್ರಪಂಚದ ಬಡವರ ಮೇಲಾಗಲಿ ಬಡತನದ ಮೇಲಾಗಲಿ ಅನುಕಂಪ ಇದೆ ಎಂದುಕೊಳ್ಳುವುದೇ ದಡ್ಡತನ. ಅಮೆರಿಕಾಕ್ಕಿರುವುದು ಹಿತಾಸಕ್ತಿಗಳು ಮಾತ್ರ. ತನ್ನ ಹಿತಾಸಕ್ತಿಗಳನ್ನು ರಕ್ಷಿಸುವವರು ಯಾರೇ ಆಗಿರಲಿ, ಅವರು ಅಮೆರಿಕಾದ ಮಿತ್ರರಾಗುತ್ತಾರೆ! ಅವುಗಳನ್ನು ಪ್ರಶ್ನಿಸುವವರು ದಿನ ಬೆಳಗಾಗುವುದರೊಳಗೆ ಶತ್ರುಗಳಾಗುತ್ತಾರೆ! ಇದಕ್ಕೆ ಇತಿಹಾಸವೇ ಸಾಕ್ಷಿ. ಪ್ರಪಂಚ ಇತಿಹಾಸದ ಸ್ಥೂಲ ಪರಿಚಯವೇ ಅಮೆರಿಕಾದ ಪ್ರವೃತ್ತಿಯನ್ನು ಬಯಲು ಮಾಡುತ್ತದೆ.

**ಹಿನ್ನೆಲೆ**

ಹಾಗೆ ನೋಡಿದರೆ, ೧೯೪೫ರವರೆಗೂ ಅಮೆರಿಕಾ ಹೊರ ಪ್ರಪಂಚದ ಗೊಡವೆಗೆ ಹೋಗದೆ ತನ್ನ ಪಾಡಿಗೆ ತಾನಿತ್ತು. ವಿಶಾಲವಾದ ಭೂಭಾಗ ಮತ್ತು ಅಪರಿಮಿತ ಸಂಪನ್ಮೂಲಗಳನ್ನು ಹೊಂದಿ ಸಂತೃಪ್ತ ಎನ್ನುವಂತೆ ಇತ್ತು. ೧೯೪೫ರಲ್ಲಿ ಹಿರೋಷಿಮಾದ ಮೇಲೆ ಪ್ರಪ್ರಥಮ ಅಣುಬಾಂಬನ್ನು ಪ್ರಯೋಗಿಸುವವರೆಗೂ ಹೊರ ಪ್ರಪಂಚದ ಆಗುಹೋಗುಗಳಿಗೂ ತನಗೂ ಸಂಬಂಧವಿಲ್ಲ ಎನ್ನುವಂತಿತ್ತು. ೬.೮.೧೯೪೫ರಂದು ಬಾಂಬಿನ ಭಯಂಕರ ಸದ್ದಿನೊಂದಿಗೆ ಅಮೆರಿಕಾ ತನ್ನ ಆಗಮನವನ್ನು ಪ್ರಕಟಿಸಿತು.

ಅಮೆರಿಕಾ ತನ್ನ ಕೃತ್ಯಕ್ಕೆ ತಕ್ಷಣವೇ ಪಶ್ಚಾತ್ತಾಪ ಪಡಲಿಲ್ಲ. ಆ ದಿನಗಳು ಮತ್ತೂ ಇಪ್ಪತ್ತು ವರ್ಷಗಳ ನಂತರ ಬಂದವು. ೧೯೬೦ರ ನಂತರ ಅಮೆರಿಕಾದ ದುರ್ದೆಶೆ ಆರಂಭವಾಯಿತು. ೪೫ರಲ್ಲಿ ನಾಶವಾಗಿದ್ದ ಜಪಾನು ಮುಂದಿನ ೨೦ ವರ್ಷಗಳಲ್ಲಿ ಛಲದಿಂದೆಂಬಂತೆ ಅದ್ಭುತ ಪ್ರಗತಿಯನ್ನು ಸಾಧಿಸಿತು. ಉನ್ನತ ತಂತ್ರಜ್ಞಾನದ ಕ್ಷೇತ್ರದಲ್ಲಿ ಅಮೆರಿಕಾವನ್ನು ಬೆನ್ನಟ್ಟಿದ್ದಲ್ಲದೆ ಹಿಮ್ಮೆಟ್ಟಿಸಿಯೂ ಬಿಟ್ಟಿತು. ಇದೇ ಅವಧಿಯಲ್ಲಿ ರಶಿಯಾ ಕೂಡ ತನ್ನ ಮಿಲಿಟರಿ ಬಲವನ್ನು ಹೆಚ್ಚಿಸಿಕೊಂಡು ಅಮೆರಿಕಾದ ಸಮಕ್ಕೆ ಬಂತು. ಅತ್ತ, ಪೆಟ್ರೋಲ್ ಬೆಲೆಯೂ ಹೆಚ್ಚಿ ಅಮೆರಿಕಾದ ಆರ್ಥಿಕ ಬೆಳವಣಿಗೆಯ ಮೇಲೆ ಬಲವಾದ ಹೊಡೆತ ಬಿತ್ತು. ಈ ಹೊಡೆತಗಳಿಂದ ಅದಕ್ಕೆ ಚೇತರಿಸಿಕೊಳ್ಳಲು ಆಗಲೇ ಇಲ್ಲ. ಮುಂದಿನ ೨೦ ವರ್ಷಗಳು ಅಮೆರಿಕಾದ ದುರ್ದೆಶೆಯ ಅವಧಿ. ಕೆಲವೊಂದು ಅಂಕಿ ಅಂಶಗಳನ್ನು ಗಮನಿಸಿ: ೧೯೬೦ರಲ್ಲಿ ವಾಣಿಜ್ಯ ವ್ಯವಹಾರಗಳಿಂದ ಸುಮಾರು ಐದು ಬಿಲಿಯನ್ ಡಾಲರ್ ಗಳಿಸಿದ್ದ ಅಮೆರಿಕಾ ೮೦ಕ್ಕೆ ಬರುವಷ್ಟರಲ್ಲಿ ೨೫ ಬಿಲಿಯನ್ ಡಾಲರ್ ಸಾಲ ಮಾಡಬೇಕಾಗಿ ಬಂದಿತ್ತು! ೬೦ರಲ್ಲಿ ಅಮೆರಿಕಾದ ಮಾರುಕಟ್ಟೆಯಲ್ಲಿದ್ದ ವಿದೇಶೀ ಉತ್ಪನ್ನಗಳು ಶೇಕಡ ಒಂಬತ್ತರಷ್ಟಿದ್ದರೆ, ೮೦ರಲ್ಲಿ ಈ ಪ್ರಮಾಣ ಶೇ. ೭೦ಕ್ಕೆ ಮುಟ್ಟಿತ್ತು! ೬೦ ರಿಂದ ೮೦ರ ಮಧ್ಯದ ಅವಧಿಯಲ್ಲಿ ವಿದೇಶೀ ಕಂಪೆನಿಗಳು ಅಮೆರಿಕಾದಲ್ಲಿ ಹೂಡಿದ್ದ ಬಂಡವಾಳವು ಏಳು ಬಿಲಿಯನ್ ಡಾಲರ್‌ಗಳಿಂದ ೭೦ ಬಿಲಿಯನ್ ಡಾಲರ್‌ಗೇರಿತ್ತು! ೬೦ರಲ್ಲಿ ಪ್ರಪಂಚದ ಶಕ್ತಿಯ ಉತ್ಪಾದನೆಯಲ್ಲಿ ಅಮೆರಿಕಾದ ಪಾಲು ಶೇ. ೩೫ರಷ್ಟಿದ್ದರೆ ೮೦ರಲ್ಲಿ ಅದು ಶೇ. ೨೫ಕ್ಕೆ ಕುಸಿದಿತ್ತು!

೨೦ ವರ್ಷಗಳ ಅವಧಿಯಲ್ಲಿ ಅಮೆರಿಕಾ ಕಂಡ ಆರ್ಥಿಕ ಕುಸಿತದ ಪ್ರಮಾಣವನ್ನು ಇದಿಷ್ಟರಿಂದಲೇ ಊಹಿಸಬಹುದು. ಹೀಗೆ ದಿವಾಳಿಯ ಅಂಚಿನವರೆಗೂ ಸರಿದಿದ್ದ ಅಮೆರಿಕಾ ತನ್ನ ದುರಂತದಿಂದ ಬಚಾವಾಗಲು ಅಡ್ಡದಾರಿ ಹಿಡಿಯಿತು! ತನ್ನ ಉದಾರ ನೀತಿಗಳಿಗೆ ತಿಲಾಂಜಲಿ ಕೊಟ್ಟು ಸ್ವಹಿತಾಸಕ್ತಿಯ ಪೋಷಣೆಗೆ ಆರಂಭಿಸಿತು. ಈ ಬದಲಾವಣೆಗೆ ಅದು ಕೊಟ್ಟುಕೊಂಡ ಹೆಸರು - ಜಾಗತೀಕರಣ!

**ಅಮೆರಿಕಾ ಮಾಡಿದ್ದೇನು ?**

'ಜಾಗತೀಕರಣ' 'ಉದಾರೀಕರಣ'ದ ಹೆಸರಿನಲ್ಲಿ ಅಮೆರಿಕಾ ತನ್ನ ಕ್ರೂರ ದಬ್ಬಾಳಿಕೆಯನ್ನು ಆರಂಭಿಸಿದ್ದು ೧೯೭೦ರ ಸುಮಾರಿಗೆ. ತನ್ನ ಕೃತ್ಯದ ಮೊದಲ ಹೆಜ್ಜೆಯಾಗಿ ಅಮೆರಿಕಾವು ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ವಿತ್ತನಿಧಿಗಳನ್ನು ತನ್ನ ವಶಕ್ಕೆ ತೆಗೆದುಕೊಂಡಿತು. ಇನ್ನೊಂದು ಹೆಜ್ಜೆಯಾಗಿ ಶೀತಲ ಸಮರವನ್ನು ಹುಟ್ಟುಹಾಕಿತು.

೧೯೪೫ರಲ್ಲಿ ಬ್ರೆಟನ್‌ವುಡ್‌ನಲ್ಲಿ ಆರಂಭಗೊಂಡ ವಿಶ್ವ ಬ್ಯಾಂಕ್ ಪ್ರಪಂಚದ ಆರ್ಥಿಕ ಸ್ಥಿರತೆ ಮತ್ತು ಸಮತೋಲನವನ್ನು ಕಾಪಾಡಬೇಕೆಂಬ ಸದುದ್ದೇಶವನ್ನು ಹೊಂದಿದ್ದಿತು. ಬಡತನ ನಿರ್ಮೂಲನೆ, ಸಾಕ್ಷರತೆ, ಆರೋಗ್ಯ ರಕ್ಷಣೆ ಮುಂತಾದ ಆದ್ಯತಾವಲಯದ ಯೋಜನೆಗಳಿಗೆ ನೆರವು ಮತ್ತು ಮಾರ್ಗದರ್ಶನ ಒದಗಿಸುತ್ತಿತ್ತು. ಅಮೆರಿಕಾ ವಿಶ್ವ ಬ್ಯಾಂಕಿನ ವ್ಯವಹಾರಗಳಲ್ಲಿ ಮೂಗು ತೂರಿಸಿ ಆದ್ಯತಾವಲಯವನ್ನು ತನಗೆ ಬೇಕಾದ ರೀತಿಯಲ್ಲಿ ಬದಲಾಯಿಸಿಕೊಂಡಿತು! ಅಮೆರಿಕಾದ ಹಸ್ತಕ್ಷೇಪದ ಪರಿಣಾಮವಾಗಿ ಆಹಾರ, ಆರೋಗ್ಯ, ಅಕ್ಷರಗಳು ಮೂಲೆಗುಂಪಾಗಿ ಭೋಗ ವಸ್ತುಗಳ ಉತ್ಪಾದನೆ ಮತ್ತು ಶಸ್ತ್ರಾಸ್ತ್ರಗಳ ಮಾರಾಟ ದಂಧೆ ಆದ್ಯತಾ ವಲಯಕ್ಕೆ ಸೇರಿದವು. ಅಧಿಕ ಸಂಪನ್ಮೂಲ ಮತ್ತು ವಿಶಾಲ ಮಾರುಕಟ್ಟೆಯನ್ನು ಹೊಂದಿರುವ ದೇಶಗಳ ಮೇಲೆ ಅಮೆರಿಕಾವು ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ವಿತ್ತನಿಧಿ, ಗ್ಯಾಟ್ ಮತ್ತು ಪ್ರಪಂಚ ವಾಣಿಜ್ಯ ಸಂಘಟನೆಗಳ ಮುಖಾಂತರ ಒತ್ತಡ ಹೇರತೊಡಗಿತು. ವಿಶ್ವ ಬ್ಯಾಂಕ್ ಐ.ಎಮ್.ಎಫ್.ಗಳು ಮೇಲ್ನೋಟಕ್ಕೆ ಬೇರೆ ಬೇರೆ ಸಂಘಟನೆಗಳೆಂದು ತೋರಿಸಿಕೊಂಡರೂ ಅವು ಬಾಯಿಬಿಟ್ಟರೆ ಹೊರಡುವ ಧ್ವನಿ ಒಂದೇ. ಅದು ಅಮೆರಿಕಾದ ಧ್ವನಿ!

ತನ್ನಲ್ಲಿ ತಯಾರಾದ ಶಸ್ತ್ರಾಸ್ತ್ರಗಳಿಗೆ ಮಾರುಕಟ್ಟೆ ಒದಗಿಸುವುದಕ್ಕಾಗಿ ಅಮೆರಿಕಾ ಇನ್ನೊಂದು ಸಂಚು ಹೂಡಿತು. ಅದು ಶೀತಲ ಸಮರದ ಭಯ! ಇದಕ್ಕಾಗಿ ಅದು ಕಮ್ಯುನಿಸಂ ಎಂಬ ಗುಮ್ಮನನ್ನು ಎಬ್ಬಿಸಿತು. ಕಮ್ಯುನಿಸಂ ಬೆಳವಣಿಗೆಗೆ ತಡೆ ಹಾಕುವುದಕ್ಕಾಗಿ ತನ್ನ ಶಸ್ತ್ರಾಸ್ತ್ರಗಳನ್ನು ಕೊಳ್ಳಿ ಎಂದು ಒತ್ತಡ ಹಾಕಿತು.

೧೯೫೬ರಲ್ಲಿ ಸೋವಿಯತ್ ಒಕ್ಕೂಟದ ಕಮ್ಯುನಿಸ್ಟ್ ಪಕ್ಷದ ೨೦ನೇ ಕಾಂಗ್ರೆಸ್‌ನಿಂದ ಕಮ್ಯುನಿಸ್ಟ್ ಕೋಟೆ ಬಿರುಕು ಬಿಡತೊಡಗಿತ್ತು. ೧೯೬೦ರಲ್ಲಿ ರಶಿಯಾ-ಚೈನಾ ಬೇರೆ ಬೇರಾದವು. ಪೂರ್ವ ಯುರೋಪಿನಾದ್ಯಂತ ಸಂಘರ್ಷ ಹೆಚ್ಚಿತು. ಇದರಿಂದ ಅಮರಿಕಾಕ್ಕೆ ಸಮಾಧಾನವಾಗಬೇಕಾಗಿತ್ತು. ಆದರೆ ಆಗಲಿಲ್ಲ! ಬದಲಾಗಿ ಅದರ ಆತಂಕ ಇನ್ನೂ ಹೆಚ್ಚಾಯಿತು! ಸೋವಿಯತ್ ಒಕ್ಕೂಟ ಕುಸಿದ ಕ್ಷಣದಿಂದ ಜಪಾನ್ ಮತ್ತು ಪಶ್ಚಿಮ ಯುರೋಪಿನ ಅನೇಕ ದೇಶಗಳಿಗೆ ಅಮೆರಿಕಾದ ಬೆಂಬಲದ ಅಗತ್ಯ ತಪ್ಪಿಹೋಯಿತು! ಅಮೆರಿಕಾದ ಶಸ್ತ್ರಾಸ್ತ್ರ ಮಾರಾಟದ ಮಾರುಕಟ್ಟೆ ಕುಸಿದರೇನು ಗತಿ, ಎಂದು ಅದಕ್ಕೆ ಚಿಂತೆ!

ಇದರ ಮುಂದಿನ ಹಂತವೇ ಮುಕ್ತ ವ್ಯಾಪಾರ ಒಪ್ಪಂದ. ಮುಕ್ತ ವ್ಯಾಪಾರದ ಹರಿಕಾರನೆಂದು ಹೇಳಿಕೊಳ್ಳುವ ಅಮೆರಿಕಾ ಅನುಸರಿಸುತ್ತಿರುವುದು ನಿರ್ಬಂಧಿತ ವ್ಯಾಪಾರ ನೀತಿಯನ್ನು! ಇದಕ್ಕೆ ಎರಡೇ ಎರಡು ನಿದರ್ಶನಗಳನ್ನು ಕೊಡುತ್ತೇನೆ: ೧೯೭೪ರಲ್ಲಿ ಅಮೆರಿಕಾ ಮಾಡಿಕೊಂಡ ದ್ವಿಪಕ್ಷೀಯ ಒಪ್ಪಂದದ ೩೦೧ ಮತ್ತು ೩೦೨ ನೇ ನಿಯಮಗಳ ಪ್ರಕಾರ, ಅದು ತನ್ನ ಗಿರಾಕಿ ದೇಶಗಳ ಮೇಲೆ ಏಕಪಕ್ಷೀಯವಾಗಿ ದಿಗ್ಬಂಧನಗಳನ್ನು ಹೇರಬಹುದು. ವಿಶ್ವ ಬ್ಯಾಂಕ್ ತನ್ನ ಗಿರಾಕಿ ದೇಶಗಳ 'ಸಾರ್ವಜನಿಕ ವೆಚ್ಚಗಳ ತಪಾಸಣೆ' ನಡೆಸುತ್ತದೆ ಪ್ರತಿವರ್ಷವೂ!

೧೫ ರಾಷ್ಟ್ರಗಳ ಒಕ್ಕೂಟವಾದ ಯುರೋಪಿಯನ್ ಯೂನಿಯನ್ ಅಮೆರಿಕಾವು ಆಮದು ಮಾಡುತ್ತಿದ್ದ ಹಾರ್ಮೋನ್‌ಯುಕ್ತ ದನದ ಮಾಂಸವು ನಿರುಪಯುಕ್ತವೆಂದು ಘೋಷಿಸಿ, ಅದರ ವ್ಯಾಪಾರಕ್ಕೆ ನಿರ್ಬಂಧ ಹೇರಿದವು. ಇದರಿಂದ ಅಮೆರಿಕಾಕ್ಕೆ ಪ್ರತಿವರ್ಷ ೨೫೦ ಬಿಲಿಯನ್ ಡಾಲರ್ ನಷ್ಟ [illegible]

ಎಂ. ವಿ. ಚಕ್ರಪಾಣಿ

ಬೆ.ಜಿಲ್ ಉತ್ಪನ್ನಗಳ ಮೇಲೆ ಅಮೆರಿಕಾವು ಹೇರಿರುವ ಭಾರೀ ಸುಂಕವನ್ನು ಖಂಡಿಸದೆ ಜಾಣ ಕುರುಡನ್ನು ಮೆರೆಸಿತು!

ಮುಕ್ತ ವ್ಯಾಪಾರ ನೀತಿಯ ತಟವಟವನ್ನು ಅರ್ಥ ಮಾಡಿಕೊಳ್ಳಲು ಈ ಎರಡು ನಿದರ್ಶನಗಳು ಸಾಲವೆ?

**ಭಾರತ ಮತ್ತು ಅಮೆರಿಕಾ**

ವಿಶ್ವ ಬ್ಯಾಂಕ್, ಐ.ಎಂ.ಎಫ್., ಗ್ಯಾಟ್ ಮತ್ತು ಡಬ್ಲ್ಯು.ಟಿ.ಓ. ಎಂಬ ಚತುಷ್ಪಾದಗಳಿಂದ ಅಮೆರಿಕಾ ಪ್ರವೇಶಿಸಿದಲ್ಲೆಲ್ಲ ಸ್ಥಳಾಂತರ, ಪರಿಸರನಾಶ, ಮಾನವ ಹಕ್ಕುಗಳ ದಮನ ಮತ್ತು ಭ್ರಷ್ಟ ಅಧಿಕಾರಿಗಳ ದರ್ಬಾರು ನಡೆದಿವೆ. ಮೊರಾಕ್ಕೊ, ತಾಂಜಾನಿಯಾ, ಇಥಿಯೋಪಿಯಾಗಳಲ್ಲಿ ಇವುಗಳ ರಾಕ್ಷಸ ನೃತ್ಯ ನಡೆದಿದೆ. ೧೯೭೪ರಿಂದ ೧೯೯೧ರವರೆಗೆ ಇಂತಹ ವಿಫಲ ಯೋಜನೆಗಳ ಪ್ರಮಾಣ ಶೇ. ೫೦ರಷ್ಟು.

ಇಂತಹ ಯೋಜನೆಗಳ ವಿಫಲತೆ ಅಂಗೈ ಹುಣ್ಣಿನಷ್ಟು ಸ್ಪಷ್ಟವಾಗಿದ್ದರೂ ಅಮೆರಿಕಾ ಒಡ್ಡಿದ ಉರುಳಿಗೆ ಭಾರತವೂ ತನ್ನ ಕುತ್ತಿಗೆ ಚಾಚಿದೆ. ಲ್ಯಾಟಿನ್ ಅಮೆರಿಕಾ ದೇಶಗಳ ಹಾಗೆ ರಿಯಾಯಿತಿಗಳಿಗೆ ಚೌಕಾಶಿ ಮಾಡುವ ಕೌಶಲ್ಯವಾಗಲಿ ನೈತಿಕ ಪ್ರಜ್ಞೆಯಾಗಲಿ ರಾಷ್ಟ್ರಾಭಿಮಾನವಾಗಲಿ ನಮ್ಮ ನಾಯಕರಲ್ಲಿ ಕಾಣದಿರುವುದರಿಂದ ಅವರು ಐ.ಎಂ.ಎಫ್.ನ ಹಣದ ರಾಶಿ ಕಂಡು ಜೊಲ್ಲು ಸುರಿಸುತ್ತಿದ್ದಾರೆ; ಅಮೆರಿಕಾದ ಷರತ್ತುಗಳಿಗೆ ತುಟಿ ಪಿಟ್ಟೆನ್ನದೆ ತಲೆಹಾಕುತ್ತಿದ್ದಾರೆ.

ಭಾರತದ ಕುತ್ತಿಗೆಗೆ ವಿಶ್ವ ಬ್ಯಾಂಕ್, ಐ.ಎಂ.ಎಫ್.ಗಳ ಉರುಲು ಬಿಗಿಯತೊಡಗಿದ್ದು ೧೯೮೦ರ ನಂತರ. ಆ ವರೆಗೂ ಭಾರತ ಸಾಲಗಾರ ದೇಶವಾಗಿರಲಿಲ್ಲ. ಆದಾಯವು ವೆಚ್ಚಕ್ಕಿಂತ ಅಧಿಕವಾಗೇ ಇತ್ತು.

ಹಾಗೆ ನೋಡಿದರೆ, ೧೯೬೬ರಲ್ಲೇ ಭಾರತದ ಒಳಗೆ ವಿಶ್ವ ಬ್ಯಾಂಕ್ ಪ್ರವೇಶಿಸಿತ್ತು. ಅದರ ಷರತ್ತುಗಳ ಅನ್ವಯ ರಫ್ತು ಸುಂಕ ಹೆಚ್ಚಾಯಿತು. ಆಮದು ಸುಂಕ ಕಡಿಮೆಯಾಯ್ತು. ರೂಪಾಯಿ ಅಪಮೌಲ್ಯವಾಯಿತು. ಪರಿಣಾಮವಾಗಿ, ಭಾರತದ ರಫ್ತಿನ ಪ್ರಮಾಣ ಶೇ. ೩.೫ ರಿಂದ ಶೇ. ೦.೫ಕ್ಕೆ ಇಳಿಯಿತು. ಹೊಸ ಬಂಡವಾಳದ ನಿರ್ಮಾಣದ ಪ್ರಮಾಣ ಶೇ. ೭.೩ ರಿಂದ ೪.೩ಕ್ಕೆ ಕುಸಿಯಿತು.

ಆದರೆ ೧೯೮೦ರ ನಂತರ ವಿದೇಶಿ ಸಾಲ ಏರುತ್ತ ಹೋಗಿ ಆರ್ಥಿಕ ಕೊರತೆಯೂ ಏರುತ್ತ ಹೋಯಿತು. ವಿದೇಶಿ ಸಾಲಕ್ಕಾಗಿ ಭಾರತ ಸರ್ಕಾರ ತೆರಬೇಕಾಗಿದ್ದ ಬಡ್ಡಿ ೧೩ಪಟ್ಟು ಹೆಚ್ಚಾಯಿತು. ದೇಶವು ದಿವಾಳಿಯ ಅಂಚಿಗೆ ಬಂದು ನಿಂತಿತು. ದಿವಾಳಿ ದೇಶವನ್ನು '೨೧ನೇ ಶತಮಾನಕ್ಕೆ' ಒಯ್ಯಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ.

ಆದರೆ ಸುಳ್ಳು ಮತ್ತು ಪೊಳ್ಳು ಘೋಷಣೆಗಳಿಂದ ಜನರ ದಿಕ್ಕು ತಪ್ಪಿಸುವ ಪ್ರಯತ್ನಗಳು ನಿರಂತರ ನಡೆದಿವೆ. ವರ್ಷದಿಂದ ವರ್ಷಕ್ಕೆ ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಿದ್ದರೂ ಸಹ, ಶೇ.೮೦ಕ್ಕಿಂತಲೂ ಹೆಚ್ಚಾಗಿರುವ ಜನಸಾಮಾನ್ಯರಿಗೆ ದಿನನಿತ್ಯದ ಜೀವನ ದುರ್ಭರವಾಗಿದ್ದರೂ ಸಹ ಜನನಾಯಕರು ತಮ್ಮ ಭ್ರಾಮಕ ಲೋಕದಿಂದ ಹೊರಗೆ ಬಂದಿಲ್ಲ. ಐ.ಎಂ.ಎಫ್. ನಮ್ಮ ಉದ್ಧಾರಕ್ಕಾಗಿಯೇ ಬಂದಿದೆ ಎಂಬ ಭ್ರಮಾಲೋಕ ಇನ್ನೂ ಹರಿದಿಲ್ಲ.

ಫ್ರಾನ್ಸ್ ಮತ್ತು ಜರ್ಮನಿ ದೇಶಗಳಲ್ಲಿ ಐ.ಎಂ.ಎಫ್. ಧೋರಣೆಗಳನ್ನು ಜನ ವಿರೋಧಿಸಿದರು. ವಿರೋಧ ಎಷ್ಟು ಪ್ರಬಲವಾಗಿತ್ತೆಂದರೆ ಅಲ್ಲಿನ ಸರ್ಕಾರಗಳು 'ಆರ್ಥಿಕ ಪುನರ್ವಿನ್ಯಾಸ'ದಿಂದ ಹಿಂದಕ್ಕೆ ಸರಿಯಬೇಕಾಯಿತು. ಮೊರಕ್ಕೊದಲ್ಲೂ ೧೯೯೦ರಲ್ಲಿ ಸಂಭವಿಸಿದ ಜನಾಂದೋಲನದ ಬಿಸಿಗೆ ಅಲ್ಲಿನ ಸರ್ಕಾರ ಮಣಿಯಬೇಕಾಯಿತು. ಭಾರತದಲ್ಲಿ ಇಂತಹ ಜನಾಂದೋಲನ ನಡೆಯುವ ಅಗತ್ಯ ಹಿಂದೆಂದಿಗಿಂತಲೂ ಈಗ ಹೆಚ್ಚಾಗಿದೆ: ಪೊಳ್ಳು ಭಾವೋದ್ರೇಕದ ಪರವಾಗಿ ಅಲ್ಲ, ಮೂರ್ತವಾದ ಆರ್ಥಿಕ ಉರುಲಿನ ವಿರುದ್ಧ.

ಬಡತನ ನಿರ್ವಹಣೆ ಯೋಜನೆಯಲ್ಲಿನ ನಿರ್ವಹಣೆಯ ಬಡತನ ನಮ್ಮ ನಾಯಕರಿಗೆ ತಿಳಿದಿಲ್ಲವೆಂದಲ್ಲ; ಅವರಲ್ಲಿ ಕೊರತೆಯಿರುವುದು ಮಾಹಿತಿಯಲ್ಲಲ್ಲ - ರಾಷ್ಟ್ರಾಭಿಮಾನ ಮತ್ತು ನೈತಿಕತೆಗಳಲ್ಲಿ, ಜನಪರ ಕಾಳಜಿಗಳಲ್ಲಿ!

ಎಂ. ವಿ. ಚಕ್ರಪಾಣಿ
ನಂ. ೧/೧೬೦, ಕುರುದಗಡ್ಡಿ, ವೆಂಕಟೇಶ್ವರ ಗುಡಿ ಸಮೀಪ,
ಹೌಸಿಂಗ್ ಬೋರ್ಡ್ ಕಾಲನಿ, ಹಗರಿಬೊಮ್ಮನಹಳ್ಳಿ -೫೮೩ ೨೧೨,
ಜಿ. ಬಳ್ಳಾರಿ

ದುರ್ಬಲಗೊಳ್ಳುತ್ತಿರುವ ಕಲ್ಯಾಣ ಕಾರ್ಯಕ್ರಮ

# ಭಾರತದಲ್ಲಿ ಸಾರ್ವಜನಿಕ ವಿತರಣಾ ವ್ಯವಸ್ಥೆ

*ಲೇಖಕಿ : ಮಧುರಾ ಸ್ವಾಮಿನಾಥನ್*

ಪುಟ : ೧೪೦ ಬೆಲೆ : ರೂ. ೯೫

*ಪ್ರಕಾಶಕರು :* **ಲೆಫ್ಟ್‌ವರ್ಡ್ ಬುಕ್ಸ್**
ನಯಾ ರಾಸ್ತಾ ಪಬ್ಲಿಷರ್ಸ್ ಪ್ರೈ. ಲಿ.
೨೭-೨೯, ಭಾಯಿ ವೀರಸಿಂಗ್ ಮಾರ್ಗ,
ನವದೆಹಲಿ : ೧೧೦೦೦೧೧

ಭಾರತದಂತಹ ಅಭಿವೃದ್ಧಿಶೀಲ ದೇಶದಲ್ಲಿ ಜನ ಕಲ್ಯಾಣ ಕಾರ್ಯಕ್ರಮಗಳಲ್ಲಿ ಬಹುಮುಖ್ಯವಾದ ಸಾರ್ವಜನಿಕ ವಿತರಣಾ ವ್ಯವಸ್ಥೆ (ಪಿ.ಡಿ.ಎಸ್.) ದುರ್ಬಲ ಗೊಳ್ಳುತ್ತಿರುವ ದುಷ್ಪರಿಣಾಮಗಳನ್ನು ಮಧುರಾ ಸ್ವಾಮಿನಾಥನ್ ತಮ್ಮ ಸಂಶೋಧನಾ ಪ್ರಬಂಧದಲ್ಲಿ ಸರಳವಾಗಿ ಹಾಗೂ ಸಮರ್ಥವಾಗಿ ತಿಳಿಸಿದ್ದಾರೆ. ಅದನ್ನು ಬರೆಯಲು ಅವರು ಜನವಾದಿ ಮಹಿಳಾ ಸಂಘಟನೆಯ ಹಲವು ಪ್ರಮುಖರ ಮತ್ತು ಫುಡ್ ಕಾರ್ಪೊರೇಷನ್ ಆಫ್ ಇಂಡಿಯಾ, ಕೇಂದ್ರ ಸರಕಾರದ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಆಹಾರ ಹಾಗೂ ಗ್ರಾಹಕರ ವ್ಯವಹಾರಗಳ ಕೇಂದ್ರ ಸಚಿವಾಲಯ, ಮುಂತಾದವುಗಳ ಮುಖ್ಯಸ್ಥರ ನೆರವನ್ನೂ ಪಡೆದಿದ್ದಾರೆ. ದೆಹಲಿಯ ಲೆಫ್ಟ್‌ವರ್ಡ್ ಬುಕ್ಸ್‌ನವರು ಈ ಕೃತಿಯನ್ನು ಪ್ರಕಟಿಸಿರುವುದು ಸಮಯೋಚಿತ ಹಾಗೂ ಸ್ವಾಗತಾರ್ಹ ವಾಗಿದೆ. ಇದು ಸಾರ್ವಜನಿಕ ನೀತಿ ನಿರೂಪಕರಿಗೆ, ಸಮಾಜಸೇವಾಸಕ್ತರಿಗೆ ಅತಿ ಉಪಯುಕ್ತವಾದ ಪ್ರಬುದ್ಧ ಪ್ರಬಂಧವಾಗಿದೆ. ಪುಸ್ತಕ ಆಂಗ್ಲಭಾಷೆಯಲ್ಲಿದೆ.

ಮಧುರಾ ಸ್ವಾಮಿನಾಥನ್ ಅವರು ತಮ್ಮ ಪ್ರಬಂಧದಲ್ಲಿ ಭಾರತದಲ್ಲಿ ಪಿ.ಡಿ.ಎಸ್.ನ ಬೆಳವಣಿಗೆಯ ವಿವಿಧ ಹಂತಗಳು, ಆಹಾರ ಧಾನ್ಯಗಳ ಪಿ.ಡಿ.ಎಸ್.ನಮಗೆ ಯಾಕೆ ಬೇಕು, ಇಂದಿನ ಪಿ.ಡಿ.ಎಸ್.ನಲ್ಲಿರುವ ಕುಂದು ಕೊರತೆಗಳೇನು ಮತ್ತು ಅದರ ಸೋಲು ಗೆಲುವುಗಳೇನು, ಕೆಲವು ಆಯ್ದ ದೇಶಗಳ ಅನುಭವಗಳನ್ನೂ ಆಧರಿಸಿ ಹೊಸ ಆರ್ಥಿಕ ನೀತಿಗನುಗುಣವಾಗಿ ನಡೆಸಿದ ಸಂರಚನಾ ಹೊಂದಾಣಿಕೆಯಲ್ಲಿ ಆಹಾರ ಸಬ್ಸಿಡಿಯ ಪಾತ್ರ ಏನು, ೧೯೯೧ರಿಂದ ಸರಕಾರದ ಧೋರಣೆಯಲ್ಲಿ ಆದ ಬದಲಾವಣೆಗಳು, ಜಾಗತಿಕ ಬ್ಯಾಂಕಿನ ಸಲಹೆಗಳ ಮತ್ತು ಪರ್ಯಾಯ ಸಲಹೆಗಳ ತುಲನಾತ್ಮಕ ವಿಶ್ಲೇಷಣೆ, ಪಿ.ಡಿ.ಎಸ್.ನ ಸುಧಾರಣೆಗೆ ಏನು ಮಾಡಬೇಕು, ಇತ್ಯಾದಿ ವಿಷಯಗಳನ್ನು ಎಂಟು ಅಧ್ಯಾಯಗಳಲ್ಲಿ ವಿವರಿಸಿದ್ದಾರೆ.

ಎಲ್ಲಾ ಜನರಿಗೆ, ಎಲ್ಲಾ ಕಾಲದಲ್ಲಿ, ಸುಲಭ ದರಗಳಲ್ಲಿ ಮತ್ತು ಸಾಕಷ್ಟು ಪ್ರಮಾಣದಲ್ಲಿ, ಆರೋಗ್ಯಕರವಾದ ಹಾಗೂ ಪೌಷ್ಟಿಕವಾದ, ಕ್ರಿಯಾಶೀಲ ಜೀವನ ನಡೆಸಲು ಬೇಕಾದ ಆಹಾರ ಪಡೆಯುವುದೇ ''ಆಹಾರ ಸಂರಕ್ಷಣೆ'' ಎಂದು ೧೯೯೬ರಲ್ಲಿ ನಡೆದ ಜಾಗತಿಕ ಆಹಾರ ಸಂರಕ್ಷಣೆಯ ರೋಮ್ ಘೋಷಣಾ ಪತ್ರದಲ್ಲಿ ತಿಳಿಸಲಾಗಿದೆ. ಈ ಮಾನವೀಯ ಹಾಗೂ ಜನ ಕಲ್ಯಾಣದ ಗುರಿ ಸಾಧನೆಗಾಗಿ ಭಾರತದಂತಹ ದೇಶಕ್ಕೆ ಆಹಾರ ಧಾನ್ಯಗಳ ಪಿ.ಡಿ.ಎಸ್. ಅತ್ಯಗತ್ಯ. ಭಾರತದಲ್ಲಿ ೧೯೩೯-೪೫ರ ಯುದ್ಧ ಕಾಲದಲ್ಲಿ, ನಂತರದ ಬರಗಾಲ ಹಾಗೂ ಕೊರತೆಯ ಸಂದರ್ಭಗಳಲ್ಲಿ ಪಡಿತರ ಪದ್ಧತಿ ಪ್ರಾರಂಭವಾಗಿತ್ತು. ಮುಂದೆ ಪಂಚವಾರ್ಷಿಕ ಯೋಜನೆಗಳಲ್ಲಿ ''ಜನಕಲ್ಯಾಣ'' ಕಾರ್ಯಕ್ರಮವಾಗಿ ೧೯೬೦ರ ದಶಕದಲ್ಲಿ ಪಡಿತರ ಪದ್ಧತಿಯನ್ನು ಪಿ.ಡಿ.ಎಸ್. ಆಗಿ ಪರಿವರ್ತಿಸಲಾಯಿತು. ೧೯೭೦ ಮತ್ತು ೧೯೮೦ರ ದಶಕಗಳಲ್ಲಿ ಈ ಜನಕಲ್ಯಾಣ ಕಾರ್ಯಕ್ರಮವನ್ನು ಸಾಕಷ್ಟು ವಿಸ್ತರಿಸಲಾಯಿತು. ಅದರ ಸೋಲು ಗೆಲುವುಗಳು ಆಯಾ ರಾಜ್ಯ ಸರಕಾರಗಳ ಜನಹಿತಕ್ಕಾಗಿ ಇರುವ ರಾಜಕೀಯ ಬದ್ಧತೆಗಳಿಗನುಗುಣವಾಗಿವೆ ಎನ್ನುತ್ತಾರೆ ಮಧುರಾ ಸ್ವಾಮಿನಾಥನ್. ೧೯೯೧ರ ನಂತರ ಅನುಸರಿಸಿದ 'ಮಾರುಕಟ್ಟೆ ಆಧರಿತ ಆರ್ಥಿಕ ನೀತಿ'ಯಿಂದ ಪಿ.ಡಿ.ಎಸ್. ದುರ್ಬಲಗೊಳ್ಳುತ್ತಾ ಬಂದಿರುವುದರ ಕುರಿತು ಇವರು ತಮ್ಮ ತೀವ್ರ ಆತಂಕ ವ್ಯಕ್ತಪಡಿಸಿದ್ದಾರೆ.

೧೯೯೬ರ ರೋಮ್ ಘೋಷಣಾ ಪತ್ರವನ್ನು ಅದೇ ವರ್ಷ ಜಾಗತಿಕ ಬ್ಯಾಂಕ್ ಅಲಕ್ಷಿಸಿ ಭಾರತಕ್ಕೆ ಬೇರೆಯೇ ಸಲಹೆಗಳನ್ನು ನೀಡಿದೆ. ಅದರಂತೆ, ಬಡವರಲ್ಲಿ ಕಡುಬಡವರಿಗೆ ಮಾತ್ರ (ಬಡತನ ರೇಖೆಯ ಕೆಳಮಟ್ಟದಲ್ಲಿರುವ ಶೇ. ೭೫ರಷ್ಟು ಜನರಿಗೆ) ಪಿ.ಡಿ. ಎಸ್.ನಲ್ಲಿ ಆಹಾರ ಧಾನ್ಯಗಳನ್ನು ಒದಗಿಸಬೇಕು. ಬಡವರನ್ನು ಗುರುತಿಸಲು ಅವರ ಮಾಸಿಕ ಆದಾಯ ಮಾತ್ರ ಅಳತೆಗೋಲಾಗಿರಬೇಕು. ಆಹಾರದ ಮೇಲಿನ ಸಬ್ಸಿಡಿ ಕಡಿತಗೊಳಿಸಲು ಆಹಾರ ಚೀಟಿಗಳನ್ನು ಒದಗಿಸಬೇಕು. ಆಹಾರ ಧಾನ್ಯಗಳ ವ್ಯಾಪಾರದ ಮೇಲಿನ ಎಲ್ಲಾ ನಿರ್ಬಂಧನೆಗಳನ್ನು ತೆಗೆದುಹಾಕಬೇಕು. ಫುಡ್ ಕಾರ್ಪೊರೇಷನ್ ಆಫ್ ಇಂಡಿಯಾವನ್ನು ಖಾಸಗೀಕರಣ ಗೊಳಿಸಬೇಕು. ಮಾರುಕಟ್ಟೆ ಆಧಾರದಲ್ಲಿ ಬೆಲೆ ನಿರ್ಣಯವಾಗುವುದನ್ನೇ ಬೆಂಬಲಿಸಬೇಕು. ಪಿ.ಡಿ.ಎಸ್. ಜಾರಿಗೊಳಿಸಲು ಪಂಚಾಯತ್ ಸಂಸ್ಥೆಗಳನ್ನು ಬಳಸಿಕೊಳ್ಳಬೇಕು ಮತ್ತು ಈ ಕಾರ್ಯಕ್ರಮಕ್ಕೆ ಮೀಸಲಾಗಿರುವ ಸಂಪನ್ಮೂಲದ ಸ್ವಲ್ಪಾಂಶವನ್ನು ನಿರುದ್ಯೋಗ ನಿವಾರಣೆ ಮುಂತಾದ ಜನಕಲ್ಯಾಣ ಕಾರ್ಯಕ್ರಮಗಳಿಗೆ ಬಳಸಬೇಕು. ಈ ಸಲಹೆಗಳಂತೆ ೧೯೯೭ರಲ್ಲಿ ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಮೊಟಕುಗೊಳಿಸಲಾಯಿತು.

ಮಧುರಾ ಸ್ವಾಮಿನಾಥನ್ ವಿದೇಶಗಳ, ದೇಶದ ವಿವಿಧ ರಾಜ್ಯಗಳ, ಮುಖ್ಯವಾಗಿ ಹಲವು ದಶಕಗಳಿಂದ ಕೇರಳ ರಾಜ್ಯದಲ್ಲಿ ನೂರಕ್ಕೆ ನೂರರಷ್ಟು ವ್ಯಾಪಕವಾಗಿ ಜಾರಿಗೊಳಿಸಿದ ಪಿ.ಡಿ.ಎಸ್.ನ ಶ್ರೀಮಂತ ಅನುಭವಗಳ ಆಧಾರದಲ್ಲಿ ಈ ವ್ಯವಸ್ಥೆಯನ್ನು ಸಾರ್ವತ್ರಿಕವಾಗಿ ವಿಸ್ತರಿಸಲು ಪರ್ಯಾಯ ಸಲಹೆಗಳನ್ನು ನೀಡಿದ್ದಾರೆ. ಬಡತನವನ್ನು ಅಳೆಯಲು ವ್ಯಕ್ತಿಗಳ [illegible] ಅವಲಂಬಿಸದೆ ಆದಾಯದಲ್ಲಿ ಶೇ. [illegible] ಆಹಾರ ಪದಾರ್ಥಗಳಿಗೇ ಖರ್ಚು ಮಾಡುವವರನ್ನು ಬಡವರೆಂದು ಪರಿಗಣಿಸಿ ಶೇ. ೮೦-೮೫ರಷ್ಟು ಭಾರತದ ಕುಟುಂಬಗಳಿಗೆ ಪಿ.ಡಿ.ಎಸ್. ವಿಸ್ತರಿಸಬೇಕು ಎನ್ನುತ್ತಾರೆ. ಅಭಿವೃದ್ಧಿ ಹೊಂದಿದ ಅಮೆರಿಕ ಮೊದಲಾದ ದೇಶಗಳು ತಮ್ಮ ಆಹಾರ ಧಾನ್ಯಗಳ ಉತ್ಪಾದನೆಯ ಸಿಂಹಪಾಲನ್ನು ರಫ್ತಿಗಾಗಿ ಬಳಸುತ್ತಿವೆ. ಆದರೂ ಅವುಗಳ ಮೇಲೆ ಗಣನೀಯ ಪ್ರಮಾಣದಲ್ಲಿ ಸಬ್ಸಿಡಿ ನೀಡುತ್ತಿವೆ. ಭಾರತದಲ್ಲಿ ಕಳೆದ ಮೂರು ದಶಕಗಳಲ್ಲಿ ಆಹಾರ ಸಬ್ಸಿಡಿಯ ವಾರ್ಷಿಕ ಸರಾಸರಿ ಒಟ್ಟು ರಾಷ್ಟ್ರೀಯ ಉತ್ಪನ್ನದ ಕೇವಲ ಶೇ. ೦.೪ ರಷ್ಟು ಎಂದೂ, ಕೋಟ್ಯಾಂತರ ಜನರ ಹಸಿವು ನೀಗಿಸಲು, ಆರೋಗ್ಯ ಕಾಪಾಡಲು ಇಷ್ಟು ಅಲ್ಪ ಪ್ರಮಾಣದ ಸಬ್ಸಿಡಿಯನ್ನು ಕಡಿತಗೊಳಿಸದೆ ಪಿ.ಡಿ.ಎಸ್. ಅನ್ನು ವ್ಯಾಪಕವಾಗಿ ಜಾರಿಗೊಳಿಸಬೇಕು ಎನ್ನುತ್ತಾರೆ. ಪಿ.ಡಿ.ಎಸ್.ನ್ನು ಮೊಟಕುಗೊಳಿಸಿದರೆ ಆಹಾರ ಧಾನ್ಯಗಳ ವಿತರಣೆ ಕಡಿತಗೊಳ್ಳಲಿದೆ. ಅವುಗಳ ದಾಸ್ತಾನು ಹೆಚ್ಚಲಿದೆ. ದಾಸ್ತಾನು ಹಾಗೂ ವಿತರಣಾ ಖರ್ಚುಗಳು ಏರಲಿವೆ. ಕ್ರಮೇಣ ಸಾರ್ವಜನಿಕ ಖರೀದಿ ಮತ್ತು ದಾಸ್ತಾನು ಕಡಿತಗೊಳ್ಳಲಿದೆ. ಆಹಾರ ಧಾನ್ಯಗಳ ಬೆಲೆಗಳು ಮಾರುಕಟ್ಟೆಯ ಏಳಿತ ಸೆಳೆತಗಳಿಗೆ ಸಿಕ್ಕಿ ಇನ್ನಷ್ಟು ಜನರು ಬಡತನ ರೇಖೆಯ ಕೆಳಮಟ್ಟಕ್ಕೆ ತಳ್ಳಲ್ಪಡುತ್ತಾರೆ ಎಂದು ಉದಾಹರಣಾ ಸಹಿತ ತೋರಿಸಿಕೊಟ್ಟಿದ್ದಾರೆ.

ಪಿ.ಡಿ.ಎಸ್. ಜಾರಿಗೊಳಿಸಲು ಪಂಚಾಯತ್‌ಗಳಿಗೆ ಜವಾಬ್ದಾರಿ ನೀಡುವುದರೊಂದಿಗೆ ಇವುಗಳಿಗೆ ಸಾಕಷ್ಟು ಪ್ರಮಾಣದಲ್ಲಿ ಅಧಿಕಾರ, ಅಭಿವೃದ್ಧಿ, ಸಂಪನ್ಮೂಲಗಳನ್ನು ವಿಕೇಂದ್ರೀಕರಿಸಬೇಕೆಂದು ಮಧುರಾ ಸ್ವಾಮಿನಾಥನ್ ವಾದಿಸುತ್ತಾರೆ. ನಿರುದ್ಯೋಗ ನಿವಾರಣೆಯಂತಹ ಜನಕಲ್ಯಾಣ ಕಾರ್ಯಕ್ರಮಗಳಿಗೆ ಸಂಪನ್ಮೂಲಗಳನ್ನು ಒದಗಿಸಲು ಆಹಾರ ಪದಾರ್ಥಗಳ ಮೇಲಿನ ಸಬ್ಸಿಡಿ ಕಡಿತಗೊಳಿಸುವ ಬದಲಿಗೆ, ಶ್ರೀಮಂತರ ಆಸ್ತಿ ಆದಾಯಗಳ ಮೇಲೆ ಏರಿಕೆಯ ದರಗಳಲ್ಲಿ ತೆರಿಗೆಗಳನ್ನು ವಿಧಿಸಬೇಕೆನ್ನುತ್ತಾರೆ. ಭಾರತದ ಜನಕೋಟಿಗೆ ಬೇಕಾದಷ್ಟು ಆಹಾರ ಧಾನ್ಯಗಳನ್ನು ಬೆಳೆಸಲು ಸರಕಾರ ಪ್ರೋತ್ಸಾಹಿಸಿ, ಪಿ.ಡಿ.ಎಸ್.ನ್ನು ಇನ್ನಷ್ಟು ಬಲಪಡಿಸಲು ಸಲಹೆ ಮಾಡಿದ್ದಾರೆ.

ಭಾರತದ ಆರ್ಥಿಕ ನೀತಿಯನ್ನು ನಮ್ಮ ಜನರ ಹಿತಾಸಕ್ತಿಗಳಿಗನುಗುಣವಾಗಿ ರೂಪಿಸಬೇಕೇ ಹೊರತು ಅಮೆರಿಕಾ ಮೊದಲಾದ ದೇಶಗಳ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ಐ.ಎಂ.ಎಫ್., ವಿಶ್ವ ಬ್ಯಾಂಕ್, ವಿಶ್ವ ವ್ಯಾಪಾರ ಸಂಸ್ಥೆಗಳ ಷರತ್ತುಗಳಿಗನುಗುಣವಾಗಿ ಅಲ್ಲ, ಎಂದು ಮಧುರಾ ಸ್ವಾಮಿನಾಥನ್ ಅವರ ಪ್ರಬಂಧದಲ್ಲಿ ದೃಢಪಡಿಸಿದ್ದಾರೆ.

ಸಿ. ಆರ್. ಭಟ್
೪, ಶಕ್ತಿ ಅಪಾರ್ಟಮೆಂಟ್ಸ್, ಶ್ರೀದೇವಿ ನಗರ,
ವಿದ್ಯಾಗಿರಿ, ಧಾರವಾಡ - [illegible]

# ಅಮೆರಿಕದ ತಂತ್ರಗಳಿಗೆ ಕ್ಯೂಬಾದ ತಿರುಗೇಟು

ತನಗೆ ಶತ್ರುವೆಂದು ಕಂಡುಬರುವ ದೇಶವೊಂದನ್ನು ನಾಶಗೊಳಿಸಿ ವಶಪಡಿಸಿಕೊಳ್ಳಲು ಇನ್ನೊಂದು ದೇಶ ಪ್ರಯತ್ನಿಸುವುದು ಹೊಸದೇನಲ್ಲ. ಅದು ಇತಿಹಾಸ ದುದ್ದಕ್ಕೂ ನಡೆದುಕೊಂಡು ಬಂದಿದೆ. ನೇರವಾಗಿ ಯುದ್ಧದಲ್ಲಿ ತೊಡಗುವುದಕ್ಕೆ ವ್ಯವಧಾನ ಇಲ್ಲದಾಗ ಒಳಗಿನಿಂದ ಆ ದೇಶವನ್ನು ದುರ್ಬಲಗೊಳಿಸಲು ನಾನಾ ಬಗೆಯ ಸಂಚುಗಳನ್ನು ನಡೆಸುವುದು ಹಿಂದಿನಿಂದ ಬಂದದ್ದು. ದೇಶದ ನಾಯಕರನ್ನು ಕೊಲೆ ಮಾಡಲು, ಜನರನ್ನು ಪ್ರಚೋದಿಸಿ ದಂಗೆ ಏಳುವಂತೆ ಮಾಡಲು, ಅರ್ಥ ವ್ಯವಸ್ಥೆಯನ್ನು ದುರ್ಬಲಗೊಳಿಸಲು ಪ್ರಯತ್ನಿಸುವುದು, ವಿಧ್ವಂಸ ಚರ್ಯೆಗಳನ್ನು, ಬುಡಮೇಲು ಕೃತ್ಯಗಳನ್ನು ನಡೆಸುವುದು ಹೀಗೆ ಹತ್ತಾರು ವಿಧಾನಗಳು. ಇಂಥವನ್ನು ಸಾಮ್ರಾಜ್ಯಶಾಹಿ ದೇಶಗಳು ವಸಾಹತು ಸಾಮ್ರಾಜ್ಯ ಕಟ್ಟಿಕೊಳ್ಳಲು ಯಾವ ಅಳುಕೂ ಇಲ್ಲದೆ ಉಪಯೋಗಿಸಿಕೊಂಡಿವೆ. ಭಾರತದ ದೇಸೀ ಸಂಸ್ಥಾನಗಳನ್ನು ವಶಪಡಿಸಿಕೊಳ್ಳಲು ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಅನುಸರಿಸಿದ ಕ್ರಮಗಳು ಒಳ್ಳೆಯ ಉದಾಹರಣೆ. ಈಗಲೂ ಈ ವಿಧಾನಗಳು ಬಳಕೆಯಲ್ಲಿರುವುದು ಎಲ್ಲರಿಗೂ ತಿಳಿದಿರುವ ವಿಚಾರ. ನಾಗರಿಕ ರಾಷ್ಟ್ರಗಳೆಂದು, ಪ್ರಜಾಪ್ರಭುತ್ವ ರಾಷ್ಟ್ರಗಳೆಂದು ಕೊಚ್ಚಿಕೊಳ್ಳುವ ದೇಶಗಳು ಇಂಥ ಕೃತ್ಯಗಳಲ್ಲಿ ಪರಿಣತಿ ಸಾಧಿಸಿವೆ ಎಂದು ಹೇಳಬಹುದು.

ಗೂಢಚರ್ಯೆ ಸಂಸ್ಥೆಗಳನ್ನು ಧಾರಾಳವಾಗಿ ಬಳಸಿಕೊಂಡು, ನಾನಾಬಗೆಯ ಆಮಿಷಗಳನ್ನು ಒಡ್ಡಿ ವಿಧ್ವಂಸ ಕೃತ್ಯ ಎಸಗುವುದು ಎರಡನೆಯ ಮಹಾಯುದ್ಧದ ನಂತರದ ಕಾಲದಲ್ಲಿ ದೊಡ್ಡ ಪ್ರಮಾಣದಲ್ಲಿಯೇ ನಡೆದಿದೆ. ಪಾಕಿಸ್ತಾನದ ಐ.ಎಸ್.ಐ. ಕಾಶ್ಮೀರದಲ್ಲಿ ನಡೆಸುತ್ತಿರುವ ಕೃತ್ಯಗಳು ನಮಗೆ ಹತ್ತಿರದ ಉದಾಹರಣೆ. ಅಂತರ ರಾಷ್ಟ್ರೀಯವಾಗಿ ಅಮೆರಿಕದ ಸಿಐಎ (ಕೇಂದ್ರ ಗೂಢಚರ್ಯೆ ಸಂಸ್ಥೆ) ದುಷ್ಕೃತ್ಯಗಳಿಗೆ ಕುಖ್ಯಾತ. ಶೀತಲ ಯುದ್ಧದ ಕಾಲದಲ್ಲಿ ಸಮಾಜವಾದಿ ದೇಶಗಳಲ್ಲಿ ಅಸ್ಥಿರತೆ ಉಂಟುಮಾಡಲು ಅದು ಅನುಸರಿಸಿದ ಕ್ರಮ ಹಲವಾರು. ರಹಸ್ಯವಾಗಿ ಶಸ್ತ್ರಾಸ್ತ್ರಗಳನ್ನು ಒದಗಿಸುವುದು, ಕೂಲಿ ಸಿಪಾಯಿಗಳನ್ನು ತರಬೇತುಗೊಳಿಸಿ ರವಾನಿಸುವುದು, ಅಪಪ್ರಚಾರ ನಡೆಸುವುದು, ಆರ್ಥಿಕ ದಿಗ್ಬಂಧನ ಹೇರುವುದು ಮೊದಲಾದವನ್ನು ಅಮೆರಿಕದ ಸರಕಾರ ಅನುಸರಿಸುತ್ತ ಬಂದಿದೆ. ಪ್ರಸಾರ ಮಾಧ್ಯಮಗಳ ಮೂಲಕವಾಗಿ ಅಪಪ್ರಚಾರ ನಡೆಸುವುದು ಈಗಿನ ಇಲೆಕ್ಟ್ರಾನಿಕ್ ಯುಗದಲ್ಲಿ ಬಹುಮುಖ್ಯವಾದುದಾಗಿದೆ. ನಾನಾಕಾರಣಗಳಿಂದಾಗಿ ದೇಶವನ್ನು ತ್ಯಜಿಸಿ ಹೊರಗೆ ಬಂದು ಆಶ್ರಯ ಪಡೆದವರನ್ನು ಉಪಯೋಗಿಸಿಕೊಂಡು ಪ್ರಚಾರ ನಡೆಸುವುದು, ಜನರನ್ನು ಎತ್ತಿಕಟ್ಟಲು ಪ್ರಯತ್ನಿಸುವುದು. ಇದನ್ನು ಶೀತಲ ಯುದ್ಧದ ಕಾಲದಲ್ಲಿ ಅಮೆರಿಕ ವ್ಯಾಪಕವಾಗಿ ನಡೆಸಿತು. ಹಿಂದಿನ ಸೋವಿಯತ್ ಒಕ್ಕೂಟ ಹಾಗೂ ಪೂರ್ವ ಯುರೋಪಿನ ರಾಷ್ಟ್ರಗಳಿಂದ ಬಂದು ಅಮೆರಿಕದಲ್ಲಿ ಆಶ್ರಯ ಪಡೆದ ಸಾಮಾನ್ಯ ನಾಗರಿಕರನ್ನು ದೊಡ್ಡ ಜನನಾಯಕರೆಂದು ಭಿನ್ನಮತೀಯ ಧುರೀಣರೆಂದು ಪ್ರಚಾರ ನಡೆಸುತ್ತಿದ್ದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅದರಿಂದ ಹೆಚ್ಚಿನ ಪ್ರಯೋಜನವಾಗದೇ ಹೋದದ್ದೂ ಸರ್ವವಿದಿತ.

ಈಗ ಯಾವ ಪೈಪೋಟಿಯೂ ಇಲ್ಲದೆ ಅತ್ಯಂತ ಪ್ರಬಲ ರಾಷ್ಟ್ರವಾಗಿ, ಏಕ ಕೇಂದ್ರೀಯ ಶಕ್ತಿಯಾಗಿ ಬೆಳೆದಿದ್ದರೂ ಅಮೆರಿಕ ಹೀನ ಕೃತ್ಯಗಳನ್ನು ಎಸಗುವುದಕ್ಕೆ ಹಿಂದೆ ಮುಂದೆ ನೋಡುವುದಿಲ್ಲ. ಈ ದೇಶ ಜಾಗತಿಕ ಸಮುದಾಯದ ಅಭಿಪ್ರಾಯ ವನ್ನು ಕಡೆಗಣಿಸಿ ಉದ್ಧಟತನದಿಂದ ವರ್ತಿಸುತ್ತದೆ. ಮಾನವೀಯ ಪರಿಗಣನೆಯಿಲ್ಲದೆ ಇರಾಕಿನ ಮೇಲೆ ಆರ್ಥಿಕ ದಿಗ್ಬಂಧನ ಮುಂದುವರಿಸುತ್ತಿರುವುದು ಒಂದು ನಿದರ್ಶನ. ಇದರ ಮೇಲೆ ಇರಾಕಿನ ಅಧ್ಯಕ್ಷ ಸದ್ದಾಮ್ ಹುಸೇನನ ಕೊಲೆಗೆ ಪ್ರಯತ್ನಿಸಿ ಅಮೆರಿಕದ ಸಿಐಎ ವಿಫಲಗೊಂಡಿದ್ದು ಸರ್ವವಿದಿತ. ಸದ್ದಾಮ್ ಹುಸೇನ್ ಆಡಳಿತೆಯ ವಿರುದ್ಧ ಪ್ರತ್ಯೇಕವಾದಿ ಕುರ್ದಿಷರು ನಡೆಸುತ್ತಿರುವ ಚಳವಳಿಗೆ ಅಮೆರಿಕ ಎಲ್ಲ ರೀತಿಯ ಕುಮ್ಮಕ್ಕು ನೀಡುತ್ತಿದೆ. ಇಷ್ಟಾದರೂ ಇರಾಕ್ ಅಮೆರಿಕದ ಒತ್ತಡಗಳಿಗೆ ಮಣಿಯದೆ ಇದೆ.

ಅಮೆರಿಕದ ನೆರೆಯಲ್ಲಿ ಅತ್ಯಂತ ಸನಿಹದಲ್ಲಿದ್ದರೂ ಎಲ್ಲ ಬಗೆಯ ಒತ್ತಡಗಳನ್ನೂ ಭಯೋತ್ಪಾದನೆಗಳನ್ನೂ ಎದುರಿಸಿ ನಿಂತಿರುವ ಏಕೈಕ ಧೀಮಂತ ರಾಷ್ಟ್ರ ಕ್ಯೂಬ. ಈ ಪುಟ್ಟ ದ್ವೀಪಸ್ತೋಮದಲ್ಲಿ ಕ್ರಾಂತಿಯ ನಂತರ ಫಿಡೆಲ್ ಕ್ಯಾಸ್ಟ್ರೋ ನೇತೃತ್ವದಲ್ಲಿ ಸಮಾಜವಾದಿ ಸಮಾಜ ನಿರ್ಮಾಣದ ಗುರಿ ಹೊಂದಿರುವ ಸರಕಾರ ಅಸ್ತಿತ್ವಕ್ಕೆ ಬಂದಾಗಿನಿಂದಲೂ ಅಮೆರಿಕ ಅದನ್ನು ಬುಡಮೇಲು ಮಾಡಲು ಸಕಲ ಪ್ರಯತ್ನಗಳನ್ನೂ ನಡೆಸಿದೆ. ಫಿಡೆಲ್ ಕ್ಯಾಸ್ಟ್ರೋ ಕೊಲೆಗೆ ಸಿಐಎ ನಡೆಸಿದ ಸಂಚು ಒಂದಲ್ಲ ಎರಡಲ್ಲ. ಅಮೆರಿಕ ಕಟ್ಟುನಿಟ್ಟಾದ ಆರ್ಥಿಕ ದಿಗ್ಬಂಧನ ಹೇರಿತು. ಅದರಿಂದ ಅಂಥ ಪ್ರಮಾದವೇನೂ ಕ್ಯೂಬಾದಲ್ಲಿ ಆಗಲಿಲ್ಲ. ಈಗಲೂ ಅಧಿಕೃತವಾಗಿ ಆರ್ಥಿಕ ದಿಗ್ಬಂಧನ ಮುಂದುವರಿಯುತ್ತಿದ್ದರೂ, ಅಮೆರಿಕದ ಉದ್ದಿಮೆ ಸಂಸ್ಥೆಗಳು ತಮ್ಮ ಸರಕುಗಳನ್ನು ಕ್ಯೂಬಾಗೆ ರವಾನಿಸುತ್ತಿವೆ. ಕ್ಯೂಬಾದ ಜನರನ್ನು ಕೊಳ್ಳುಬಾಕ ಸಂಸ್ಕೃತಿಗೆ ಈಡುಮಾಡಲು ಇದು ಒಂದು ವಿಧಾನ ಎಂದು ಬಗೆದು ಅಮೆರಿಕದ ಸರಕಾರ ಆರ್ಥಿಕ ದಿಗ್ಬಂಧನದ ಕಡೆಗೆ ಅಷ್ಟಾಗಿ ಗಮನಕೊಡುತ್ತಿಲ್ಲ.

ಕ್ಯೂಬಾದಿಂದ ವಲಸೆಗಾಗಿ ಅಮೆರಿಕಕ್ಕೆ ಹೋಗಲು ಪ್ರಯತ್ನಿಸುತ್ತಿದ್ದವರ ಬಗ್ಗೆ ಅಮೆರಿಕದ ಸರಕಾರ ಅಬ್ಬರದ ಪ್ರಚಾರ ನಡೆಸುತ್ತಿದೆ. ಪ್ರಾರಂಭದಲ್ಲಿ ಅಂಥವರನ್ನು ಭಿನ್ನಮತೀಯರೆಂದೂ ಕ್ಯೂಬಾದಲ್ಲಿ ಮಾನವ ಹಕ್ಕುಗಳ ಕೊರತೆಯಿಂದಾಗಿ ಬಂದವರೆಂದೂ ಅಮೆರಿಕ ಅಂಥವರನ್ನು ಪ್ರದರ್ಶನಕ್ಕಿರಿಸುತ್ತಿತ್ತು. ಕ್ಯೂಬಾದಿಂದ ಕೆಲ ಜನರು ಅಕ್ರಮವಾಗಿ ಅಮೆರಿಕಾಗೆ ವಲಸೆಹೋಗುವ ಸಾಹಸದಲ್ಲಿ ದೋಣಿಯಲ್ಲಿ ಸಮುದ್ರ ದಾಟಲು ಹೋಗಿ ದುರಂತಕ್ಕೀಡಾಗುತ್ತಿದ್ದರು. ಅಂಥವರನ್ನು 'ದೋಣಿ ಜನರು' ಎಂದೇ ಕರೆಯುತ್ತಿದ್ದರು. ಕ್ಯಾಸ್ಟ್ರೋ ಸರಕಾರ ಅಂಥ ಜನರನ್ನು ತಡೆಯುವುದೆಂದು ಅಮೆರಿಕಾ ನಿರೀಕ್ಷಿಸಿತ್ತು, ಅದರಿಂದ ಅಪಪ್ರಚಾರ ನಡೆಸಬಹುದೆಂದು ಲೆಕ್ಕ ಹಾಕಿತ್ತು. ಆದರೆ ಕ್ಯೂಬಾ ಸರಕಾರ ವಲಸೆ ಹೋಗ ಬಯಸುವವರು ಹೋಗಲಿ, ಸುರಕ್ಷಿತ ದೇಶಗಳಿಗೆ ಹೋಗಲಿ ಎನ್ನುವ ಧೋರಣೆ ತಳೆಯಿತು. ಇದು ಒಂದು ರೀತಿಯಲ್ಲಿ ಅಮೆರಿಕಾಗೆ ತಿರುಗೇಟಾಯಿತು. ಹಾಗಿದ್ದರೂ ಅಮೆರಿಕ ಅಪಪ್ರಚಾರಕ್ಕಾಗಿ ಯಾವ ಅವಕಾಶವನ್ನೂ ಕಳೆದುಕೊಳ್ಳಲು ಇಚ್ಛಿಸುವುದಿಲ್ಲ. ಇತ್ತೀಚೆಗಿನ ಅಂಥ ಘಟನೆ ಪುಟ್ಟ ಬಾಲಕ ಎಲಿಯನ್ ಗೊನ್ಜಾಲೆಜ್ ಪ್ರಕರಣ. ಕಳೆದ ವರ್ಷ ನವೆಂಬರ್ ತಿಂಗಳಲ್ಲಿ ಅಮೆರಿಕಾಗೆ ವಲಸೆ ಹೋಗುತ್ತಿದ್ದ ಕ್ಯೂಬಾದ ಜನರ ತಂಡ ದುರಂತಕ್ಕೀಡಾಗಿ ಉಳಿದುಕೊಂಡವನೊಬ್ಬ ಈ ಬಾಲಕ. ಅವನ ತಾಯಿಯೂ ಸಾವಿಗೀಡಾದರು. ಅಮೆರಿಕದ ದಡ ಸೇರಿದ ಈ ಬಾಲಕನನ್ನು ಕ್ಯೂಬಾದಲ್ಲಿರುವ ತಂದೆಯ ಬಳಿಗೆ ರವಾನಿಸಬೇಕಾದ್ದು ನಾಗರಿಕ ಸರಕಾರದ ಕರ್ತವ್ಯ. ಅಮೆರಿಕದ ಸರಕಾರ ಈ ಪ್ರಕರಣವನ್ನು ಪ್ರಚಾರಕ್ಕಾಗಿ ಬಳಸಿಕೊಳ್ಳಲು ನಾನಾ ಬಗೆಯ ತಂತ್ರಗಳನ್ನು ಬಳಸಿತು. ಅಮೆರಿಕದ ನ್ಯಾಯಾಲಯದ ಮೆಟ್ಟಲೇರಿದ ಈ ಪ್ರಕರಣ ಕೊನೆಗೆ ಇತ್ಯರ್ಥಗೊಂಡದ್ದು ಇತ್ತೀಚೆಗೆ. ಕಟ್ಟಕಡೆಗೆ ಬಾಲಕ ಎಲಿಯನ್ ಕ್ಯೂಬಾಗೆ ಸುರಕ್ಷಿತವಾಗಿ ಸೇರಿದ್ದಾನೆ. ಈ ಇಡೀ ಪ್ರಕರಣದಲ್ಲಿ ಅಂತರರಾಷ್ಟ್ರೀಯ ಒತ್ತಡ ತರಲು ಅಮೆರಿಕ ನಡೆಸಿದ ಪ್ರಯತ್ನ ವಿಫಲಗೊಂಡಿತು ಎಂದೇ ಹೇಳಬೇಕು. ಅಮೆರಿಕದ ಪ್ರಸಾರ ಮಾಧ್ಯಮಗಳು ಎಷ್ಟೇ ಪ್ರಚಾರ ನಡೆಸಿದರೂ ಪ್ರಯೋಜನವಾಗಲಿಲ್ಲ. ಕ್ಯೂಬಾದ ಕ್ಯಾಸ್ಟ್ರೋ ಸರಕಾರ ಈ ಪ್ರಕರಣದಲ್ಲಿ ತಳೆದ ಧೋರಣೆ ಸುತ್ಯರ್ಹ. ಅದು ಇಡೀ ಜವಾಬ್ದಾರಿಯನ್ನು ಅಮೆರಿಕದ ಸರಕಾರದ ಮೇಲೇ ಹೊರೆಸಿ ಯಾವುದೇ ವಿವಾದಕ್ಕೆ ಎಡೆ ಕೊಡದ ಪ್ರಬುದ್ಧ ರಾಜಕೀಯ ಮುತ್ಸದ್ದಿತನ ತೋರಿತು. ಅಮೆರಿಕ ಅನುಸರಿಸುತ್ತಿರುವ ಧೋರಣೆಯ ದಿವಾಳಿಕೋರತನ ಈಗ ಜಗಜ್ಜಾಹೀರಾಗಿದೆ. ಆದರೂ ಅಮೆರಿಕ ಇದರಿಂದ ಪಾಠ ಕಲಿಯದು ಎಂದು ಹಿಂದಿನ ಅನುಭವದಿಂದ ಹೇಳಬಹುದು. ಹಾಗಾಗಿ ಅಮೆರಿಕದ ಕುತಂತ್ರಗಳ ಬಗೆಗೆ ಸದಾ ಎಚ್ಚರದಿಂದಿರಬೇಕಾಗಿದೆ.

- ಸೀಯಾರ್ಕೆ



**ಸ್ವಾತಂತ್ರ್ಯಕ್ಕೆ ಜೀವವಿದೆ** (ಕವನ ಸಂಕಲನ)
*ಭೂಹಳ್ಳಿ ಪುಟ್ಟಸ್ವಾಮಿ*
**ಪುಟ : 94** ಬೆಲೆ : ರೂ. 35
**ಸುಕೃತ ಪ್ರಕಾಶನ**, ನಂ. 11, ಹೊಸ ಬಡಾವಣೆ, ಬೆಳವಾಡಿ -581 186, ಮೈಸೂರು.

*ಆತ್ಮೋನ್ನತಿಯ ದೃಶ್ಯ ಸಂಪದ*
*ಕೆಂದೂ ತಲೆಕೆಡಿಸಿಕೊಳ್ಳದ ನಿಮ್ಮಾತ್ಮಕೆ ನಿಮ್ಮ*
*ಕುತೂಹಲ ಕಾರಂಜಿ ಮನೆ*
*ಇದ್ದಲ್ಲಿಗೆಲ್ಲ ಸೆಳೆವ ಕ್ರಿಯಾಶೀಲ ಗುಣಕೆ*
*ಶೂನ್ಯದಲಿ ಅನ್ನ ಹೆಕ್ಕುವ ಛಲಕೆ*
*ನಮ್ಮೆದೆಯ ಸ್ವಾಗತ. ದನಿಯ ಸ್ವಾಗತ*
*ಧಮನ ಧಮನಿಯ ಸ್ವಾಗತ*
*ಪರಮ ಪ್ರಜ್ಞೆಯ ಸ್ವಾಗತ*
*ಆದರೆ ಯಾತಕ್ಕಾಗಿ (ಪರಕೀಯರಿಗೆ)*



**ಜೋಗಿತಿ** (ಕವನ ಸಂಕಲನ)
*ಪ್ರಹ್ಲಾದ ಬೆಟಗೇರಿ*
**ಪುಟ : 80** ಬೆಲೆ : ರೂ. 50
ಸಿ.ವಿ.ಜಿ. ಪಬ್ಲಿಕೇಷನ್ಸ್, ನಂ. 70, 2ನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವೈಯ್ಯಾಲಿ ಕಾವಲ್, ಬೆಂಗಳೂರು - 3

*ರಾಮಜಪ ಭಜನೆ ದೇಶ ವಿಭಜನೆ !*
*ಯಥಾಸ್ಥಿತಿವಾದಿ ಒಲ್ಲೆಂದಿ ಗಾದಿ*
*ಕಂಚು ಕೋಟೇಲಿ ಭಾರತ ಬಂಧಿ*
*ಸುತ್ತು ಸುತ್ತು ಚರಖಾ ಹೊಡಿ ಗಿರಕಿ*
*ಗುಡಿ ಕೈಗಾರಿಕೆ ಎಂದೂ ತೀರದ ಬಾಯಾರಿಕೆ*
*ಮಾತು ನಂಬಿ ನೇಯ್ದ ಬಟ್ಟೆ ದೆಸೆಗೆಟು ಹೋದೆ, ಗಾಂಧಿ (ಟೋಪಿ)*



**೧೯೯೮ರ ವಿಚಾರ ಸಾಹಿತ್ಯ**
*ಸಂಪಾದಕ : ಡಾ॥ ಶ್ಯಾಮಸುಂದರ ಬಿದರಕುಂದಿ*
**ಪುಟ : 147** ಬೆಲೆ : ರೂ. 35
**ಕರ್ನಾಟಕ ಸಾಹಿತ್ಯ ಅಕಾಡೆಮಿ**, ನೃಪತುಂಗ ರಸ್ತೆ, ಜೆ.ಸಿ. ರಸ್ತೆ, ಬೆಂಗಳೂರು- 560 002

*ಅನೇಕ ನಿಯತ ಕಾಲಿಕಗಳಲ್ಲಿ ಪ್ರಕಟಗೊಳ್ಳುವ ಒಂದು ವರ್ಷದ (೧೯೯೮) ಅವಧಿಯ ಮಹತ್ವದ ಸಾಹಿತ್ಯವನ್ನು ಒಂದೆಡೆ ಕಲೆ ಹಾಕುವ ಯೋಜನೆಯಂತೆ ಈ ಪುಸ್ತಕ ಹೊರಬಂದಿದೆ. ವಿಚಾರ ಸಾಹಿತ್ಯ ವನ್ನೊಳಗೊಂಡಿರುವ ಲೇಖನಗಳಲ್ಲಿ ಪುರಾಣ ಕಾಲದಿಂದಲೂ ಪ್ರಾರಂಭಿಸಿ ಆಧುನಿಕತೆ ಯತ್ತ ಹೊರಳಿರುವ ಚಿಂತನಶೀಲ ಬರಹಗಾರರ ಧ್ವನಿಯನ್ನು ದಾಖಲಿಸಲಾಗಿದೆ.*



**ಗಡಿಯಾರದ ಕಥೆ**
*ಎಂ. ಎಸ್. ಚಂದ್ರಶೇಖರ ಅಯ್ಯರ್*
**ಪುಟ : 64** ಬೆಲೆ : ರೂ. 20
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

*ಕಾಲಗಣನೆಗೆ ಅತ್ಯವಶ್ಯಕವಾದ ನಿರ್ದಿಷ್ಟ ಸಮಯ ಸೂಚಕ ಯಂತ್ರ, ಗಡಿಯಾರದ ರೋಚಕ ಕಥೆಯಿದು. ಆಧುನಿಕ ಉತ್ಕೃಷ್ಟ ಗಡಿಯಾರ ಆವಿಷ್ಕಾರವಾಗುವ ಮುನ್ನ ಕಾಲವನ್ನು ತಿಳಿಯಲು ಪ್ರಾಚೀನರು ಅನುಸರಿಸುತ್ತಿದ್ದ ವಿಧಾನ, ಸ್ವರೂಪಗಳನ್ನು ತಿಳಿಸಿಕೊಡುವ ಚಿಕ್ಕ ಚೊಕ್ಕ ಪುಸ್ತಕ. ನೆರಳಿನಿಂದ ಪ್ರಾರಂಭವಾದ ಕಾಲಗಣನೆ ಹೈಟೆಕ್, ಪರಮಾಣು ಗಡಿಯಾರಗಳವರೆಗೆ ಸುದೀರ್ಘ ಪ್ರಯಾಣದ ಅವಲೋಕನ.*



**ಪಡುವಣದ ಬೆಡಗು** (ವಿಚಾರ ಸಂಕಿರಣ)
*ಸಂಪಾದಕರು: ಡಾ॥ ಎಂ. ಜಿ. ಹೆಗಡೆ*
**ಪುಟ : 112** ಬೆಲೆ : ರೂ. 50
**ಡಾ॥ ಎಲ್. ಆರ್. ಹೆಗಡೆ ಕೃತಿ ಪ್ರಕಾಶನ ಸಮಿತಿ**, ಶಿರಸಿ, ಉತ್ತರ ಕನ್ನಡ

*ಶಿರಸಿಯಲ್ಲಿ ನಡೆದ ಡಾ॥ ಎಲ್. ಆರ್. ಹೆಗಡೆಯವರ ಆರು ಪುಸ್ತಕಗಳ ಬಿಡುಗಡೆ ಸಮಾರಂಭದಂದು ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಜಾನಪದ ವಿದ್ವಾಂಸರು ಮಂಡಿಸಿದ ಪ್ರಬಂಧಗಳ ಸಂಕಲನ. ಜಾನಪದ ಅಧ್ಯಯನಶೀಲರಿಗೆ ಈ ಕೃತಿ ದಿಕ್ಸೂಚಿಯಾಗಬಹುದು. ಅಂದು ಮಾತನಾಡಿದ ಮಹನೀಯರ ಭಾಷಣಗಳನ್ನು ಇಲ್ಲಿ ಯಥಾವತ್ತಾಗಿ ನೀಡಲಾಗಿದೆ.*



**ಮತಾಂತರ ಮತ್ತು ಇತರ ಲೇಖನಗಳು**
*ಡಾ॥ ವಿ. ಮುನಿವೆಂಕಟಪ್ಪ*
**ಪುಟ : 136** ಬೆಲೆ : ರೂ. 100
**ವಿಚಾರವಾದಿ ಪ್ರಕಾಶನ**, 1240, 3ನೇ ಕ್ರಾಸ್, ಗಂಗೆ ರಸ್ತೆ, ಕುವೆಂಪುನಗರ, ಮೈಸೂರು - 23

*''ಬಾಣಲೆಯಿಂದ ನೇರ ಬೆಂಕಿಗೆ'' ಎಂಬ ಅರಿವು ಇಲ್ಲದೆ ಒಂದು ಮತದಲ್ಲಿ ವಿಶ್ವಾಸ ಕಳೆದುಕೊಂಡ ಜನರು ಇನ್ನೊಂದಕ್ಕೆ ಮತಾಂತರಗೊಳ್ಳುವುದು ಸಾಮಾನ್ಯ. ಮಾನವೀಯ ಮೌಲ್ಯ ಗಳನ್ನು ಒದಿಗೊತ್ತಿ ಜಾತಿಯು ಪ್ರಾಧಾನ್ಯತೆ ಪಡೆದು ದೌರ್ಜನ್ಯ ಹೆಚ್ಚಿದ ಸಂದರ್ಭ ಗಳಲ್ಲೆಲ್ಲ ಶೋಷಿತರು ಮೊದಲು ಯೋಚಿಸುವುದು ಮತಾಂತರವನ್ನು. ಇಲ್ಲಿನ ವೈಚಾರಿಕ ಲೇಖನಗಳು ಧರ್ಮ ನಿರಪೇಕ್ಷ ಭಾರತದ ಜನತೆಗೆ ತಿಳುವಳಿಕೆ ಮೂಡಿಸಲು ಪ್ರಯತ್ನಿಸಿವೆ.*



**ಅಕ್ಕ** (ಅಕ್ಕ ಮಹಾದೇವಿಯ ಕುರಿತು ಕವನಗಳು)
*ಸಂಪಾದಕ : ಡಾ॥ ವಿಜಯಶ್ರೀ ಸಬರದ*
**ಪುಟ : 136** ಬೆಲೆ : ರೂ. 30
**ಮಹಂತೇಶ ಪ್ರಕಾಶನ ಸಂಸ್ಥೆ**, ಮುಕ್ತಂಪೂರ, ಗುಲ್ಬರ್ಗಾ-1

*ಅಕ್ಕಮಹಾದೇವಿಯ ಬಗ್ಗೆ ಇಂದಿನ ಕವಿಗಳು ಬರೆದ ಕವನಗಳನ್ನು ಗಮನಿಸಿದಾಗ ಆಕೆ ಇಪ್ಪತ್ತನೇ ಶತಮಾನದ ಮನಸ್ಸುಗಳಿಗೆ ಹೇಗೆ ಮತ್ತು ಯಾಕೆ ಹತ್ತಿರವಾಗುತ್ತಾಳೆ ಎಂಬುದು ಇಲ್ಲಿನ ವಿಶೇಷ. ಆಕೆ ಬದುಕಿದ ಆ ಕಾಲದ ಸ್ತ್ರೀ ಸಂವೇದನೆ ಇಂದಿನ ಮಹಿಳೆಯೊಂದಿಗೆ ಮುಖಾಮುಖಿಯಾಗಿಸುವ ಪ್ರಯತ್ನ ಯಶಸ್ವಿಯಾಗಿದೆ. 63 ಕವಿಗಳು ಅಕ್ಕನನ್ನು ವಿವಿಧ ದೃಷ್ಟಿಕೋನಗಳಲ್ಲಿ ಕಂಡು ತಮ್ಮ ಭಾವನೆಗಳನ್ನು ವ್ಯಕ್ತಪಡಿಸಿದ್ದಾರೆ.*



**ಮುಚ್ಚಿದ ಬಾಗಿಲು ಮತ್ತು ಮರಿಗುಬ್ಬಿ** (ಕವನ ಸಂಕಲನ)
*ಸಂಪಾದಕರು: ವಿಷ್ಣು ನಾಯ್ಕ*
**ಪುಟ : 84** ಬೆಲೆ : ರೂ. 50
**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲ

*'ಮುಚ್ಚಿದ ಕಪ್ಪುಗಾಜಿನ*
*ಕಾರ ಕಿಟಕಿಯ ಹತ್ತಿ*
*ಒಳಗಿರುವ ತನ್ನಂತದೇ ಇನ್ನೊಂದು*
*ಮರಿಗುಬ್ಬಿಯ ಕರೆಯುತಿದೆ.*
*'ಬಾ ಹೊರಗೆ ಆಡೋಣ ;*
*ಹೀಗೇಕೆ ಕೂತಿದ್ದಿ-ಗುಮ್ಮ ಗುಸುಕನ ಹಾಗೆ ?*
*ಕುಟುಕಿ ಕುಕ್ಕುತ್ತಿದೆ. 'ಬಾಗಿಲು-*
*[illegible]*

[illegible]

# ನನ್ನ ಮಗನ ಮತಾಂತರ

''ಅಪ್ಪಾ, ನಾನು ಮತಾಂತರಗೊಳ್ಳಬೇಕು ಅಂತ ನಿರ್ಧರಿಸಿದ್ದೇನೆ!'' -ಅಂತ ಮಗ ಅಂದಾಗ ನಾನು ಅವಾಕ್ಕಾದೆ. ''ಯಾವ ಮತಕ್ಕೆ ಸೇರಬೇಕೂಂತಿದ್ದೀಯಯ್ಯಾ ?!'' -ಅಂತ ಮುಖದ ಮೇಲೆ ಮೂಡಿದ್ದ ಬೆವರ ಹನಿಗಳನ್ನು ಒರೆಸಿಕೊಳ್ಳುತ್ತಾ ಮೆಲುದನಿಯಲ್ಲಿ ಕೇಳಿದೆ.

ಒಂದು ವಿದೇಶಿ ಮೂಲದ ಮತದ ಹೆಸರು ಅವನು ಹೇಳಿದಾಗ ನಾನು ಸುಸ್ತೋ ಸುಸ್ತು. ಪಕ್ಕಾ ಆರ್ ಎಸ್ ಎಸ್, ಬಿಜೆಪಿ ಅಭಿಮಾನಿಯಾದ ಹುಡುಗನ ಬಾಯಲ್ಲಿ ಈ ಮಾತೇ ಅಂತ ಆಶ್ಚರ್ಯಗೊಂಡೆ. ಅಲ್ಲದೆ ಅಪ್ಪಟ ಸ್ವದೇಶೀ ಆಂದೋಲನದ ಪರವಾಗಿ ವಾದಿಸುವ ಹುಡುಗ ಇಂದು ಇಂಪೋರ್ಟೆಡ್ ಮತವೊಂದರ ಕಡೆ ವಾಲಿದ್ದು ಅಚ್ಚರಿಗೆ ಇನ್ನೊಂದು ಕಾರಣವಾಯಿತು. ತಮಾಷೆ ಮಾಡ್ತಿದ್ದಾ ನೇನೋ ಅಂತ ಅನುಮಾನಾನೂ ಬಂತು.

''ನೀನು ಆಗಬೇಕೂಂತಿರೋ ಮತಾಂತರವು ಕಂಡೀಷನಲ್ಲೋ ಅನ್‌ಕಂಡೀಷನಲ್ಲೋ ?'' ಅಂತ ಅನುಮಾನ ಪರಿಹರಿಸಿಕೊಳ್ಳಲು ಕೇಳಿದೆ.

''ಕಂಡೀಷನಲ್ಲೇ''ಅಂದ ದೃಢವಾಗಿ.

''ಏನು ನಿನ್ನ ಕಂಡೀಷನ್ನುಗಳು?'' -ಅಂತ ಕೇಳಿದ್ದಕ್ಕೆ ಒಂದೊಂದಾಗಿ ಹೇಳತೊಡಗಿದ :

''ಮೊದಲನೆಯದು, ಮತಾಂತರಕ್ಕೆ ಸ್ವಾತಂತ್ರ್ಯವಿರೋ ಹಾಗೆ ಮತಾಂತರವಾದ ಮೇಲೂ ಹಲವಾರು ಸ್ವಾತಂತ್ರ್ಯಗಳು ನನಗಿರಬೇಕು.''

''ಯಾವ ಯಾವ ಸ್ವಾತಂತ್ರ್ಯಗಳಪ್ಪಾ ಅವೂ?'' -ನನ್ನ ಪ್ರಶ್ನೆ.

''ನೋಡು ಅಪ್ಪಾ, ಮತಾಂತರಾನಂತರವೂ ನನಗಿಷ್ಟ ಬಂದ ದೇವರನ್ನು ಪೂಜಿಸೋ ಸ್ವಾತಂತ್ರ್ಯ ನನಗೆ ಬೇಕು. ನನಗಿಷ್ಟವಿರುವ ಆಹಾರವನ್ನೇ ತಿನ್ನುವ ಸ್ವಾತಂತ್ರ್ಯ ನನಗಿರಬೇಕು. ಮತಾಂತರಗೊಂಡದ್ದಕ್ಕೆ ನನಗೆ ೧ ಲಕ್ಷ ರೂಪಾಯಿಗಳನ್ನು ಕೊಡಬೇಕು. ನನ್ನ ಹಳೆಯ ಹೆಸರನ್ನೇ ಉಳಿಸಿಕೊಳ್ಳುವ ಸ್ವಾತಂತ್ರ್ಯ ನನಗಿರಬೇಕು. ಆ ಮತ ಇಷ್ಟವಿಲ್ಲ ಅಂತನಿಸಿದಾಗ ಇನ್ನೊಂದು ಮತಕ್ಕೆ ಮತಾಂತರಗೊಳ್ಳುವುದು ನನ್ನ ಹಕ್ಕಾಗಿರಬೇಕು....''

–ಹೀಗೆಲ್ಲಾ ಅವನು ಹೇಳುತ್ತಿದ್ದಾಗ ನಾನು ಕೇವಲ ತಲೆಯಾಡಿಸುತ್ತಿದ್ದೆ. ''ಇದಕ್ಕೆಲ್ಲಾ ಒಪ್ಪಿಕೊಂಡು ಯಾರಯ್ಯಾ ನಿನ್ನನ್ನು ಮತಾಂತರ ಮಾಡ್ತಾರೆ, ನಿಂದ್ಯೊಳ್ಳೇ ಸ್ವ-ಲಾಭಕ್ಕಾಗಿ ರಾಜಕೀಯ ಪಕ್ಷಗಳನ್ನು ಬದಲಿಸುವ ರಾಜಕಾರಣಿಗಳ ವ್ಯವಹಾರದ ಹಾಗಿದೆಯಲ್ಲಾ ಕತೆ!'' ಅಂತ ಅಚ್ಚರಿಪಟ್ಟೆ.

''ಹೌದಪ್ಪ, ಲಾಭವಿಲ್ಲದೆ ಮತಾಂತರಗೊಳ್ಳೋಕೆ ನನಗೇನು ಹುಚ್ಚಾ? ಇಂತಹ ಕುಟುಂಬದಲ್ಲೇ ಹುಟ್ಟಬೇಕು, ಇಂತಹ ಜಾತಿಯಲ್ಲೇ ಹುಟ್ಟಬೇಕು ಅಂತ ಆಯ್ಕೆ ಮಾಡಿಕೊಂಡು ಹುಟ್ಟೋಕಂತೂ ಸಾಧ್ಯವಿಲ್ಲ. ಹುಟ್ಟಿ ಬುದ್ಧಿ ಬಲಿತ ಮೇಲೆ ಜಾತಿ ಮತಗಳನ್ನು ಆಯ್ಕೆ ಮಾಡಿಕೊಳ್ಳೋ ಸೌಲಭ್ಯವಿರುವಾಗ ಅದನ್ನು ಉಪಯೋಗಿಸಿಕೊಳ್ಳೋದ ರಲ್ಲಿ ತಪ್ಪೇನಿದೆ ಹೇಳು ?'' -ಅಂದ ಮಗರಾಯ.

''ಅಂದ್ರೆ ರಾಜಕಾರಣಿಗಳು ಪಕ್ಷ ಬದಲಾಯಿಸಿದ ಹಾಗಾಯ್ತಲ್ಲ ನಿನ್ನ ಮತಾಂತರದ ಕತೆ !'' ಅಂತ ಆಶ್ಚರ್ಯ ಸೂಚಿಸಿದೆ ನಾನು.

''ಇರಲಿ ಬಿಡಪ್ಪ, ಮತಗಳೂ ಪಕ್ಷಗಳಿದ್ದ ಹಾಗೇನೇ ನನ್ನ ಅಭಿಪ್ರಾಯದಲ್ಲಿ. ರಾಜಕಾರಣಿಯಾದವನು ಯಾವ ಪಕ್ಷದಲ್ಲಿ ಹೆಚ್ಚಿನ ಲಾಭ-ಸೌಲಭ್ಯಗಳು ದೊರೆಯುತ್ತವೋ ಆ ಪಕ್ಷವನ್ನು ಸೇರಿಕೊಳ್ಳುತ್ತಾನೆ. ಹಾಗೆಯೇ ಯಾವ ಮತದಲ್ಲಿ ನನಗೆ ಹೆಚ್ಚಿನ ಲಾಭ ಸಿಗುತ್ತದೋ ಆ ಮತಕ್ಕೇ ನಾನು ಸೇರಿಕೊಳ್ಳೋದು.'' -ಅಂತ ವಿವರಣೆ ಕೊಟ್ಟ ಮಗ.

''ಹಾಗಾದರೆ ತತ್ವ, ರೀತಿ-ನೀತಿಗಳ ವಿಚಾರ?'' ಅಂತ ಹುಬ್ಬೇರಿಸಿದೆ.

''ಮಾತಿಗೆ ಹೇಳಬೇಕೂಂದ್ರೆ ಅಪ್ಪಾ, ಎಲ್ಲ ಮತಗಳ ಸಾರಾನೂ ಒಂದೇ ಇರುವಾಗ ಯಾವ ಮತಕ್ಕೆ ಸೇರಿಕೊಂಡರೆ ಏನೀಗ?'' ಅಂತ ಕ್ವಶ್ಚನಿಸಿದ.

''ಎಲ್ಲ ಮತಗಳ ಸಾರವೂ, ಗುರಿಯೂ ಒಂದೇ ಆದಾಗ ನೀನು ಮತಾಂತರಗೊಳ್ಳೋದರ ಅಗತ್ಯವಾದರೂ ಏನೀಗ ?'' ಅಂತ ಮರುಪ್ರಶ್ನೆ ಹಾಕಿದೆ.

''ಮತಾಂತರಗೊಳ್ಳಲು ನನಗಿರುವ ಕಾರಣ ಲೌಕಿಕ ಲಾಭಗಳು ಮಾತ್ರ. ಎಲ್ಲ ಮತ-ಧರ್ಮಗಳ ಸಾರವೂ, ಗುರಿಯೂ ಒಂದೇ ಆಗಿದ್ದರೂ ಸಹ ಒಂದೊಂದು ಮತದಿಂದ ಸಿಗುವ ಲೌಕಿಕ ಲಾಭಗಳ ಪ್ರಮಾಣದಲ್ಲಿ ವ್ಯತ್ಯಾಸವಿರುತ್ತದಲ್ಲವೇ? ಅತಿ ಹೆಚ್ಚು ಲಾಭ ದೊರೆಯುವ ಮತಕ್ಕೆ ಸೇರಿಕೊಂಡರೆ - ಪರದ ಕತೆ ಏನೋ ಗೊತ್ತಿಲ್ಲ - ಇಹದಲ್ಲಂತೂ ಸುಖಪಡಬಹುದಲ್ಲವೇ?'' ಅಂದ ! ಮಗನ ಲೌಕಿಕ ಲೆಕ್ಕಾಚಾರಗಳಿಗೆ ತಲೆದೂಗದಿರುವುದು ನನ್ನಿಂದಾಗಲಿಲ್ಲ. ಇವನ ಕಂಡಿಷನ್ನುಗಳಿಗೆ ಒಪ್ಪಿ ಮತಾಂತರಿಸಲು ಯಾವ ಮತದ ಮುಖ್ಯಸ್ಥರು ಮುಂದೆ ಬರುತ್ತಾರೋ ನೋಡಬೇಕು !

ಜಿ. ವಿ. ಗಣೇಶಯ್ಯ
ಅಖಿಲ ಭಾರತ ವಾಕ್-ಶ್ರವಣ ಸಂಸ್ಥೆ, ಮೈಸೂರು - ೫೭೦ ೦೦೬

## ಬದುಕಲು ತಯಾರಿ.....

ಖ್ಯಾತ ರಷ್ಯನ್ ಸಾಹಿತಿ ಮ್ಯಾಕ್ಸಿಂ ಗೋರ್ಕಿ ''ಓಲ್ಡ್ ಇಜರ್‌ಗೈಲ್'' ಎಂಬ ಸಣ್ಣ ಕತೆಯಲ್ಲಿ ಬದಲಾಗುತ್ತಿದ್ದ ಯುವಕ ಆಸ್ಥೆಯ ಬಗ್ಗೆ ಒಬ್ಬ ಮುದುಕಿಯ ಮಾತುಗಳ ಮೂಲಕ ಚೊಕ್ಕವಾದ ವಿಮರ್ಶೆ ನೀಡಿದ್ದಾನೆ. ಸಮಕಾಲೀನ ಸಂದರ್ಭದ ವೀಕ್ಷಕರಿಗೆ ಅದರ ಪ್ರಸ್ತುತತೆಯ ಬಗ್ಗೆ ವಿಶೇಷವಾಗಿ ಏನೂ ಹೇಳಬೇಕಾದುದಿಲ್ಲ. ಕತೆಯ ಒಂದು ಭಾಗ ಹೀಗಿದೆ :

''ದೂರದಲ್ಲಿ ಆ ಸ್ಟೆಪ್ಪಿ ಹುಲ್ಲುಗಾವಲಿನ ಅಂಚಿನಲ್ಲಿ ಏನಾದರೂ ಕಾಣಿಸ್ತಿದೆಯಾ ನೋಡು. ನನಗಂತೂ ಕಣ್ಣು ಮಂಜಾಗಿದೆ. ಇತ್ತೀಚೆಗೆ ಏನೂ ಕಾಣೋದೇ ಇಲ್ಲ.''

''ಹೌದು ಅಜ್ಜಿ! ತೆಳು ನೀಲಿ ಮಿಶ್ರಿತ ಬೆಳಕಿನ ಕಿಡಿಗಳ ರೀತಿಯಲ್ಲಿ ಪುಟ ಪುಟಿಸುತ್ತಿರುವಂತೆ......'' ಏನಾದರೂ ಕತೆ ಹೇಳ್ತಾಳೇನೋ ಅಂತ ಕಾಯ್ತಾ ಕುಳಿತಿದ್ದೆ ಸಂಜೆಯ ಮಬ್ಬಿನಲ್ಲಿ ಹಣ್ಣು ಹಣ್ಣು ಮುದುಕಿ ಇಜರ್ ಗೈಲ್‌ಹತ್ರ. ನಮ್ಮ ಮುಂದೆ ಮೈಲಿ ಮೈಲಿಯ ಸೃಷ್ಟಿ. ಬಾನು ಭೂಮಿ ಸೇರುವವರೆಗೂ..... ''ಅಂದು ಡಾಂಕೋನ ಗುಂಡಿಗೆಯಿಂದ ಸಿಡಿದೆದ್ದವು ಕಾಣಪ್ಪ! ಅದೆಷ್ಟೋ ಯುಗಗಳ ಹಿಂದೆ. ಅಂದಿನಿಂದಲೂ ಹಾಗೆಯೇ. ಅವನು ತುಂಬಾ ಅಂದ ಚಂದದವ. ಧೈರ್ಯ ತುಂಬಿದ ಹರೆಯದ ಕಟ್ಟಾಳಾಗಿದ್ದ. ಅವನು ಪ್ರೀತಿಯಿಂದ ತನ್ನ ಜನರಿಗೆ ಭಯಂಕರ ಗೊಂಡಾರಣ್ಯದಿಂದ ಹೊರಗೆ ಬರಲು ದಾರಿ ತೋರಿಸಿದ ಭೂಪ...... ಆಗಲೇ ಅವನ ಎದೆ ಸಂತೋಷದಿಂದ ಮೈಮರೆತ ಜನರ ಕಾಲಿಗೆ ಸಿಕ್ಕಿ ಅಪ್ಪಚ್ಚಿಯಾದದ್ದು. ಅಲ್ಲಿಂದಲೆ ಬೆಳಕಿನ ಕಿಡಿಗಳು ಪುಟಿದೆದ್ದು ಕಣ್ಕಪ್ಪು ಕತ್ತಲೆಯಲ್ಲೂ ಬೆಳಕು ಚೆಲ್ಲುತ್ತಿವೆ.....''

ಸ್ವಲ್ಪ ಹೊತ್ತು ಮೌನವಾದಳು ಅಜ್ಜಿ, ಅದೇನೋ ನೆನಪಿಸಿಕೊಳ್ಳುವ ಪ್ರಯತ್ನದಲ್ಲಿದ್ದಂತೆ ಕಂಡವಳಂತೆ.

ಪುನಃ ಅಜ್ಜಿ ಮುಂದುವರಿಸಿದಳು : ಅಂದಿನ ಆ ಕಾಲದಲ್ಲಿ ಅದೆಷ್ಟು ಒಳ್ಳೆಯ ಕೆಲಸಗಳು ಆಗ್ತಿದ್ದುವು ! ಇಂದು ಏನೇನೂ ಕೇಳಬೇಡ. ಪೌರುಷವುಳ್ಳವರೂ ಇಲ್ಲಾ, ಸಾಧನೆಗಳೂ ಇಲ್ಲಾ. ಅವರೊಡನೆ ಹೋಲಿಕೆಯೇ ಇಲ್ಲದವರು. ಕತೆಯಂತೂ ಕೇಳಲೇಬೇಡ. ಇದೇಕೆ ಹೀಗಾಯ್ತು ! ಹೇಳ್ತಿಯಾ? ಇಲ್ಲ, ಬಿಡು, ನಿನಗಾಗೊಲ್ಲ. ಇಂದಿನ ಜವ್ವನಿಗರಿಗೆ ಏನು ತಾನೇ ಗೊತ್ತು ಅಂದ್ಕೊಂಡಿದೀಯಾ? ಹಳೆಯ ಕಾಲದವರ ಕತೆಗಳಲ್ಲಿ ತಡಕಿದರೆ ಬದುಕಿನ ಎಲ್ಲ ಒಗಟುಗಳಿಗೂ ಉತ್ತರ ಸಿಕ್ಕೇ ಸಿಗುತ್ತದೆ. ಆದರೆ ನೀವು ಹಾಗೆ ಹುಡುಕುವ ಗೋಜಿಗೆ ಹೋಗುವುದೇ ಇಲ್ಲವಲ್ಲ! ಅದಕ್ಕೇ ನಿಮಗೆ ಏನೇನೂ ತಿಳಿಯದಿರುವುದು..... ನಾನು ಏನೂ ತಿಳಿಯದವಳು...... ನನಗೆ ಏನೇನೂ ಕಾಣುವುದಿಲ್ಲ ಅಂದ್ಕೊಂಡಿದೀರೇನೋ? ನನ್ನ ಕಣ್ಣು ಮಂದವಾಗಿದೆ, ನಿಜ. ಆದರೂ ನನಗೆ ಎಲ್ಲ ಸ್ಪಷ್ಟವಾಗಿ ಕಾಣುತ್ತೆ. ನೀವು ಬದುಕಲು ಪ್ರಾರಂಭಿಸುವ ಬದಲು, ನಿಮ್ಮ ಕಾಲವನ್ನೆಲ್ಲಾ ಕೇವಲ ಬದುಕುವ ತಯಾರಿಯಲ್ಲೇ ಕಳೆಯುತ್ತಿದ್ದೀರಿ. ಈ ದಾರೀನಲ್ಲಿ ನಿಮ್ಮ ಸ್ವಂತದ್ದೆಲ್ಲಾ ಕಳೆದುಕೊಳ್ತೀರಿ. ಮತ್ತೆ ನಿಮ್ಮ ಪರಿಸ್ಥಿತಿಗೆ ನಸೀಬನ್ನು ಬೈಯ್ತೀರಿ. ಆದರೆ ಇದರಲ್ಲಿ ನಸೀಬಿನ ಪ್ರಶ್ನೆ ಎಲ್ಲಿ ಬಂತು ನಿಮ್ಮ ಪರಿಸ್ಥಿತಿಗೆ? ಅವನವನ ನಸೀಬು ಖುದ್ದು ಅವನೇ ಅಲ್ಲದೇ ಅಂತೀನಿ ! ಇಕ.... ನಾ ಹೇಳ್ತೀನಿ ತಿಳ್ಕ..... ಅವನವನ ನಸೀಬು ಖುದ್ದು ಅವನೇ ಅಲ್ಲದೇ ಬೇರೆ ಯಾರೂ ಅಲ್ಲಾ...... ಇಂದಿನ ಪ್ರಪಂಚದಲ್ಲಿ ಎಲ್ಲ ತರದ ಜನರೂ ತುಂಬಿದಾರೆ. ಇಷ್ಟು ಜನರ ಮಧ್ಯೆ ಬಲಶಾಲಿಯಾದವನು ಯಾರೂ ಕಾಣಿಸುವುದೇ ಇಲ್ಲವಲ್ಲ! ಚಂದದ ಅಂದದ ಆಳಂತೂ ಬೆರಳೆಣಿಕೆಯಷ್ಟು. ಇದೇಕೆ ಹೀಗೆ? ಏನಾಯಿತು ಇವರಿಗೆಲ್ಲಾ....?

ಮ್ಯಾಕ್ಸಿಂ ಗೋರ್ಕಿ
(''ಓಲ್ಡ್ ಇಜರ್‌ಗೈಲ್'' ಎಂಬ ಕಥೆಯಿಂದ), - *ಪಾರ್ಥಸಾರಥಿ*

# ಬೀರಣ್ಣನ ಸಂದೇಶ

ಪ್ರಿಯ ಯಜಮಾನಪ್ಪನವರಿಗೆ ಅನೇಕ ನಮಸ್ಕಾರಗಳು,

ಕಳೆದ ವಾರ ಎಂಥ ಅದ್ಭುತ ನಡೀತು ಅಂತೀರಾ! ಆಡುಗಳನ್ನು ಮೇಯಲು ಬಿಟ್ಟು ಬೇವಿನ ಮರದ ಕೆಳಗೆ ಕುಳಿತಿದ್ದೆ. ಆಷಾಢದ ಗಾಳಿ. ಮತ್ತಷ್ಟು ಮುದುಡಿ ಕುಳಿತು ಬೆಚ್ಚಗಾಗಲು ಪ್ರಯತ್ನಿಸಿದೆ. ಅಂಥಾ ಸಂದರ್ಭದಲ್ಲೂ ಸಣ್ಣ ತೂಕಡಿಕೆ. ಜೆಟ್ ಹಾರಿದಂತೆ ಗೊರಕೆ. ಬೆಚ್ಚಿ ಕಣ್ತೆರೆದೆ. ಆಡುಗಳು ಬೆದರಿ ನನ್ನತ್ತ ಕೆಕ್ಕರಿಸಿ ನೋಡುತ್ತಿದ್ದವು. ಮೈ ಜುಮುಗುಟ್ಟಿತು. ಹೊರಗಿನ ಬೆಳಕೆಲ್ಲ ನನ್ನ ತಲೆಯೊಳಕ್ಕೆ ನುಸುಳಿ ಭಗ್ಗನೆ ಹೊತ್ತಿಕೊಂಡಂತೆ. ಇಂಥ ವಿಚಿತ್ರ ಸಂಭವಿಸಬಹುದೆಂದು ಕೆಲವು ದಿನಗಳಿಂದಲೇ ನನಗೆ ಗುಮಾನಿಯಿತ್ತು. ಅದು ಈಗ ವಾಸ್ತವವಾಗಿತ್ತು. ಗೊಂದಲ ಪುರದ ಬೀರಣ್ಣನಾದ ನನಗೆ ಜ್ಞಾನೋದಯವಾಗುತ್ತಿದೆ...! ಈ ಹೊಸ ಅನುಭವದಿಂದ ಬಹಳ ಗಾಬರಿಯಾಯಿತು. ಹೆದರಿಕೆಯೂ ಆಯಿತು.

ಜ್ಞಾನೋದಯವಾಯಿತು. ಮುಂದೇನಾಯಿತು ಎನ್ನುವಿರಾ? ನಮ್ಮ ಸುದೀರ್ಘ ಭವ್ಯ ಪರಂಪರೆಯ ಬಗ್ಗೆ, ನಮ್ಮ ದಿವ್ಯ ಸಂಸ್ಕೃತಿಯ ಬಗ್ಗೆ ಎಳೆಯ ತಲೆಮೊರೆಯವರಿಗೆ ಬೋಧಿಸಬೇಕು ಎಂಬ ಅಂತಃಪ್ರೇರಣೆಯಾಯಿತು. ಇನ್ನು ತಡಮಾಡುವಂತಿಲ್ಲ. ಬೀರಣ್ಣ ಬರ್ತಾ ಇದಾನೆ. ತಯಾರಾಗಿರಿ ಸಂದೇಶ ತಗೊಳ್ಳೋಕೆ...!

ಯಜಮಾನಪ್ಪನವರೇ, ನಮ್ಮ ದೇಶದಲ್ಲಿ ಎಂತೆಂಥ ಮಹಾಮಹಿಮರು, ಋಷಿ-ಮುನಿಗಳು, ಜ್ಞಾನಿ-ವಿಜ್ಞಾನಿಗಳಿದ್ದರು ಎಂಬುದನ್ನು ನೆನಪು ಮಾಡಿಕೊಂಡರೇ ಮೈ ನವಿರೇಳುತ್ತದೆ. ಪ್ರಪಂಚದ ಯಾವುದೇ ಸಂಸ್ಕೃತಿಯಲ್ಲಿ, ನಾಗರಿಕತೆಯಲ್ಲಿ ನಮ್ಮ ಸಂಸ್ಕೃತಿಗಿಂತ ಶ್ರೇಷ್ಠವಾದದ್ದು ಯಾವುದಿತ್ತು? ಯಾವುದಿದೆ? ತೋರಿಸಿ ನೋಡ್ತೀನಿ! ಬೇರೆ ಯಾವ ಸಂಸ್ಕೃತಿಗೂ ವೇದೋಪನಿಷತ್ತುಗಳನ್ನು ಸೃಷ್ಟಿಮಾಡುವಂಥ ಜ್ಞಾನವಿರಲಿಲ್ಲ. 'ಸಹ ನಾವವತು। ಸಹ ನೌ ಭುನಕ್ತು। ಸಹ ವೀರ್ಯಂ ಕರವಾವಹೈ'- ಏನು ಈ ಸೂಕ್ತಿಗಿರುವ ಶಕ್ತಿ ! ಕಾರ್ಲ್ ಮಾರ್ಕ್ಸ್ ನೋಡಿ, ಬುದ್ಧಿವಂತ! ಇದನ್ನು ಎಗರಿಸಿ ಸಮಾಜವಾದದ ಸಿದ್ಧಾಂತ ಹೆಣೆದ. ಋಗ್ವೇದದಲ್ಲಿ ಬರುವ 'ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತಃ' - ಅಬ್ಬಾ! ಇಂಥ ಒಂದು ಮಾತು ಪ್ರಪಂಚದ ಬೇರೆ ಯಾವ ಶಾಸ್ತ್ರದಲ್ಲಿದೆ ಹೇಳಿ. ಇನ್ನು ಭಗವದ್ಗೀತೆಯಲ್ಲಿ ಕೃಷ್ಣ ಪರಮಾತ್ಮ ಅಪ್ಪಣೆ ಕೊಡಿಸಿರುವ 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ।' ದಂಥ ಸೂಕ್ತಿ ಯಾವ ಪಾಶ್ಚಾತ್ಯ ಭಗವದ್ಗೀತೆಯಲ್ಲಿದೆ ತೋರಿಸಿ ನೋಡೋಣ? ಇದನ್ನು ಕೇಳಿದಾಗ ಕೃಷ್ಣನ ಪಾಂಚಜನ್ಯದ ಗಂಭೀರ ನಾದ ಕಿವಿಗಳಲ್ಲಿ ಮೊಳಗಿದಂತಾಗುವುದಿಲ್ಲವೆ?

ಮತ್ತೆ ನಮ್ಮ ಸಂಗೀತ ತೆಗೆದುಕೊಳ್ಳಿ. ಇದಕ್ಕೆ ಸಾಟಿಯಾದದ್ದು ಬೇರೆಲ್ಲಿಯಾದರೂ ಕೇಳಲು ಸಿಗುತ್ತದೆಯೆ? ಪರ್ಷಿಯಾದಲ್ಲೋ ರಶಿಯದಲ್ಲೋ ನಮ್ಮ ರಾಗವನ್ನು ಹೋಲುವ ರಾಗಗಳಿದ್ದರೆ, ಅವನ್ನು ಅವರು ಇಲ್ಲಿಂದಲೇ [illegible] ಹೋಗಿರಬೇಕಲ್ಲದೆ ನಾವು ಅವರಿಂದ [illegible]ಗೆದುಕೊಳ್ಳ ಪ್ರಶ್ನೆಂದರೇನು? [illegible] ಹಾಗಿರಲಿ, ನಮ್ಮ ಯೋಗಶಾಸ್ತ್ರದ ಬಗ್ಗೆ ಏನು [illegible]? [illegible] ವೈಜ್ಞಾನಿಕವಾಗಿ ಮಾಡಲು ಪಾಶ್ಚಾತ್ಯರು ತಲೆಕೆಳಗಾಗಿ ನಿಂತರೂ ಸಾಧ್ಯವಾಗುವುದಿಲ್ಲ. ಈ ಮಾತನ್ನು ಬರೆದಿಟ್ಟುಕೊಳ್ಳಿ. ಇವೆಲ್ಲ ಸಾಧ್ಯವಾದದ್ದು ಹೇಗೆಂತ ಯೋಚಿಸಿದರೆ, ನಾವು ಮತ್ತೆ ನಮ್ಮ ವೇದ ಉಪನಿಷತ್ತುಗಳಿಗೇ ಹೋಗಬೇಕಾಗುತ್ತದೆ. ಈಗ ಯಾವುದನ್ನು ಅವರು ಹೊಸ ಆವಿಷ್ಕಾರ ಎನ್ನುವರೋ ಅದನ್ನೆಲ್ಲ ನಮ್ಮ ಪೂರ್ವಜರು ಹಿಂದೆಯೇ ಸಾಧಿಸಿ ತೋರಿಸಿದ್ದಾರೆ. ರಾಮಾಯಣದ ಕಾಲದಲ್ಲಿಯೇ ಪುಷ್ಪಕ ವಿಮಾನ ಇರಲಿಲ್ಲವೆ? ಆಧುನಿಕ ಯುದ್ಧಾಸ್ತ್ರಗಳಿಗೆ ಸಮನಾದ ಅಸ್ತ್ರಗಳನ್ನು ಮಹಾಭಾರತ ಯುದ್ಧದ ವೇಳೆ ಬಳಸಲಾಯಿ ತೆಂಬುದು ಇಂದಿನ ಜನರಿಗೆ ಏಕೆ ಅರ್ಥ ವಾಗುವುದಿಲ್ಲ ?



ನಮ್ಮ ಗಾಂಧೀಜಿಗೆ ಸಮನಾದ ಒಬ್ಬ ಗಾಂಧಿಯನ್ನು ಕೊಡಲು ಪಾಶ್ಚಾತ್ಯ ನಾಗರಿಕತೆಗೆ ಸಾಧ್ಯವಾಗಿದೆಯೆ? ಆದರೆ ಆ ಗಾಂಧಿಗೆ ಗುಂಡಿಕ್ಕಿದುದು ಬೇರೆಯೇ ಚರಿತ್ರೆ!

ಗಣಿತಶಾಸ್ತ್ರಕ್ಕೆ ಸೊನ್ನೆ ಕೊಡುಗೆ ಯಾರದು? ಎಂತೆಂಥಾ ಪಂಡಿ ತೋತ್ತಮರು ಈ ಭಾರತ ಭೂಮಿಯಲ್ಲಿ ಜನಿಸಿದ್ದರು! ಆದರೆ ಶೇಕಡಾ ತೊಂಬತ್ತೈದರಷ್ಟು ಜನರಿಗೆ ಅಕ್ಷರದ ಪರಿಚಯವಿರಲಿಲ್ಲ. ಅವರಿಗೆ ಅಕ್ಷರ ಕಲಿಯುವ ಅವಕಾಶವನ್ನು ಶಾಸ್ತ್ರಗಳೇ ಕಸಿದುಕೊಂಡಿದ್ದವು! ಅದು ಬೇರೆಯೇ ಕರ್ಮ! ಅಷ್ಟೇಕೆ ಈ ಜಾತಿಗಳನ್ನು ಮಾಡಿದ್ದು ಜಗತ್ತಿನ ನಾಗರಿಕತೆಗೆ ಕಡಿಮೆ ಕೊಡುಗೆಯೆ? ಇಂಥ ಜಾತಿ ಹೆಣ ಹೊರಬೇಕು, ಇಂಥ ಜಾತಿ [illegible] ಹೊರಬೇಕು, ಈ ಜಾತಿ ಶಾಸ್ತ್ರ ಕಲಿಯಬೇಕು, ಈ ಜಾತಿ ಉಣ್ಣುತ್ತಲೇ ಸಾಯಬೇಕು...! [illegible] ವೈಜ್ಞಾನಿಕವಾಗಿ ಜಾತಿ ವರ್ಗಾವಣೆಯನ್ನು ಜಗತ್ತಿನ ಯಾವ ನಾಗರಿಕತೆಗೆ ಮಾಡಲು ಸಾಧ್ಯವಾಗಿದೆ? ಈ ಪುಣ್ಯಭೂಮಿಯಲ್ಲಿ ಜನಿಸಿದವರಿಗೆ ಮಾತ್ರ ಸಾಧ್ಯವಾಗುವಂಥದ್ದು ಇದು ಎಂದು ಹೇಳಲೇಬೇಕಾಗಿಲ್ಲ.



ಯಜಮಾನಪ್ಪನವರೇ, ನಾನು ಕುಳಿತಿದ್ದುದು ಖಂಡಿತವಾಗಿಯೂ ಈಚಲು ಮರದ ಕೆಳಗಲ್ಲ. ದೇವರಾಣೆಗೂ ಬೇವಿನ ಮರದ ಕೆಳಗೆ! ಈಗ ನನಗೆ ಅನುಮಾನ ಶುರುವಾಗಿದೆ. ಬುದ್ಧನಿಗೆ ಜ್ಞಾನೋದಯವಾದದ್ದು ಅರಳಿಮರದ ಕೆಳಗೆ ಎಂದು ಕೇಳಿದ್ದೇನೆ. ಅದಕ್ಕೆ ಯಾರದೇನೂ ತಕರಾರಿರಲಿಲ್ಲ. ಹೀಗೆ ಯಾವುದಾದರೂ ಕಾಲಘಟ್ಟದಲ್ಲಿ ಬೀರಣ್ಣನಂಥ ಸಾಧಾರಣ ಮನುಷ್ಯನಿಗೆ ಬೇವಿನಮರದ ಕೆಳಗೆ ಜ್ಞಾನೋದಯವಾಯಿತೆಂದರೆ ಅದಕ್ಕೆ ಶಾಸ್ತ್ರ ಸಮ್ಮತಿ ಇದೆಯೆ? ಇದಕ್ಕೆ ಯಾರಿಂದಲಾದರೂ ಅಂಗೀಕಾರ ಪಡೆಯಬೇಕೆ? ಗೌತಮ ಜ್ಞಾನೋದಯವಾದನಂತರ ಬುದ್ಧ ಅಂತ ಹೆಸರು ಬದಲಾಯಿಸಿಕೊಂಡನಂತೆ. ಬೀರಣ್ಣನಾದ ನಾನೂ ಹೆಸರು ಬದಲಾಯಿಸಿಕೊಳ್ಳಬೇಕೆ? ಬೇವಿನ ಮರದ ಕೆಳಗೆ ಜ್ಞಾನೋದಯ ಆದದ್ದೇ ಬಂತು. ನನ್ನ ತಲೆ ಸಂಶಯದ ಗಡಿಗೆಯಾಗುತ್ತಿದೆ. ಹಾಗಾಗಿ ಕೆಲವು ದಿನಗಳವರೆಗಾದರೂ ಆ ಮರದ ಕೆಳಗೆ ಕುಳಿತು ತೂಕಡಿಸಬಾರದೆಂದು ತೀರ್ಮಾನಿಸಿದ್ದೇನೆ.

ಎಂದು ನಿಮ್ಮ

- ಬೀರಣ್ಣ [illegible]


ನಮ್ಮೆಜಮಾನ್ರು ಥೇಟ್ ಸೋನಿಯಾ ಥರ.... ಪಾಪ, ಏನಂದ್ರೆ ಏನೂ ಗೊತ್ತಾಗಲ್ಲ.....

# ಜೀರ್ಣಾಂಗಗಳ ಸಾಮಾನ್ಯ ಕಾಹಿಲೆಗಳು

ಡಾ॥ ವಸಂತ ಅ. ಕುಲಕರ್ಣಿ

ಬಾಯಿ-ಅನ್ನನಳಿಕೆ-ಜಠರ-ಕರುಳು-ದೊಡ್ಡಕರುಳು ಹೀಗೆ ಜೀರ್ಣಾಂಗಗಳ ಉದ್ದ ಸುಮಾರು ಒಂಭತ್ತು ಮೀಟರಗಳಷ್ಟು. ಈ ಜೀರ್ಣಾಂಗಗಳು ಕರಾರುವಾಕ್ಕಾಗಿ ಕೆಲಸ ಮಾಡುತ್ತವೆ. ನಮ್ಮ ದೇಹಕ್ರಿಯೆಗಳಿಗೆ ಬೇಕಾದ 'ಶಕ್ತಿ'ಯನ್ನು ಆಹಾರ ಘಟಕಗಳು ಒದಗಿಸುತ್ತವೆ. ಒಂದು ಆಹಾರದ ತುತ್ತು ಕ್ರಮಬದ್ಧವಾಗಿ ಪಚನಗೊಂಡು ಜೀರ್ಣಾಂಗಗಳಲ್ಲಿ ಶಕ್ತಿದಾಯಿಯಾಗಿ ದೇಹದ ಎಲ್ಲ ಕ್ರಿಯೆಗಳಿಗೂ ಇಂಧನವಾಗುತ್ತದೆ. ಹೀಗಾಗಿ ಜೀರ್ಣಾಂಗಗಳಲ್ಲಿ ಉದ್ಭವವಾಗುವ ತೊಂದರೆಗಳು ಪಚನಕ್ರಿಯೆಗಳ ಮೇಲೆ ಹಾಗೂ ಪೋಷಕಾಂಶಗಳನ್ನು ಹೀರುವಲ್ಲಿ ಪರಿಣಾಮ ಬೀರುತ್ತವೆ.

**ಬಾಯಿಯ ಸಮಸ್ಯೆಗಳು - ದುರ್ವಾಸನೆ**

ಬಾಯಿಯ ಅಂಗಳವನ್ನು ಸೇರಿದ ತುತ್ತು ಸಂಪೂರ್ಣವಾಗಿ ಸಣ್ಣ ಸಣ್ಣ ಚೂರುಗಳಾಗಿ ನುಜ್ಜನಂತೆ ಅರೆಯಲ್ಪಟ್ಟು ನುಣ್ಣಗಾದ 'ತುತ್ತು' ನುಂಗಲು ಸುಗಮವಾಗುತ್ತದೆ. ಬಾಯಿಯಲ್ಲಿ ಆಹಾರವು ಅತ್ತಿಂದತ್ತ ನುರಿಸಿದಾಗ ಜೊಲ್ಲುರಸವು ಬೆರೆಯುತ್ತದೆ. ಜೊಲ್ಲು ರಸದಿಂದ ಆಹಾರದ ಪಚನಕ್ರಿಯೆ ಆರಂಭಗೊಳ್ಳುತ್ತದೆ.

ಬಾಯಿಯ ದುರ್ಗಂಧ ಜೀವನದಲ್ಲಿ ಅನೇಕ ಬಾರಿ ಕಾಡುವದು. ಬಾಯಿ ಸೂಸುವ ದುರ್ವಾಸನೆ ಕೇವಲ ವೈಯಕ್ತಿಕವಾದ ಸಮಸ್ಯೆಯಾಗಿರದೆ ಅದು ಪಚನ ಕ್ರಿಯೆಯಲ್ಲಿಯೂ ಅಡ್ಡಿ ಉಂಟುಮಾಡುವುದು. ಬಾಯಿಯ ದುರ್ವಾಸನೆ ಅಥವಾ ಹ್ಯಾಲಟೋಸಿಸ್‌ಗೆ ಹಲ್ಲುಗಡೆಯಲ್ಲಿ ಹುಟ್ಟಿಕೊಂಡ ಬ್ಯಾಕ್ಟೀರಿಯಾಗಳೇ ಅಲ್ಲದೆ ಪರೋಕ್ಷ ಕಾರಣಗಳೂ ಇರಬಹುದು. ಹಲ್ಲುಗಳ ಕುಳಿಯಲ್ಲಿ ಅಥವಾ ಸಂದುಗಳಲ್ಲಿ ಉಳಿದುಕೊಂಡ ಆಹಾರ ಶೇಷಗಳಲ್ಲಿಯ ಪ್ರೊಟೀನ್‌ಗಳನ್ನು ಬಳಸಿಕೊಂಡು ಬೆಳೆಯುವ ಲಕ್ಷಾಂತರ ಬ್ಯಾಕ್ಟೀರಿಯಾ ರೋಗಾಣುಗಳ ಅಟ್ಟಹಾಸವೇ ಈ ದುರ್ಗಂಧ ಬಾಯಿ ವಾಸನೆ.

ಕೆಲವು ಬಾರಿ ದೀರ್ಘ ನಿದ್ರೆಯ ನಂತರ ಬಾಯಿಯು ಒಣಗಿದಾಗ ಈ ರೀತಿಯ ವಾಸನೆ ಬರುವದು. ರೋಗಾಣುಗಳು ಹೈಡ್ರೋಜನ್ ಸಲ್ಫೈಡ್ ಹಾಗೂ ಮಿಥಿಲ್ ಮೆರಾಕ್ಯಾಪ್ಟನ್ ಎಂಬ ಅನಿಲಗಳ ಮೂಲಕ ದುರ್ಗಂಧ ಉಂಟುಮಾಡುವವು. ನೆಗಡಿಯಿಂದ ಕಟ್ಟಿಕೊಂಡ ಮೂಗು, ಉಪವಾಸ, ವಿವಿಧ ಧೂಮ್ರಪಾನ, ಬಾಯಿಯ ಅಂಗಳದ ಸ್ವಚ್ಛತೆಯ ಬಗ್ಗೆ ಕಾಳಜಿ ವಹಿಸದೆ ಇರುವದು, ಅಲ್ಲದೆ ಮಾನಸಿಕ ಒತ್ತಡದ ಬಳಲಿಕೆಗಳು ಇಂಥ ಪರಿಣಾಮಕ್ಕೆ ಮೂಲ. ಬಾಯಿಯ ದುರ್ಗಂಧ ವಾಸನೆಯು ಇತರರಿಗೆ ಎಷ್ಟು ಅಸಹ್ಯಕಾರಿಯೋ ಅಷ್ಟೇ ದೇಹದ ಹಲವು ರೋಗಗಳ ಮೂಲಕಾರಣ ವಾಗಬಹುದು. ಕಾರಣವನ್ನು ಕಂಡು ಹಿಡಿದು ಉಪಚಾರ ಪಡೆಯುವುದು ಸೂಕ್ತ. ಅಲ್ಲದೆ ಬಾಯಿಯ ಸ್ವಚ್ಛತೆಯ ಕ್ರಮಗಳ ಬಗ್ಗೆ ಆದ್ಯ ಗಮನ ಹರಿಸುವುದು ಮುಖ್ಯ.

**ಬಾಯಿ ಬರುವಿಕೆ - ಬಾಯಿ ಅಂಗಳದಲ್ಲಿ ಹುಣ್ಣು - ನಾಲಿಗೆಯ ಗುಳ್ಳೆಗಳು**

ಸ್ವಚ್ಛವಾಗಿ ಇರಿಸಿಕೊಳ್ಳದ ಬಾಯಿಯಲ್ಲಿ ಹುಣ್ಣುಗಳು ಉಂಟಾಗುವದು ಸಾಮಾನ್ಯ. ಅಸ್ವಚ್ಛ ಹಾಗೂ ಹುಳುಕು ಹಲ್ಲುಗಳಿಂದ ಕೂಡಿದ ಬಾಯಿಯ ಅಂಗಳ ವಸಡಿನ ಉರಿಯೂತ ಮತ್ತು ಹುಣ್ಣುಗಳ ರೋಗವನ್ನು ತರುತ್ತದೆ. ಪದೇಪದೇ ಧೂಮ್ರಪಾನ, ತಂಬಾಕು ಜಗಿದು ವಸಡಿನಲ್ಲಿ ಹಿಡಿಯುವುದು, ಕೆಳದರ್ಜೆಯ ಮದ್ಯ - ಸ್ಪಿರಿಟ್ ಕುಡಿಯುವುದು, ಇವೆಲ್ಲಾ ಈ ರೀತಿಯ ತೊಂದರೆಗೆ ಸಿಲುಕಿಸುತ್ತವೆ. ಕೆಲವು ವೇಳೆ ನಾಲಿಗೆಯ ಮೇಲೆ, ಪಕ್ಕ ಹಾಗೂ ಕೆಳಗಡೆ ಕೆನ್ನೆಯ ಒಳಭಾಗದಲ್ಲಿ ಹುಣ್ಣುಗಳಾಗಿ ತುಂಬಾ ನೋವು ಕೊಡುತ್ತವೆ. ಹಲ್ಲುಗಳ ತುದಿಗಳು ಚೂಪಾಗಿ ನಾಲಿಗೆಯನ್ನು ಒತ್ತುವುದರಿಂದಲೂ ಹುಣ್ಣುಗಳು ಉಂಟಾಗಬಹುದು. ಸಾಮಾನ್ಯವಾಗಿ ''ಬಿ'' ಜೀವಸತ್ವಗಳ ಕೊರತೆ - ರಕ್ತಹೀನತೆಯಿಂದ ಬಹು ಬೇಗನೆ ಸೋಂಕು ತಗುಲಿ - ಹುಣ್ಣುಗಳು ಉಂಟಾಗಬಹುದು. ನವಜಾತ ಶಿಶುಗಳಲ್ಲಿ ಮೊದಲು ಕೆಲವು ವಾರಗಳಲ್ಲಿ ಕಾಣಿಸಿಕೊಳ್ಳುವ ಬಾಯಿಯ ಹುಣ್ಣುಗಳಿಗೆ ಕ್ಯಾಂಡಿಡಾ ಅಲ್ಬಿಕಾನ್ಸ ಎಂಬ ಬೂಸ್ಟು ಕಾರಣ. ಆರು ವರುಷದ ಮಕ್ಕಳಲ್ಲಿ ಸಾಂಕ್ರಾಮಿಕವಾಗಿ ಬರುವ ಬಾಯಿಹುಣ್ಣುಗಳಿಗೆ ವೈರಸ್ ಕಾರಣವಾಗಿರಬಹುದು.

ಮುನ್ನೆಚ್ಚರಿಕೆಯ ದೃಷ್ಟಿಯಿಂದ ಬಾಯಿಯ ಸ್ವಚ್ಛತೆ ಹಾಗೂ ಅದರ ನೈರ್ಮಲ್ಯಕ್ಕೆ ಆದ್ಯ ಗಮನ ಕೊಡಲೇ ಬೇಕು. ಕೆಲವು ಬಾರಿ ಬಾಯಿಯ ಹುಣ್ಣುಗಳು ಯಾವುದೇ ಚಿಕಿತ್ಸೆ ಇಲ್ಲದಿದ್ದರೂ ಕಲೆ ಕಾಣದಂತೆ ಗುಣವಾದರೂ ಮರುಕಳಿಸುವ ಸಾಧ್ಯತೆ ಹೆಚ್ಚು. ಕಾರಣ ಕಂಡುಹಿಡಿದು ಸೂಕ್ತ ಉಪಚಾರ ಪಡೆಯಲೇಬೇಕು. ದೀರ್ಘ ಕಾಲ ಮಾಯವಾಗದ ಹುಣ್ಣು ಕ್ಯಾನ್ಸರಿಗೂ ತಿರುಗಬಹುದು.

**ಜಠರದ ಕಾಯಿಲೆಗಳು - ಆಮ್ಲ ಪಿತ್ತ - ಎದೆ ಹುಳಿಸುಡುವಿಕೆ :**

ಜಠರ ನಾವು ಸೇವಿಸುವ ಆಹಾರವನ್ನು ಶೇಖರಿಸಿಟ್ಟು ಕೊಂಡು ಪಚನಕ್ರಿಯೆಗೆ ಅಣಿಗೊಳಿಸುತ್ತದೆ. ಜಠರದ ಒಳ ಆವರಣದ ಲೋಳ್ಪರೆಯಲ್ಲಿ 'ಹೈಡ್ರೋಕ್ಲೋರಿಕ್ ಆಮ್ಲ' ಸಿದ್ಧವಾಗುತ್ತದೆ. ಇದು ಪ್ರೊಟೀನ್‌ಗಳನ್ನು ವಿಭಜಿಸುವ ಪೆಪ್ಸಿನೋಜೆನ್ ಪಾಚಕರ ಕಿಣ್ವದ ಮೇಲೆ ಕ್ರಿಯೆಯಿಂದ 'ಪೆಪ್ಸಿನ್' ಕಿಣ್ವ ಸಿದ್ಧಪಡಿಸುತ್ತದೆ.

ಮುಖ್ಯವಾಗಿ ಜಠರ ಲೋಳ್ಪರೆಯ ಉರಿಯೂತ ಅದರ ಕೆರಳಿಕೆಯಿಂದ ಸಾಮಾನ್ಯವಾಗಿ ನಾವು ಕಾಣುತ್ತೇವೆ. ಎದೆ ಹುಳಿಸುಡುವಿಕೆ ಆಮ್ಲಪಿತ್ತದ ವಿಕಾರಗಳು ಹೆಚ್ಚಾಗಿ ಒಸರುವ ಆಮ್ಲದಿಂದ ಉಂಟಾಗುತ್ತದೆ. ಜಠರದ ಉರಿಯೂತ ಯಾವ ಲಕ್ಷಣಗಳನ್ನೂ ತೋರಿಸದೆ ಇರ ಬಹುದು. ಕೆಲವರು ಹಸಿವಿಲ್ಲದಿರುವಿಕೆ, ವಾಕರಿಕೆ, ಅಪಚನ, ಹೊಟ್ಟೆಯ ಕುಳಿಯಲ್ಲಿ ನೋವು, ಎದೆಯುರಿ ತೋರಿಸುತ್ತಾರೆ. ಆಸ್ಪಿರಿನ್‌ದಂಥ ಗುಳಿಗೆಗಳ ಸೇವನೆ, ತೀವ್ರ ಖಾರವಾದ ಮಸಾಲೆ ಪದಾರ್ಥಗಳನ್ನು ಸೇವಿಸು ವದು, ತಂಬಾಕು ಸೇವನೆ ಇವು ಕೂಡ ಜಠರದ ಲೋಳ್ಪರೆಯ ಕೆರಳಿಕೆಗೆ ಕಾರಣವಾಗಬಹುದು. ಕೆಲವು ಔಷಧಿಗಳು ಕೂಡ ವಾಕರಿಕೆ - ವಾಂತಿ ಉಂಟು ಮಾಡಬಲ್ಲವು.

ತಿಂದ ಆಹಾರ ಪದಾರ್ಥವು ಜೀರ್ಣಗೊಂಡು ಮುಂದೆ ಕರುಳಿಗೆ ಸಾಗಬೇಕಾಗುತ್ತದೆ. ಆದರೆ ತೀವ್ರ ತರವಾದ ಲೋಳ್ಪರೆಯ ಕೆರಳಿಕೆಯಿಂದ ಜಠರವು ವಿರುದ್ಧ ದೆಸೆಯಲ್ಲಿ ಆಕುಂಚನಗೊಂಡು ತಿಂದ ಆಹಾರ ಪದಾರ್ಥವು 'ವಾಂತಿ'ಯ ರೂಪದಲ್ಲಿ ಹೊರಗೆ ದಬ್ಬಲ್ಪಡುತ್ತದೆ. ತಿಂದ ಆಹಾರದಲ್ಲಿ ವಿಷಬಾಧೆ ಇದ್ದರೆ, ಒಗ್ಗದ ಔಷಧಗಳನ್ನು ಸೇವಿಸಿದಾಗ ಮತ್ತು ಅತೀ ಭೇದಿ ಉಂಟಾದಾಗ 'ವಾಂತಿ' ಪ್ರಕಟಗೊಳ್ಳುತ್ತದೆ. ವಾಕರಿಕೆ - ವಾಂತಿಯು ಜಠರದ ಪ್ರತಿಭಟನೆಯ ಇನ್ನೊಂದು ರೂಪ.

ಜಠರರಸದ ಪ್ರಮುಖ ಘಟಕಗಳಾದ ಹೈಡ್ರೋಕ್ಲೋರಿಕ್ ಆಮ್ಲ ಜೀರ್ಣಕ ರಸಗಳ ಪ್ರಭಾವದಿಂದ ಜಠರ ಮತ್ತು ಮುಂಗರುಳಿನಲ್ಲಿ ಕಾಣಿಸಿಕೊಳ್ಳುವ ಹುಣ್ಣುಗಳನ್ನು ಒಟ್ಟಾರೆಯಾಗಿ ಜೀರ್ಣಕ ಹುಣ್ಣು ಎಂದು ಕರೆಯ ಲಾಗುತ್ತದೆ. ತರಾತುರಿಯ ಒತ್ತಡದ ಜೀವನ, ಮಾನಸಿಕ ತೊಳಲಾಟಗಳು, ಮಸಾಲೆಯಂತಹ ಸಾಂಬಾರಯುಕ್ತ ಪದಾರ್ಥಗಳ ಸೇವನೆ, ಜೀರ್ಣಕ ಹುಣ್ಣಿಗೆ ಕಾರಣ ವಾಗಬಹುದು. ಕೆಲವರ ಜಠರದಲ್ಲಿ ಹಾಗೂ ಮುಂಗರುಳಿನ ಭಾಗದಲ್ಲಿ ಯಥೇಚ್ಛವಾಗಿ ಕಂಡುಬರುವ ಹೆಲಿಕೊ ಬ್ಯಾಕ್ಟರ್ ಪೈಲೊರಿ ಎಂಬ ರೋಗಾಣುಗಳ ಸೋಂಕು ಕೂಡ ಕಾರಣವಾಗಬಹುದು.

ಮುಂಗರುಳಿನ ಆದಿಭಾಗದಲ್ಲಿ ಪ್ರಕಟವಾಗುವ ಈ

ಹುಣ್ಣುಗಳ ಪ್ರಮಾಣ ಜಠರದ ಹುಣ್ಣುಗಳಿಗಿಂತ ನಾಲ್ಕು ಪಟ್ಟು ಹೆಚ್ಚು. ಹೊಟ್ಟೆಯೊಳಗಡೆ ನೋವು ಕಾಣಿಸಿ ಕೊಳ್ಳುವದು ಜೀರ್ಣಕ ಹುಣ್ಣಿನ ಪ್ರಮುಖ ಲಕ್ಷಣ. ಆಹಾರ ಸೇವನೆಯ ಸಮಯಕ್ಕೂ, ನೋವು ಪ್ರಕಟವಾಗುವದಕ್ಕೂ ವಿಶಿಷ್ಟ ಬಗೆಯ ಸಂಬಂಧವಿರುತ್ತದೆ. ಮುಂಗುರುಳಿನ ಹುಣ್ಣು ಇರುವವರಲ್ಲಿ ಜಠರದಲ್ಲಿ ಆಹಾರ ಖಾಲಿಯಾದಾಗ ನೋವು ಆರಂಭವಾದರೆ ಜಠರದ ಹುಣ್ಣಿರುವವರಲ್ಲಿ ಆಹಾರ ಸೇವಿಸಿದಾಕ್ಷಣ ಇಲ್ಲವೆ ಸ್ವಲ್ಪ ಹೊತ್ತಿನ ಸಮಯದಲ್ಲಿ ನೋವು ಆರಂಭವಾಗುತ್ತದೆ. ಈ ಹುಣ್ಣುಗಳ ಹುಟ್ಟಿಗೆ ಮಾನಸಿಕವಾಗಿ ಒತ್ತಡಗಳು ಪ್ರಮುಖ ಪಾತ್ರ ವಹಿಸುವದರಿಂದ ನೆಮ್ಮದಿಯ ಬದುಕನ್ನು ರೂಢಿಸಿಕೊಳ್ಳಬೇಕು. ಕಾಫಿ, ಚಹಾ, ಮದ್ಯಪಾನ, ಧೂಮಪಾನಗಳಂತಹ ಹವ್ಯಾಸಗಳನ್ನು ಮಿತಗೊಳಿಸಬೇಕು. ಕಾರ್ಟಿಸೋನ್ ಆಸ್ಪಿರಿನ್‌ನಂತಹ ಔಷಧಗಳನ್ನು ತೆಗೆದುಕೊಳ್ಳಬಾರದು. ನಿಯಮಿತ ಕಾಲದಲ್ಲಿ ಆಹಾರ ಪದಾರ್ಥಗಳ ಸೇವನೆ ಮಾಡುತ್ತಾ ಜಠರ ಬಹಳ ಕಾಲ ಖಾಲಿಯಾಗಿರದಂತೆ ನೋಡಿಕೊಳ್ಳಬೇಕು.

ಜನಸಾಮಾನ್ಯರು ಒಡಲಿನಲ್ಲಿ ಗಾಳಿ ತುಂಬಿದೆ - ಅಬ್ಬಳಿಕೆ - ಹೊಟ್ಟೆ - ಕುಟ್ಟು ಹಿಡಿದಿದೆ ಮುಂತಾದ ತಕರಾರುಗಳಿಂದ 'ಗ್ಯಾಸ್ ಟ್ರಬಲ್' ಇದೆ ಎಂದು ಹೇಳುತ್ತಾರೆ. ಹೊಟ್ಟೆ ಭಾರವಾಗುವುದಲ್ಲದೆ ಒಮ್ಮೊಮ್ಮೆ ವಾಕರಿಕೆ - ವಾಂತಿ ಬಂದಂತಾಗುವದು ಇದರ ಲಕ್ಷಣ. ಗಡಿಬಿಡಿಯಿಂದ ಊಟ ಮಾಡುವದು, ಆಹಾರವನ್ನು ಚೆನ್ನಾಗಿ ನುರಿಸದೇ ನುಂಗುವದು, ಅಲ್ಲದೆ ಸಾಕಷ್ಟು ನೀರು ಕುಡಿಯದೇ ಇರುವದು ಅನ್ನ ಮಾರ್ಗದಲ್ಲಿ ಗಾಳಿ ತುಂಬಲು ಅವಕಾಶ ಮಾಡಿಕೊಡುತ್ತದೆ. ಯೋಗ್ಯ ವ್ಯಾಯಾಮ ಮತ್ತು ಆಹಾರದ ಸಮಸೇವನೆಯಿಂದ ಇದನ್ನು ನಿವಾರಿಸಬಹುದು. ಮಲಬದ್ಧತೆಯಿಂದೂ (ಅಪಾನವಾಯು) ಉಂಟಾಗಬಹುದು. ಆಹಾರವನ್ನು ಚೆನ್ನಾಗಿ ಅರೆದು ನುರಿಸುವದರಿಂದ ಬಹುಪಾಲು ಈ ತೊಂದರೆಯನ್ನು ನಿವಾರಿಸಬಹುದು.

**ಅತಿಭೇದಿ - ಹೊಟ್ಟೆ ಝಾಡಿಸುವಿಕೆ**

ಕರುಳಿಗೆ ನೀರಿನ ಮಾಧ್ಯಮ ಬೇಕೇಬೇಕು. ನೀರು ಮತ್ತು ಲವಣಗಳು ಕರುಳಿನಲ್ಲಿ ಹೀರಲ್ಪಟ್ಟು ದೇಹದ್ರವದ ಮಟ್ಟ ಸಮತೋಲನದಲ್ಲಿರುತ್ತದೆ. ಒಂದು ವೇಳೆ ಹೀರುವ ಕ್ರಿಯೆ ಅಸ್ತವ್ಯಸ್ತಗೊಂಡರೆ ನೀರಿನೊಡನೆ ಮಲವಿಸರ್ಜನೆಯಾಗುವದು. ಒಮ್ಮೊಮ್ಮೆ ಗಂಜಿನಂತಹ ಹೊಟ್ಟೆ ಝಾಡಿಸಿದರೆ ಇನ್ನೊಮ್ಮೆ ಹೊಟ್ಟೆ ನೋವಿನೊಡನೆ ಪಿಚಕಾರಿಯಂತೆ ಭೇದಿಯಾಗುವದು. ಇನ್ನೊಮ್ಮೆ ಆಮಶಂಕೆಯಾಗಿ ರಕ್ತಮಿಶ್ರಿತ 'ಆಮ' ಬೀಳುವದು. ದೂಷಿತ ಆಹಾರ ಪದಾರ್ಥಗಳಿಂದ ಅಥವಾ ಕುಡಿಯುವ ಅಶುಚಿ ನೀರಿನಿಂದ ಇದು ಉಂಟಾಗುವದು. ಕರುಳಿನ ಬಾಲ ಅಪೆಂಡಿಕ್ಸದ ಉರಿಯೂತದಿಂದಲೂ ಹೊಟ್ಟೆ ನೋವು ಉಂಟಾಗಿ ವಾಂತಿ ಹಾಗೂ ಅತಿಭೇದಿ ಉಂಟಾಗಬಹುದು. ಕೆಲಬಾರಿ ಬ್ಯಾಕ್ಟೀರಿಯಾಗಳ ತೀವ್ರ ಸೋಂಕಿನಿಂದ ಜ್ವರದೊಡನೆ ತೀವ್ರವಾಗಿ ಭೇದಿಯಾಗುವದು. ಹಿಸ್ಟೊಲೆಟಿಕಾ ಅಮೀಬಾಗಳು ಕರುಳಿನಲ್ಲಿ ಬೀಡು ಬಿಟ್ಟು ಸಂತತಿ ವರ್ಧಿಸಿದಾಗ ಆಮಶಂಕೆ ಉಂಟಾಗುವದು. ಒಂದೆಡೆಯಲ್ಲಿ ಹೊಟ್ಟೆನೋವು ಇದ್ದು ಮಲದಲ್ಲಿ ಆಮ ಮತ್ತು ರಕ್ತ ಮಿಶ್ರಿತವಾಗಿರುವುದು ಇದರ ಲಕ್ಷಣ. ಇದರಲ್ಲಿ ಪದೇಪದೇ ನೀರು-ಲವಣ ದೇಹದಿಂದ ವಿಸರ್ಜನೆಗೊಳ್ಳುವುದರಿಂದ 'ದೇಹದ್ರವ' ಪ್ರಮಾಣ ಕಡಿಮೆಯಾಗಿ ಕ್ರಿಯೆಗಳಿಗೆ ಸಂಚಕಾರ ಬರುತ್ತದೆ. ಆದ ಕಾರಣ ಈ ತೊಂದರೆ ಪರಿಹರಿಸಲು ಅತೀವ ಜಲನಷ್ಟದಲ್ಲಿ 'ಸಲೈನ್' ಉಪಚಾರ ನೀಡಬೇಕಾಗುತ್ತದೆ. ಒಂದು ತಂಬಿಗೆ ನೀರು, ಒಂದು ಚಮಚ ಸಕ್ಕರೆ, ಒಂದು ಚಮಚದಷ್ಟು ಉಪ್ಪು, ಸಾಧ್ಯವಾದರೆ ಒಂದಿಷ್ಟು ಲಿಂಬಿ ಹುಳಿ ಹಿಂಡಿ, ಅದನ್ನು ವಾಂತಿಭೇದಿಯಾಗುವವರಿಗೆ ಮೇಲಿಂದ ಮೇಲೆ ಕುಡಿಸಿ ದೇಹದ್ರವ ನಷ್ಟವ ತಪ್ಪಿಸಬಹುದು. ಇದು ಅತ್ಯಂತ ಸುಲಭ ಉಪಾಯ. ಮಕ್ಕಳಿಗಂತೂ ಇದೊಂದು ವರದಾನ.

> *ಮಾನವನು ಕೇವಲ ಅನ್ನವೊಂದರಿಂದಲೇ ಬದುಕುವುದಿಲ್ಲ. ಆದರೆ ಬದುಕಲು ಅನ್ನ ಬೇಕೇಬೇಕು. ಆಹಾರ ವಸ್ತುಗಳನ್ನು ಅವುಗಳ ಮೂಲಘಟಕಗಳಾಗಿ ವಿಭಜಿಸಿ ಸಂಸ್ಕರಿಸುವುದೇ ಪಚನ ಕ್ರಿಯೆ. ನುರಿಸಿ-ಅರಿಸಿ-ಹೀರಿ, ಜೀವಶಕ್ತಿ ನೀಡುವುದೇ ಜೀರ್ಣಾಂಗಗಳ ಕಾರ್ಯವೈಖರಿ. ಬೇಕಾದ್ದನ್ನು ಇಟ್ಟುಕೊಂಡು - ದೇಹಕ್ಕೆ ನೀಡಿ - ಬೇಡವಾದ ಕಲ್ಮಶವನ್ನು ಹೊರಹಾಕುವುದೇ ಜೀರ್ಣಾಂಗಗಳ ಕೆಲಸ.*

## ಮುಸಿ - ಮುಸಿ ನಕ್ಕಳು

*ಅಂದು*
*'ಸುಖ ಸಂಸಾರಕ್ಕೆ ಹನ್ನೆರಡು ಸೂತ್ರಗಳು'*
*ಎಂಬ ಸಿನೇಮ ನೋಡಿದ*
*ನನ್ನ ಹನ್ನೆರಡು ವರ್ಷದ ಮಗಳು*



*ಇಂದು*
*'ಸುಭದ್ರ ಸರಕಾರಕ್ಕೆ ಹನ್ನೆರಡು ಸೂತ್ರಗಳು'*
*ಎಂದ ರಾಜಕೀಯ ನಾಯಕರ ಹೇಳಿಕೆ ಕೇಳಿ*
*ಮುಸಿ - ಮುಸಿ ನಕ್ಕಳು*

**ಶಂಕರಗೌಡ ಸಾತ್ಮಾರ**
ಸರಕಾರಿ ಪ್ರ. ದ. ಕಾಲೇಜು, ರೋಣ

**ಒಡಲಿನಲ್ಲಿ ಹುಳುಗಳ ತೊಂದರೆ**

ದುಂಡಹುಳ, ಚಪ್ಪಟೆಹುಳ, ಕೊಕ್ಕೆ ಹುಳಗಳ ಸಾಮ್ರಾಜ್ಯದ ನೆಲಪೀಡವೇ ಕರುಳು - ದೊಡ್ಡ ಕರುಳು. ಆಬಾಲವೃದ್ಧರಿಂದಲೂ ಹುಳಗಳ ತಕರಾರು ಇದ್ದುದೇ. ದುಂಡಹುಳಗಳು ಸಾವಿರಾರು ಸಂತತಿಯಾಗಿ ಬೆಳೆದು ಮಕ್ಕಳಿಗೆ ದೊಡ್ಡವರಿಗೆ ಭೇದವೆಸಿಸದೆ ತೊಂದರೆ ಕೊಡುವವು. ಆಹಾರದ ಪೋಷಕಾಂಶಗಳನ್ನು ಹೀರುವ ಪರಾನ್ನ ಜೀವಿಗಳು ಕೊಕ್ಕೆ ಹುಳುಗಳು. ಅವು ಕರುಳಿನಲ್ಲಿ ರಕ್ತ ಹೀರಿ ರಕ್ತಹೀನತೆ ತರುವವು. ಹುಳಗಳ ತತ್ತಿಗಳು ಪುಪ್ಪಸಕ್ಕೆ ಸಾಗಿ ಎಡೆಬಿಡದ ಕೆಮ್ಮು ತರುವವು. ಕೆಲ ಹುಳಗಳಂತೂ ಚರ್ಮದ ಮೇಲೆ ಕಲೆಗಳನ್ನು ಉಂಟುಮಾಡುವವು. ಮುಖ್ಯವಾಗಿ ಹೊಟ್ಟೆ ನೋವಿನ ಬಾಧೆ ಅತಿಯಾದರೆ ವಾಕರಿಕೆ ವಾಂತಿ ಉಂಟು ಮಾಡುವವು. ವಾಂತಿಯಲ್ಲಿಯೂ ರಂಗುರಂಗಿನ ಹುಳಗಳು ಬಿದ್ದ ಉದಾಹರಣೆಗಳಿವೆ. ಅಮೀಬಾದಂಥ ಪರಾನ್ನ ಜೀವಿಗಳು ಯಕೃತ್ತಿಗೆ ಹೋಗಿ ಅಲ್ಲಿ ನೆಲೆಗಟ್ಟುವವು. ಹೀಗೆ ಇವುಗಳು ತರುವ ಜಟಿಲತೆಗಳು ಅನೇಕ. ಆದ್ದರಿಂದ ಆಗಾಗ್ಗೆ ಜಂತುನಾಶಕ ಔಷಧ ಸೇವಿಸುವದು ಸೂಕ್ತ.

**ಮಲಬದ್ಧತೆ**

ಚಿಕ್ಕ ಮಕ್ಕಳಲ್ಲಿ, ವೃದ್ಧರಲ್ಲಿ, ಕೆಲ ಮಧುಮೇಹಿಗಳಲ್ಲಿ ಮಲಬದ್ಧತೆ ದಿನನಿತ್ಯದ ಸಮಸ್ಯೆಯಾಗಿರುತ್ತದೆ. ನಿತ್ಯವೂ ಕ್ರಮಬದ್ಧವಾಗಿ ಮಲವಿಸರ್ಜನೆಯಾದರೆ ಆರೋಗ್ಯಕ್ಕೆ ಹಿತಕರ. ಕೆಲ ಬಾರಿ ಮಾನಸಿಕ ಕಾಹಿಲೆಗಳು, ದೈಹಿಕ ತೊಂದರೆಗಳು, ಭೌತಿಕ ಪರಿಸರದಲ್ಲಿಯ ಬದಲಾವಣೆಗಳು ಅಥವಾ ಮಲವಿಸರ್ಜನೆಯ ರೂಢಿಗತ ಪದ್ಧತಿಯ ಬದಲಾವಣೆ, ಉಪವಾಸವಿರುವದು, ಸಾಕಷ್ಟು ತಿನ್ನದೇ ಇರುವದು, ನೀರು ಕಡಿಮೆ ಕುಡಿಯುವದು, ಆಹಾರೋಪಾದಿಗಳಲ್ಲಿ ತಂತುವಸ್ತುಗಳು ಇಲ್ಲದೆ ಇರುವದು, ಧೂಮ್ರಪಾನ, ಹೀಗೆ ಮಲಬದ್ಧತೆ ತರಲು ನೂರೆಂಟು ಕಾರಣಗಳ ಪಟ್ಟಿ ಮಾಡಬಹುದು. ಮಲಬದ್ಧತೆಯು ಮನಸ್ಸಿಗೆ ಕಿರಿಕಿರಿಯುಂಟುಮಾಡುವದು. ಎಳೆಯ ಮಕ್ಕಳಲ್ಲಿ ತಾಯಿ ನೀಡುವ ಆಹಾರವೇ ಮಲಬದ್ಧತೆಗೆ ಕಾರಣವಾಗಬಹುದು.

ಮುಖ್ಯವಾಗಿ ಸೂಕ್ತವಾದ ತಂತುಯುಕ್ತ ಆಹಾರ ಸೇವನೆ, ಮಧುಮೇಹಿಗಳಲ್ಲಿ ರಕ್ತದಲ್ಲಿಯ ಗ್ಲುಕೋಸ್ ನಿಯಂತ್ರಣ, ನಿಯಮಬದ್ಧ ಮಲವಿಸರ್ಜನಾಭ್ಯಾಸ, ಸರಿಯಾದ ಪರಿಸರ ನಿರ್ಮಾಣ, ಮಾನಸಿಕ ರೋಗಗಳಿಗೆ ಸೂಕ್ತ ಚಿಕಿತ್ಸೆ, ಇವಕ್ಕೆ ಆದ್ಯಗಮನ ನೀಡಬೇಕು. ನಾರಳೆಯುಕ್ತ (ತಂತುಯುಕ್ತ) ಆಹಾರಸೇವನೆ, ಹಸಿ ತರಕಾರಿ, ಕಾಯಿಪಲ್ಲೆಗಳ ಬಳಕೆ, ಹಣ್ಣಿನ ಸೇರ್ಪಡೆ ಇವುಗಳಿಂದ ಮಲಬದ್ಧತೆಗೆ ಪರಿಹಾರ ಕಾಣಬಹುದು. ಇದಕ್ಕೆ ಉಪಾಯ ಸುಲಭ; ನಿರ್ಲಕ್ಷಿಸಿದರೆ ಅಪಾಯ ದ್ವಿಗುಣ.

ಡಾ॥ ವಸಂತ ಅ. ಕುಲಕರ್ಣಿ
ಪ್ರಾಧ್ಯಾಪಕರು, ಬಿ.ಎಲ್.ಡಿ.ಇ.ಎ. ಮೆಡಿಕಲ್ ಕಾಲೇಜು,
ವಿಜಾಪುರ - ೫೮೬೧೦೧

# ಹೊಸ ಸಹಸ್ರಮಾನದಲ್ಲಿ ಜಾನಪದ ಅಧ್ಯಯನ

ಡಾ॥ ಜಿ. ಆರ್. ತಿಪ್ಪೇಸ್ವಾಮಿ

ಕರ್ನಾಟಕದಲ್ಲಿ ಜಾನಪದ ಅಧ್ಯಯನ ತುಂಬಾ ಗಂಭೀರವಾಗಿಯೇ ನಡೆಯುತ್ತಲಿದೆ. ಆದರೆ ಹೊರ ದೇಶಗಳಿಗೆ (ಅಮೇರಿಕ, ಫಿನ್ಲೆಂಡ್) ಹೋಲಿಸಿದಾಗ ಇಲ್ಲಿಯ ಕೆಲಸ ತೀರಾ ಕಡಿಮೆಯೆಂದೇ ಹೇಳಬಹುದು. ಆರಂಭದಲ್ಲಿ ಇಲ್ಲಿ ಸಂಗ್ರಹ ಕಾರ್ಯಕ್ಕೆ ಹೆಚ್ಚಿನ ಆಸಕ್ತಿ ವಹಿಸಲಾಗಿತ್ತು. ಸಂಗ್ರಹಕಾರರ ಗುಂಪೇ ಸಿದ್ಧವಾಗಿ ಅದರ ಒಂದು ಪರಂಪರೆಯೇ ಬೆಳೆದುಬಂದಿತು. 'ನಮ್ಮಲ್ಲಿ ಜಾನಪದ ಸಮೃದ್ಧವಾಗಿದೆ. ಅದು ನಾಶವಾಗುವ ಮುನ್ನವೇ ಅದನ್ನು ಉಳಿಸಬೇಕು, ಸಂರಕ್ಷಿಸಬೇಕು' ಎಂಬ ಮಾತುಗಳು ಕೇಳಿಬಂದವು. ಇದರ ಪರಿಣಾಮವಾಗಿ ಜಾನಪದದ ಸಂಗ್ರಹ ಕಾರ್ಯ ನಮ್ಮಲ್ಲಿ ಅಪಾರವಾಗಿಯೇ ನಡೆಯಿತು. ಬಹುಪಾಲು ಪ್ರಮಾಣದಲ್ಲಿ ಪ್ರಕಟವೂ ಆಯಿತು. ಸಂಗ್ರಹದ ದೃಷ್ಟಿಯಿಂದ ಒಂದು ರೀತಿಯಲ್ಲಿ ಇದು ಸರಿಯೆನಿಸಬಹುದು. ಯಾಕೆಂದರೆ ಇದುವರೆವಿಗೂ ನಡೆದಿರುವ ಜಾನಪದ ಸಂಗ್ರಹ ಕಾರ್ಯದಲ್ಲಿ ಬಹಳಷ್ಟು ಅವೈಜ್ಞಾನಿಕವೆಂದು ಹೇಳುತ್ತಿರುವಾಗ, ಸಂಗ್ರಹಗಳು ಉಪಯೋಗಕ್ಕೆ ಬಾರದೇ ಹೋಗುತ್ತಿವೆ. ಇತ್ತೀಚಿಗಂತೂ ಜಾನಪದ ಸಂಗ್ರಹ ಕಾರ್ಯದಲ್ಲಿ ಹೊಸ ಹೊಸ ವಿಧಾನಗಳು, ಸಿದ್ಧಾಂತಗಳು ಬೆಳಕಿಗೆ ಬರುತ್ತಿವೆ. ಈ ಬಗೆಯ ಮಾದರಿಗಳನ್ನು ಅಳವಡಿಸಿಕೊಳ್ಳದಿದ್ದರೆ ಸಂಗ್ರಹಿಸಿದ ಮಾಹಿತಿ ಪ್ರಯೋಜನಕ್ಕೆ ಬಾರದಂತಾಗುತ್ತದೆ. ಈ ಕ್ಷೇತ್ರ ಕಾರ್ಯದಲ್ಲಿ ಹೊಸ ರೀತಿಯ ಮಾದರಿಗಳನ್ನು, ವಿಧಾನಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ಜಾನಪದವನ್ನು ಹೆಚ್ಚು ಆಧುನಿಕಗೊಳಿಸಬೇಕಾದ ಜರೂರು ಇದೆ.

ಇವತ್ತಿಗೆ ಪ್ರಸ್ತುತಗೊಳಿಸುವ ಕೆಲಸವೂ ಸುಲಭ ಸಾಧ್ಯವಾದುದಲ್ಲ. ಈ ಕೆಲಸ ಅತ್ಯಂತ ಯಶಸ್ವಿಯಾಗಿ ನಡೆಯಬೇಕಾದರೆ ಈ ಕ್ಷೇತ್ರದಲ್ಲಿ ಇರುವವರು ಗಂಭೀರ ಅಧ್ಯಯನ ನಡೆಸಬೇಕಾದ ಅಗತ್ಯವಿದೆ. ಡಾ॥ ಪುರುಷೋತ್ತಮ ಬಿಳಿಮಲೆ ಹೇಳುವಂತೆ ''ಇಂತಹ ಸಂದರ್ಭದಲ್ಲಿ ನಾವು ಜಾನಪದವನ್ನು ಹೊಸದಾಗಿ ನಿರ್ವಹಿಸಿಕೊಳ್ಳುವುದರ ಮೂಲಕ ನಮ್ಮ ಅಧ್ಯಯನ ವಿಧಾನವನ್ನು ಪರಿಷ್ಕರಿಸಿಕೊಳ್ಳಬೇಕಾಗಿದೆ. ಜಾನಪದವು ಪರಿವರ್ತನಶೀಲ ಸಮಾಜದಲ್ಲಿಯೂ ಕಾಣಿಸಿಕೊಳ್ಳುತ್ತಾ ನಿರಂತರವಾಗಿರುತ್ತದೆ ಎಂಬ ನವೀನ ದೃಷ್ಟಿಕೋನವನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಅದೆಂದೂ ಸ್ಥಗಿತ [illegible] ಮಾದರಿಯಲ್ಲ. ಅಥವಾ ಪ್ರಾಚೀನ ಕಾಲದ ವೈಭವವನ್ನು ಕಂಡು ಹುಡುಕಲು ಎಡೆಮಾಡಿಕೊಡುವ [illegible] ಅಲ್ಲ. ಚಲನಶೀಲ ಸಮಾಜದ ಸತ್ಯವನ್ನು [illegible] [illegible] ರೀತಿಯಲ್ಲಿ ಪ್ರಕಟಪಡಿಸುವ ಜಾನಪದದ ಒಟ್ಟಾರೆ ವ್ಯಾಪ್ತಿಯಲ್ಲಿ 'ಶುದ್ಧ-ಅಶುದ್ಧ'ಗಳೆಂಬ ಮೌಲ್ಯಮಾಪಕ ದೃಷ್ಟಿಕೋನವೂ ಅರ್ಥಹೀನವಾದುದು. ಚಲನಶೀಲ ಸಾಮಾಜಿಕ ಸಂದರ್ಭದಲ್ಲಿ ಮಾನವನ ಪ್ರವೃತ್ತಿಗಳನ್ನು ವಿಶ್ಲೇಷಿಸಲು ಅನುವು ಮಾಡಿಕೊಡುವ ಜಾನಪದ ಅಧ್ಯಯನವು ಸಂಸ್ಕೃತಿಯೊಂದರ ಸ್ವರೂಪದ ಬಗ್ಗೆ ನಮ್ಮ ಅರಿವನ್ನು ಗಮನಾರ್ಹವಾಗಿ ವಿಸ್ತರಿಸಬಲ್ಲದು.''

ನಮ್ಮ ಜಾನಪದ ಅಧ್ಯಯನ ಯಾವ ದಿಕ್ಕಿನಲ್ಲಿ ಮುಂದುವರೆಯಬೇಕು? ಜಗತ್ತಿಗೆ ನಮ್ಮದೇ ಆದ ಒಂದು ಸಿದ್ಧಾಂತವನ್ನು ನೀಡಲು ಸಾಧ್ಯವಿಲ್ಲವೇ? ಪಾಶ್ಚಾತ್ಯರ ಸಿದ್ಧಾಂತಗಳನ್ನು ಎಷ್ಟರಮಟ್ಟಿಗೆ ಉಪಯೋಗಿಸಿ ಕೊಳ್ಳಬಹುದು, ಭವಿಷ್ಯತ್ತಿನಲ್ಲಿ ಬರೆಯುವ ಪಠ್ಯಗ್ರಂಥ ಹೇಗಿರಬೇಕು - ಇತ್ಯಾದಿಯಾಗಿ ಪ್ರಶ್ನೆಗಳನ್ನು ಹಾಕಿಕೊಂಡು ಚರ್ಚೆ ನಡೆಸಲಾಗುತ್ತಿದೆ. ವಿದ್ವಾಂಸರ ಚರ್ಚೆಯ ಈ ಮಾತುಗಳನ್ನು ಗಮನಿಸಿ ಹೇಳುವುದಾದರೆ, ಮುಖ್ಯವಾಗಿ ಇಂದು ಜಾನಪದ ಅಧ್ಯಯನ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರೂಪುಗೊಳ್ಳಬೇಕು. ಈ ವಿಚಾರದಲ್ಲಿ ನಮ್ಮಲ್ಲಿ ಬಹಳಷ್ಟು ಜಾನಪದ ಅಧ್ಯಯನಗಳು ಶುಷ್ಕವಾಗಿವೆಯೆಂದೇ ಹೇಳಬಹುದು. ಬೆರಳೆಣಿಕೆಯ ವಿದ್ವಾಂಸರ ಬರಹಗಳನ್ನು ಬಿಟ್ಟರೆ ಉಳಿದಂತೆಲ್ಲಾ ಶುಷ್ಕವೆನಿಸಿಬಿಡುತ್ತದೆ. ಜಾನಪದ ಅಧ್ಯಯನ ಯಾವಾಗಲೂ ಸಾಂಸ್ಕೃತಿಕ ಹಿನ್ನೆಲೆಯನ್ನು ಪಡೆದು ರಸಸ್ಪರ್ಶವಾಗುವಂತೆ ಇರಬೇಕು. ಬಹುತೇಕ ಕನ್ನಡ ಜಾನಪದ ಅಧ್ಯಯನವನ್ನು ಗಮನಿಸಿದಾಗ ಇಂತಹ ರಸಸ್ಪರ್ಶ ಆಗುವುದೇ ಇಲ್ಲ. ನಮ್ಮಲ್ಲಿರುವ ಆಚರಣೆ - ಸಂಪ್ರದಾಯಗಳೆಲ್ಲಾ ಕೇವಲ ವರದಿಯ ರೂಪದಲ್ಲಿ ಇರುವುದು ಈ ಕೊರತೆಗೆ ಕಾರಣವಾಗಿರಲೂಬಹುದು. ಅಂದರೆ ಯಾವುದೇ ಆಚರಣೆಯನ್ನು ಕೇವಲ ವರದಿಯ ರೂಪದಲ್ಲಿ ಮಂಡಿಸುವಂಥದ್ದಲ್ಲ. ಅದನ್ನು ಅರ್ಥೈಸಲು ಸಾಮಾಜಿಕ ಮತ್ತು ಆರ್ಥಿಕ ನೆಲೆಗಟ್ಟನ್ನು ಬಳಸಬೇಕು. ಬರೀ ಧಾರ್ಮಿಕ ಸಾಲದು. ಈವರೆವಿಗಿನ ಅಧ್ಯಯನ ಬರೀ ಧಾರ್ಮಿಕ ನೆಲೆಗಟ್ಟನ್ನು ಮಾತ್ರ ಪರಿಗಣಿಸಿದೆ. ನಮ್ಮಲ್ಲಿ ಸಿದ್ಧಾಂತಗಳನ್ನು ರೂಪಿಸಲು ಹೊರಟಿರುವ ಜಾನಪದ ವಿದ್ವಾಂಸರು ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಬೇಕೆಂದು ಪದೇಪದೇ ಹೇಳುತ್ತಿರುತ್ತಾರೆ. ಆದರೆ ಯಾವ ನೆಲೆಯಲ್ಲಿ ಹೇಗೆ ಅರ್ಥಮಾಡಿಕೊಳ್ಳಬೇಕೆನ್ನುವುದರ ಬಗ್ಗೆ ಖಚಿತವಾಗಿ ಮಾತನಾಡುವುದಿಲ್ಲ. ಹಾಗೊಮ್ಮೆ ಮಾತನಾಡಿದರೂ, ಅದು ಸಂವಹನಗೊಂಡಿರುವುದಿಲ್ಲ!

ಕರ್ನಾಟಕದಲ್ಲಿ ಬಂಡಾಯ ಚಳುವಳಿ ಆರಂಭವಾದ ಮೇಲೆ ಸಂಸ್ಕೃತಿಯನ್ನು, ಜಾನಪದವನ್ನು, ಸಾಮಾಜಿಕ ಮತ್ತು ಆರ್ಥಿಕ ನೆಲೆಯಲ್ಲಿ ನೋಡುವ ದೃಷ್ಟಿ ಬದಲಾಯಿತು. ಕೆಲವು ಜಾನಪದ ಕಲೆಗಳು ಮತ್ತು ಆಚರಣೆಗಳನ್ನು ಕುರಿತ ಅಧ್ಯಯನದಲ್ಲಿ ಈ ಬಗೆಯ ಹೊಸ ದೃಷ್ಟಿಕೋನ ಮೂಡಿಬಂತು. ಈಗ ನಮ್ಮದೇ ಆದ ಸಿದ್ಧಾಂತವನ್ನು ಮಾಡಿಕೊಳ್ಳಬೇಕಾದರೆ ಈ ವಾದವನ್ನು ನಾವು ಮುಂದುವರೆಸಬೇಕು ಅಲ್ಲವೇ? ನಮ್ಮಲ್ಲಿರುವ ವಾದವೆಂಥಹದ್ದೆಂದರೆ 'ಕಲೆಗಾಗಿ ಕಲೆ' ಎನ್ನುವ ರೀತಿಯಲ್ಲಿ 'ಜಾನಪದಕ್ಕಾಗಿ ಜಾನಪದ' ಎಂಬುದು. ಇಂತಹದ್ದರಿಂದ ನಮಗೆ ಹೊಸ ಸಿದ್ಧಾಂತ ಮೂಡಲು ಸಾಧ್ಯವಿಲ್ಲ. ಯಾಕೆಂದರೆ ಯಾವುದೇ ಕಲೆಯಾಗಲಿ ತನಗೆ ತಾನೇ ಸ್ವತಂತ್ರವಾಗಿರುವುದಿಲ್ಲ. ಅದು ಸಮಾಜದ ಉಪ ಉತ್ಪನ್ನವಾಗಿರುತ್ತದೆ. ಕಲೆಗಾಗಿ ಕಲೆ, ಜಾನಪದಕ್ಕಾಗಿ ಜಾನಪದ ಎಂಬ ಮಾತು ಶುದ್ಧ ಸುಳ್ಳಾಗಿ ಕಾಣಿಸುತ್ತದೆ. ಆದ್ದರಿಂದ ಸಿದ್ಧಾಂತ ರೂಪಿಸುವ ಹಿನ್ನೆಲೆಯಲ್ಲಿ ಸಾಮಾಜಿಕ ಸಂಬಂಧಗಳನ್ನು, ಆರ್ಥಿಕ ಸಂಬಂಧಗಳನ್ನು ಪರಿಗಣಿಸ ಬೇಕಾಗುತ್ತದೆ. ಆಗ ಹೊಸ ಸಿದ್ಧಾಂತವೊಂದು ಹುಟ್ಟಿ ಕೊಳ್ಳಲು ಸಾಧ್ಯವಾಗುತ್ತದೆ.

ಇನ್ನೊಂದು ಮಾತು ಇಲ್ಲಿ ಮುಖ್ಯ. ನಮ್ಮಲ್ಲಿರುವಂತಹ ವರ್ಣ ಸಮಾಜ ಪಾಶ್ಚಾತ್ಯರಲ್ಲಿ ಇಲ್ಲ, ಆದ್ದರಿಂದ ಅವರ ಸಿದ್ಧಾಂತಗಳನ್ನು ನಾವು ಹಾಗೆಯೇ ಇಟ್ಟುಕೊಳ್ಳ ಲಾಗುವುದಿಲ್ಲ . ಬೇಕಾದರೆ ಅದರಲ್ಲಿ ಮಾರ್ಪಾಡು ಮಾಡಿ ಉಪಯೋಗಿಸಿಕೊಳ್ಳಬಹುದಾಗಿದೆ. ಮೇಲ್ವರ್ಗದವರಿಗೆ ಜಾನಪದ ಮನರಂಜನೆ ಮತ್ತು ಆಕರ್ಷಣೆಯ ಮಾತಾಗಿದ್ದರೆ ಒಬ್ಬ ಜನಪದ ವ್ಯಕ್ತಿಗೆ ಅದು ಮುಂದುವರಿಕೆಗೆ ಅಡ್ಡಿಯನ್ನುಂಟುಮಾಡುವ ಸಂಗತಿಯಾಗಿರುತ್ತದೆ. ತಮ್ಮಟೆ ಹೊಡೆಯುವ ಕಲಾವಿದ ಹಾಗೆಯೇ ಅದೇ ಕಸುಬನ್ನಾಧರಿಸಿರಬೇಕೇ? ಎಂಬ ಪ್ರಶ್ನೆ ಉದ್ಭವ ವಾಗುತ್ತದೆ. ಒಂದು ಫ್ಯೂಡಲ್ ಸಮಾಜವಿರುವ ಸಮಾಜದಲ್ಲಿ 'ಜಾನಪದಕ್ಕಾಗಿ ಜಾನಪದ' ಸಾಧ್ಯವಾಗು ವುದಿಲ್ಲ. ಜಾನಪದವನ್ನು 'ಉಳಿಸಬೇಕು - ಸಂರಕ್ಷಿಸಬೇಕು' ಎಂದು ಹೇಳುತ್ತಿರುವವರಿಗೆ ಆತ್ಮೀಯವಾದದ್ದು ದಲಿತರಿಗೆ ಜೀವವಿರೋಧಿಯಾಗಿ ಕಾಣಿಸುತ್ತದೆ. ಅಂದರೆ ಸನಾದಿ ಅಪ್ಪಣ್ಣನಿಗೆ ಮೇಳ ಊದುವುದು ಕುಲಕಸುಬು, ಆದರೆ ಅವನ ಮಗ ದೊಡ್ಡ ಅಧಿಕಾರಿಯಾದವನು ಮೇಳ ಊದುವುದನ್ನು ಅವಮಾನಕರವೆಂದು ತಿರಸ್ಕರಿಸುತ್ತಾನೆ. ಈವೊಂದು ಪೀಳಿಗೆಯ ಘರ್ಷಣೆ ನಮ್ಮಂಥವರ ಸಮಾಜದಲ್ಲಿ ಎದ್ದು ಕಾಣಿಸುತ್ತದೆ. ಮತ್ತು ಅದು ಪ್ರಬಲವಾಗಿಯೂ ಇರುತ್ತದೆ. ಆದ್ದರಿಂದ ಹೊಸ ಪೀಳಿಗೆ ಯಾವಾಗಲೂ ಪರಂಪರಾಗತ ಕುಲಕಸುಬುಗಳನ್ನು ಬಿಟ್ಟು ಆಧುನಿಕ ಸಂದರ್ಭಗಳ ಕಡೆಗೆ ಮುಖ ಮಾಡಲು ತೊಡಗುತ್ತದೆಂಬುದನ್ನು ಗಮನಿಸಬೇಕು. ಆದರೆ ಇಂಡಿಯಾದಂಥ ಸಂದರ್ಭದಲ್ಲಿ ಪರಂಪರಾಗತ ಕುಲಕಸುಬುಗಳೇ ಜಾನಪದವಾಗಿಬಿಟ್ಟಿರುತ್ತವೆ. ಈ ಕಾರಣದಿಂದ ನಮ್ಮಲ್ಲಿ ಪಾಶ್ಚಾತ್ಯರ ಸಿದ್ಧಾಂತಗಳನ್ನು ಇದ್ದಂತೆಯೇ ಅಳವಡಿಸಿಕೊಳ್ಳಲಾಗುವುದಿಲ್ಲ. ಬದಲಾಗಿ ಸಾಮಾಜಿಕ, ಆರ್ಥಿಕ ನೆಲೆಯ ಸಿದ್ಧಾಂತಗಳನ್ನು ಬೇಕಾದರೆ ಬಳಸಿಕೊಳ್ಳಬಹುದು. ಇದೂ ಕೂಡ ಈ ನೆಲೆಯಲ್ಲಿ

ನಡೆಯುವಂತಹದಲ್ಲ. ಕನ್ನಡ ಜಾನಪದವನ್ನು ಆಮೂಲಾಗ್ರವಾಗಿ ಸಂಗ್ರಹಿಸಿದ ನಂತರವೇ ಈ ಬಗೆಯ ಸಿದ್ಧಾಂತಗಳ ಬಗ್ಗೆ ಯೋಚಿಸಬೇಕಾಗುತ್ತದೆ.

ಯಾವ ಪರಿಸರದಲ್ಲಿ ಕೌಟುಂಬಿಕ ವಿಧಿ-ವಿಧಾನಗಳು ಮತ್ತು ಕೃಷಿ ವಿಧಿ-ವಿಧಾನಗಳು ಮುಖಾಮುಖಿ ಯಾಗಿರುತ್ತವೆಯೋ ಅಂತಹ ಕಡೆಗಳಲ್ಲಿ ಸಂಸ್ಕೃತಿಯ ಮೂಲ ಮೌಲ್ಯಗಳು ರೂಪುಗೊಳ್ಳುತ್ತಿರುತ್ತವೆ. ಮನುಷ್ಯ ಈ ಎರಡಕ್ಕೂ ಸ್ಪಂದಿಸುತ್ತಲೇ ಬಂದಿದ್ದಾನೆ. ಸಮೃದ್ಧಿಯ ಕಾಲ ಹೇಗೆ ನಮಗೆ ಮುಖ್ಯವೋ ಬರಡು ಬೇಸಿಗೆಯ ಕಾಲವೂ ಮುಖ್ಯ. ಜೊತೆಗೆ ಈ ಕಾಲದ ಬದುಕೂ ಮುಖ್ಯವಾಗಬೇಕು. ಹೇಳಿ ಕೇಳಿ ನಮ್ಮದು ಶ್ರೇಣೀಕೃತ ಸಮಾಜ. ಇದರಲ್ಲಿ ಮೇಲ್ವರ್ಗದವರ ಸಂಸ್ಕೃತಿಗೆ ಗೌರವ ಸಿಕ್ಕಿತು, ಅದು ಚರಿತ್ರೆಯಲ್ಲೂ ದಾಖಲಾಯಿತು. ಆದರೆ ಕೆಳವರ್ಗದವರ ಸಂಸ್ಕೃತಿಗ ಬೆಲೆಯೂ ಸಿಕ್ಕಲಿಲ್ಲ, ಗೌರವವೂ ದೊರಕಲಿಲ್ಲ. ಚರಿತ್ರೆಯಲ್ಲೂ ಸ್ಥಾನ ದೊರೆಯಲಿಲ್ಲ. ಅಂದರೆ ಇದುವರೆಗೆ ಯಾವ ಸಂಸ್ಕೃತಿಗೆ, ಜನಜೀವನಕ್ಕೆ ಮೌಲ್ಯ ಮತ್ತು ಮಾನವೀಯತೆ ದೊರಕಿಲ್ಲವೋ ಅಂತಹವರ ಬದುಕನ್ನು ಸಂಗ್ರಹಿಸಿಡುವ, ಬೆಲೆಕಟ್ಟುವ ಕೆಲಸ ಇಂದು ನಡೆಯ ಬೇಕಾಗಿದೆ. ಎಷ್ಟೋ ಉಪಸಂಸ್ಕೃತಿಗಳ ಬದುಕು ಇನ್ನೂ ಅಕ್ಷರ ರೂಪಕ್ಕಿಳಿದೇ ಇಲ್ಲ. ಮೌಖಿಕ ಸ್ಥಿತಿಯಲ್ಲೇ ಇರುವ ಇಂತಹವರ ಸಾಹಿತ್ಯ ಆಮೂಲಾಗ್ರವಾಗಿ ಸಂಗ್ರಹಗೊಂಡ ಮೇಲೆಯೇ ನಾವು ಅಧ್ಯಯನಕ್ಕೆ ತೊಡಗಬೇಕಾಗುತ್ತದೆ. ಯಾಕೆಂದರೆ, ಸಂಗ್ರಹಿಸಬೇಕಾದದ್ದೇ ಬಹಳಷ್ಟಿದೆ. ಶೃಂಗಾರ, ಸ್ಥಳನಾಮಗಳು, ಅರಣ್ಯಗಳು, ಹಳ್ಳಿಗಳು, ಬುಡಕಟ್ಟುಗಳು, ಬೈಗುಳ, ಪ್ರಣಯ, ಜಾತ್ರೆಗಳು, ಕೀಟಗಳು, ಹೂವುಗಳು, ವಾಸ್ತು -ಇತ್ಯಾದಿಗಳ ಬಗೆಗೆ ಇನ್ನೂ ಪರಿಪೂರ್ಣವಾದ ಸಾಮಗ್ರಿ ಬೆಳಕಿಗೆ ಬಂದಿಲ್ಲ. ತೆಲುಗು ಮತ್ತು ತಮಿಳಿನ ಪ್ರಭಾವಕ್ಕೆ ಒಳಗಾಗಿರುವ ತುಮಕೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಕನ್ನಡ ಜಾನಪದ ವಿದ್ವಾಂಸರು ಇನ್ನೂ ಸರಿಯಾದ ರೀತಿಯಲ್ಲಿ ಪ್ರವೇಶವನ್ನೇ ಮಾಡಿಲ್ಲ. ವಿದ್ವಾಂಸರು ಪ್ರವೇಶಿಸದೆ ಇರುವ ಇಂಥ ಪ್ರದೇಶಗಳು ಕರ್ನಾಟಕದಲ್ಲಿ ಇನ್ನೂ ಹಲವಾರಿವೆ. ಇವತ್ತಿನ ದಿನಮಾನದಲ್ಲಿ ಬೇರೆ ಬೇರೆ ಪಕ್ಷಗಳೂ, ಸಂಘಟನೆಗಳೂ ತಮ್ಮದೇ ಆದ ರೀತಿಯಲ್ಲಿ ಕೆಲಸ ಮಾಡುತ್ತಿವೆ. ರೈತರು, ಕೂಲಿಕಾರರು, ದಲಿತರು ಹಾಗೂ ಗಡಿಭಾಗದವರ ಹೋರಾಟಗಳನ್ನು ನಾವು ಮರೆಯುವಂತಿಲ್ಲ. ಗಣಪತಿಯ ಆಚರಣೆಯ ಸಂದರ್ಭದಲ್ಲಿ ಪ್ರಸ್ತುತ ವಿದ್ಯಮಾನಗಳಿಗೆ ತಕ್ಕಂತೆ ಗಣಪತಿ ವಿಗ್ರಹಗಳು ನಿರ್ಮಾಣವಾದವು. ಗಣಪತಿ ಹಾಲು ಕುಡಿದನೆಂದು ಹೇಳುವ ಪ್ರಸಂಗಗಳೇ ಜರುಗಿದವು. ಕಾರ್ಗಿಲ್ ಯುದ್ಧದ ಕಾಲದಲ್ಲಿ ಕಾರ್ಗಿಲ್ ಗಣಪತಿಯೇ ರೂಪುಗೊಂಡಿತು. ಡಾಬಾ ಸಂಸ್ಕೃತಿ ತಲೆಯೆತ್ತುತ್ತಿದೆ. ಜೊತೆಗೆ ಇಡೀ ದೇಶ ನವ ವಸಾಹತೀಕರಣಕ್ಕೆ ಒಳಗಾಗುತ್ತಿದೆ. ಯಾರೂ ಇದನ್ನು ತಡೆಯಲಿಕ್ಕೆ ಸಾಧ್ಯವಾಗದೆ ಇದ್ದರೂ, ದೇಶೀ ಜ್ಞಾನಪರಂಪರೆಯೊಂದಿಗೆ ಕೆಲಸ ಮಾಡುತ್ತಿರುವ ಕನ್ನಡ ಜಾನಪದ ವಿದ್ವಾಂಸರಿಗೆ ನವ ವಸಾಹತೀಕರಣದ ವಿರುದ್ಧ ಕೆಲಸ ಮಾಡಲು ಹೆಚ್ಚು ಅವಕಾಶಗಳಿವೆ ಎಂಬ ಮಾತನ್ನು ಒಪ್ಪಲೇಬೇಕಾಗುತ್ತದೆ. ಅಲ್ಲದೆ, ಜಂಡರ್ (ಲಿಂಗ) ನೆಲೆಯಿಂದ ಕನ್ನಡ ಜಾನಪದವನ್ನು ಅಧ್ಯಯನ ಮಾಡಬೇಕಾದ [illegible] ಇದೆ. ಜಾನಪದದಲ್ಲಿ ಮಹಿಳೆಯ ಚಿತ್ರಣ, ಜೆಂಡರ್ ಆಧಾರಿತ ಜಾನಪದ ಪ್ರಕಾರಗಳು, ಜಾನಪದ ವಿಜ್ಞಾನ ಮತ್ತು ಅದರ ಇತಿಹಾಸದಲ್ಲಿ ಮಹಿಳೆಯರ ಸ್ಥಾನವನ್ನು ಗುರುತಿಸುವ ಆಲೋಚನೆಗಳು ಇಂದು ಮೂಡಿ ಬರಬೇಕಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ನಮ್ಮ ಜೀವನ ವಿಧಾನವೇ ಜಾನಪದವಾಗಿರುವಾಗ ಯಾವ ಪರಿಸರದ್ದೇ ಆಗಲಿ ಅಲ್ಲಿ ಕಂಡುಬರುವ ಸಾಮಗ್ರಿಗಳೆಲ್ಲಾ ಜಾನಪದವೇ. ಇದರಲ್ಲಿ ಎರಡು ಮಾತಿಲ್ಲ. ಹೊಸ ಶೈಲಿಯ ಜೀವನವಿಧಾನವು ಹೊಸ ಶೈಲಿಯ ಜಾನಪದದ ಆವಿಷ್ಕಾರಕ್ಕೆ ಕಾರಣವಾಗುತ್ತದೆ. ಅದನ್ನು ನಾವು ಮುಂದಿನ ಪಠ್ಯ ಗ್ರಂಥಗಳಲ್ಲಿ ಅಳವಡಿಸಿಕೊಳ್ಳುವ ಯೋಚನೆ ಮಾಡಬೇಕಾಗುತ್ತದೆ. ಅಂದರೆ ಅದು ಸಂಸ್ಕೃತಿಯ ರಸಸ್ಪರ್ಶವನ್ನು, ಫ್ಯೂಡಲ್ ಸಮಾಜವನ್ನು ಪ್ರಶ್ನಿಸುವ ವಿಧಾನವನ್ನು, ಆಧುನಿಕ ಪರಿಸರದಲ್ಲಿ ಆಧುನಿಕವಾಗಿ ರೂಪುಗೊಳ್ಳುವ ಜೀವನ ವಿಧಾನದ ಜಾನಪದವನ್ನು ತಿಳಿಸುವಂತಿರಬೇಕು. ಇದು ಬಹಳ ಮುಖ್ಯ ಎಂಬುದು ನನ್ನ ಭಾವನೆ.

ಡಾ|| ಜಿ. ಆರ್. ತಿಪ್ಪೇಸ್ವಾಮಿ
ಕನ್ನಡ ರೀಡರ್, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು - [illegible]

## ಹೊಸತು ಪದ ಹೊಸೆತ

| | | | | | | | | |
|---|---|---|---|---|---|---|---|---|
| 1 | 2 | ■ | 3 | | 4 | ■ | 5 | 6 |
| 7 | | ■ | | ■ | 8 | | | |
| ■ | | ■ | | ■ | | ■ | | ■ |
| 9 | | 10 | | ■ | 11 | 12 | | 13 |
| | ■ | | ■ | 14 | ■ | | ■ | |
| 15 | | | ■ | | ■ | 16 | | |
| ■ | ■ | 17 | | | | | ■ | ■ |
| 18 | 19 | | ■ | | ■ | 20 | 21 | |
| ■ | 22 | | | ■ | 23 | | | ■ |

**ಅಡ್ಡ**

೧. ಸಂಗೀತದಲ್ಲಿ ಹೋಗುವ ಸ್ವರಗಳು (೨)
೩. ಎಂ. ವಿ. ಸೀತಾ'ರಾಮ'ಯ್ಯ (೩)
೫. ಹೆಚ್ಚಾಗಿರುವ ಕುಂಬಳಕಾಯಿ (೨)
೭. ನೀರಿಗೊದಗಿದ ಬರಗಾಲ (೪)
೮. ವಿಶ್ವವಿಖ್ಯಾತ ಜಲಪಾತ (೪)
೯. ಆ ಸಂಬಳದ ಒಡವೆ! (೪)
೧೧. ಸಿಂಧೂ ದೇಶದ ದೊರೆ (೪)
೧೪. ಜಾನಪದ ಕಲಾವಿದನಲ್ಲಿ ಬಹುಮಾನಕ್ಕಿಟ್ಟ 'ಮೆಡಲು'! (೩)
೧೬. ಸಂಕೋಚಗೊಳ್ಳುವಂತೆ ಮಾಡು (೩)
೧೭. ಹತ್ತಿರದ ನೆಂಟ (೫)
೧೮. ಮನುವಿನ ಸಂತತಿಯವನೀತ (೩)
೨೦. ಹಾಳೆ (೩)
೨೨. ಬಣ್ಣಿಸಿ ಹೊಗಳಿರಿ (೩)
೨೩. ವೃತ್ತದಲ್ಲಿ ಕಂಡ ಹೆಣ್ಣು ಜಿಂಕೆ (೩)

**ಲಂಬ**

೧. ಮೂರಡಿ ದೂರದ ಆನೆ (೨)
೨. ರಾಜ್ಯದಲ್ಲಿನ ಒಂದು ನದಿ (೪)
೩. ನಿಶ್ಚಿತವಾದ ಚಿಕಿತ್ಸೆಗೆ ಗುರಿತಪ್ಪದ ಉಪಾಯ! (೪)
೪. ಸಿಂಹಕ್ಕೊಂದು ಅನ್ವರ್ಥ ನಾಮ (೪)
೫. ಎರಡೂ ನದಿಗಳು ಸೇರಿ ಒಂದಾಗಿವೆ (೨,೨)
೬. ಕ್ಷಾಮದ ಆಗಮನ (೨)
೯. ಸಂಗೀತದಲ್ಲಿ ರಾಗ ಛಾಯೆ ವಿಸ್ತರಣೆ (೩)
೧೦. ಭರತೇಶ ವೈಭವದ ಕರ್ತೃ (೬)
೧೨. ಯಾಗದ ಕಾರ್ಯ ನಿರ್ವಾಹಕ (೬)
೧೩. ಪ್ರಕಾಶಿಸು (೩)
೧೪. ಎರಡೂ ಭೂಖಂಡಗಳ ನಡುವೆ ಕಿರಿದಾದ ನೀರಿನ ತಾಣಕ್ಕೆ 'ಪಾಕ್' ಒಂದು ಉದಾಹರಣೆಯಾದೀತು! (೪)
೧೯. ಈ ಅಂಕೆ 'ಹೊಸತು' (೨)
೨೧. ಆಶ್ರಯ ಸ್ಥಾನಕ್ಕೆ ಗಣಿತಾಭ್ಯಾಸದ ಆರಂಭ ಮುಖ್ಯ! (೨)

### ಜೂನ್ ತಿಂಗಳ ಹೊಸತು ಪದಹೊಸೆತದ ಸರಿಯುತ್ತರ

| | | | | | | | | |
|---|---|---|---|---|---|---|---|---|
| ಕಿ | ಪಿ | ■ | ಭಾ | ಮಿ | ನಿ | ■ | ಪಿ | ಪ್ರ |
| ರಾ | ಮ | ರಾ | ಜ್ಯ | ■ | ರಾ | ಮ | ರ | ಸ |
| ತ | ಲ | ■ | ಭಾ | ■ | ಭ | ■ | ಹ | ರ |
| ■ | ■ | ರಾ | ಜ | ಕಾ | ರ | ಣಿ | ■ | ■ |
| ರ | ಷ್ಯಾ | ■ | ಕ | ರ | ಣ | ■ | ಬೀ | ಜ |
| ಶ್ರಿ | ■ | ■ | ■ | ಣ | ■ | ■ | ■ | ಲ |
| ಪ್ರ | ತ್ಯೇ | ಕ | ■ | ಪು | ■ | ಪ | ರಾ | ಜ |
| ಸಾ | ■ | ಹ | ಸಿ | ರು | ನೀ | ಲಿ | ■ | ನ |
| ರ | ಗ | ಳೆ | ■ | ಷ | ■ | ಯಂ | ತ್ರಿ | ಕ |

**ಜಿ. ಮಲ್ಲಿಕಾರ್ಜುನ**
ಪ್ರಕೃತಿ ಚಿಕಿತ್ಸೆ ಮತ್ತು ಯೋಗ ವಿಜ್ಞಾನ ಸಂಸ್ಥೆ, ಜಿಂದಾಲ್ ನಗರ, ಬೆಂಗಳೂರು - ೫೬೦ ೦೭೩

## ವಿನೋದ ಗಣಿತ

# ಜುಲೈ ತಿಂಗಳ ಪ್ರಶ್ನೆಗೆ ಉತ್ತರ

ಎಂದಿನಂತೆ ಬಿಳಿಹರಳುಗಳನ್ನು ಸಂಖ್ಯೆ '೦' ಇಂದಲೂ, ಕೆಂಪು ಹರಳುಗಳನ್ನು ಸಂಖ್ಯೆ '೧'ರಿಂದಲೂ ಸೂಚಿಸಿದಾಗ ಉತ್ತರವನ್ನು ಕೆಳಕಂಡ ಸಂಖ್ಯಾ ಶ್ರೇಢಿಯಿಂದ ಸೂಚ್ಯವಾಗಿ ತಿಳಿಸಬಹುದು :

೦ ೦ ೦ ೦ ೧ ೦ ೧ ೦ ೦ ೧ ೧ ೦ ೧ ೧ ೧ ೧

(ಜೂನ್ ಸಂಚಿಕೆ ನೋಡಿ).

ಈಗ ಮೇಲಿನ ಶ್ರೇಢಿಯಲ್ಲಿ ಎಲ್ಲ '೦'ಯನ್ನು '೧'ರಿಂದಲೂ ಎಲ್ಲ '೧'ನ್ನು '೦'ಇಂದಲೂ ಅದಲು ಬದಲು ಮಾಡಿದಾಗ ಬರುವ ಶ್ರೇಢಿಯೂ ಪ್ರಶ್ನೆಗೆ ಉತ್ತರವಾಗಿದೆ. ಇವೆರಡಲ್ಲದೆ ಇವಕ್ಕಿಂತ ಭಿನ್ನವಾದ ಇನ್ನೂ ಕೆಲವು ಉತ್ತರಗಳಿವೆ. ಅವುಗಳು ಯಾವುವು ಮತ್ತು ಅವುಗಳ ನಡುವಣ ಸಂಬಂಧವೇನೆಂಬ ಪ್ರಶ್ನೆಯನ್ನು ಹಾಕಿಕೊಂಡು ಆಲೋಚನಾ ಶಕ್ತಿಯನ್ನು ತೀಕ್ಷ್ಣಿಸಿ ಆನಂದ ಪಡುವ ಅವಕಾಶವನ್ನು ಓದುಗರಿಗೇ ಬಿಡಲಾಗಿದೆ! ಅದು ಹೇಗಾದರೂ ಇರಲಿ, ಈಗ ನಾವು ನಮ್ಮ ಆಲೋಚನಾ ವಿಧಾನವನ್ನು ಇಲ್ಲಿ ಬಹಿರಂಗಪಡಿಸುತ್ತೇವೆ. ಇದಕ್ಕಾಗಿ ಗಮನಿಸಿ:

ಈಗ (೦ ೦ ೦ ೦) ಮತ್ತು (೧ ೧ ೧ ೧)ನ್ನು ಸೂಚಿಸುವ ಪದಕಗಳೂ ಎಲ್ಲಾದರೊಂದು ಕಡೆ ಬಳೆಯಲ್ಲಿ ವ್ಯಕ್ತವಾಗಲೇಬೇಕಷ್ಟೆ. ಇದು ಸಾಧ್ಯವಾಗಬೇಕಾ ದರೆ ನಾಲ್ಕು ಬಿಳಿಹರಳುಗಳನ್ನು ಒಂದೆಡೆಯಾದರೂ ಒತ್ತಾಗಿ ಅಳವಡಿಸಬೇಕು. ಹಾಗೆಯೇ ಇನ್ನೊಂದೆಡೆ ನಾಲ್ಕು ಕೆಂಪು ಹರಳುಗಳನ್ನು ಒತ್ತಾಗಿ ಅಳವಡಿಸಬೇಕು. ಒಮ್ಮೆ ಹೀಗೆ ಮಾಡಿದ ನಂತರ ಉಳಿವ ಖಾಲಿ ಜಾಗಗಳು ಎಂಟು. ಅಂದರೆ ಹದಿನಾರು ಖಾಲಿ ಜಾಗಗಳನ್ನು ತುಂಬಬೇಕಾಗಿದ್ದ ಪ್ರಶ್ನೆಯು ಈಗ ಎಂಟು ಖಾಲಿ ಜಾಗಗಳನ್ನು ತುಂಬ ಬೇಕಾದ, ಮೊದಲಿಗಿಂತ ಸುಲಭವಾದ, ಪ್ರಶ್ನೆಯಾಗಿ ಪರಿವರ್ತನೆ ಹೊಂದಿದೆ. ಉಳಿದ ಎಂಟು ಜಾಗಗಳನ್ನು ನಮ್ಮ ಉದ್ದೇಶ ಸಾಧನೆಗನುಗುಣವಾಗಿ ಒಂದೊಂದಾಗಿ ತುಂಬಬೇಕು.

ಗಮನಿಸಿ : 'ಜುಲೈ' ತಿಂಗಳ ಪ್ರಶ್ನೆಯನ್ನೇ ಹೋಲುವ, 'ಜೂನ್' ತಿಂಗಳಲ್ಲಿ ಕೇಳಿದ ಪ್ರಶ್ನೆಗೆ, ಛಂದಃ ಶಾಸ್ತ್ರದ ಸೂತ್ರ ಒಂದರಲ್ಲಿ ಅಡಗಿರುವ ಉತ್ತರವನ್ನು 'ಜುಲೈ' ಸಂಚಿಕೆಯಲ್ಲಿ ನಾವು ಪ್ರಸ್ತಾಪಿಸಿದ್ದೇವಷ್ಟೆ? ಆದರೆ 'ಜುಲೈ' ತಿಂಗಳ ಪ್ರಶ್ನೆಗೆ ಛಂದಃ ಶಾಸ್ತ್ರದಲ್ಲಿ ಉತ್ತರ ದೊರಕುವಂತೆ ಕಾಣಲಿಲ್ಲ. ಏಕೆಂದರೆ ಕವಿಗಳಿಗೆ ನಾಲ್ಕಕ್ಷರದ ಗಣ (ಇವು ಹದಿನಾರು)ಗಳು ಕಾವ್ಯ ರಚನೆಯಲ್ಲಿ ಉಪಯುಕ್ತತೆಯನ್ನು ಹೊಂದಿರಲಾರವು. ನಾಲ್ಕಕ್ಷರದ ಎಲ್ಲ ಹದಿನಾರು ಗಣಗಳ ಜ್ಞಾಪನ ಸಾಧನ ವಾಗಿ 'ಸೂತ್ರ' ಯಾವುದೂ ಇಲ್ಲ. ಅಷ್ಟೇ ಅಲ್ಲ, ನಮಗೆ ತಿಳಿದಂತೆ ಈ ಹದಿನಾರು ಗಣಗಳಿಗೆ 'ನಾಮಕರಣ' ವಾದಂತೆಯೂ ಇಲ್ಲ!

### ಈ ತಿಂಗಳ ಹೊಸ ಪ್ರಶ್ನೆ

ನಾಲಕ್ಕು ವಿವಿಧ ಬಣ್ಣದ ಹರಳುಗಳನ್ನು ಉಪಯೋಗಿಸಿ ಎರಡು ಹರಳುಗಳ ಹದಿನಾರು ವಿವಿಧ ಪದಕಗಳನ್ನು ಮಾಡಬಹುದು.

**ಪ್ರಶ್ನೆ :** ಹದಿನಾರು ಹರಳುಗಳಿರುವ ಒಂದು ಬಳೆಯಲ್ಲಿ ಮೇಲೆ ಪ್ರಸ್ತಾಪಿಸಿದ ಎಲ್ಲ ವಿಭಿನ್ನ ಪದಕಗಳೂ ಒಮ್ಮೆ ಮಾತ್ರ ವ್ಯಕ್ತವಾಗುವಂತೆ (ಇದು ಯಾವ ಅರ್ಥದಲ್ಲಿ ಎಂಬುದನ್ನು ತಿಳಿಯಲು ಈ ಹಿಂದಿನ ಇದೇ ತರಹದ ಪ್ರಶ್ನೆಗಳು ಮತ್ತು ಅವುಗಳ ಉತ್ತರವನ್ನು ನೋಡಿ)ಒಂದು ಬಳೆಯನ್ನು ರಚಿಸುವುದು ಹೇಗೆ?

ಸೂಚನೆ : ನಾಲ್ಕು ವಿವಿಧ ಬಣ್ಣಗಳನ್ನು 'ಸ' 'ರಿ' 'ಗ' ಮತ್ತು 'ಮ' ಎಂದು ಕರೆಯೋಣ. ಆಗ ಉತ್ತರವನ್ನು ಹದಿನಾರು ಅಕ್ಷರಗಳುಳ್ಳ ಒಂದು 'ಸರಳೆ'ಯ ರೂಪದಲ್ಲಿ ಸಂಕ್ಷಿಪ್ತವಾಗಿ ಬರೆಯಬಹುದು.

**ಶ್ರೀ ಕೆ. ಶ್ರೀಧರಶೆಟ್ಟಿ ಮತ್ತು ಶ್ರೀ ವಿಶ್ವನಾಥಕುಲಾಲ್** ಪುತ್ತೂರು, ಜೂನ್ ತಿಂಗಳ ಪ್ರಶ್ನೆಗೆ ಸರಿಯುತ್ತರ ಕಳಿಸಿದ್ದಾರೆ. ಅವರಿಗೆ ಅಭಿನಂದನೆಗಳು.

# ರೇಖಾ ಚಿತ್ರಗಳಿಗೆ ಜೀವ ತುಂಬಿ ಹೋದ ಶಂಕರ ಪಾಟೀಲ

ಎರಡು ದಶಕಗಳ ನಿರಂತರ ಸಾಂಸ್ಕೃತಿಕ ಒಡನಾಡಿಯಾದ ಕವಿ, ಕಲಾವಿದ, ಲೇಖಕ, ಪ್ರವಾಸ ಕಥನಕಾರ, ಸಾಹಿತ್ಯ ಮತ್ತು ಕಲೆಗಳ ಸಮನ್ವಯಕಾರ, ಆಧ್ಯಾತ್ಮ ಚಿಂತಕ, ಎಲ್ಲಕ್ಕಿಂತ ಮಿಗಿಲಾಗಿ ಆತ್ಮೀಯ ಮಿತ್ರ ಶಂಕರ ಪಾಟೀಲರು ೧೫ ಮೇ, ೨೦೦೦ದಂದು ಹೃದಯಸ್ತಂಭನದಿಂದ ನಿಧನರಾಗಿ ನಮ್ಮೆಲ್ಲರನ್ನೂ ಸ್ತಂಭೀಭೂತರನ್ನಾಗಿಸಿದರು. ಒಂದು ಕ್ಷಣ ನಮ್ಮ ಬದುಕಿನ ಭದ್ರತೆಯ ಬುಡವನ್ನು ಅಲ್ಲಾಡಿಸಿಬಿಟ್ಟರು. ಅದೇನೂ ಅವರಿಗೆ ಸಾಯುವ ವಯಸ್ಸಲ್ಲ, ಸಾಧನೆಯ ಶಿಖರಗಳನ್ನು ತಲುಪುತ್ತಿದ್ದ ವಯಸ್ಸು. ಶಂಕರ ಪಾಟೀಲರು ನಿವೃತ್ತಿಯಾಗಲು ಇನ್ನೂ ಐದು ವರ್ಷ ಬಾಕಿಯಿತ್ತು.

ಶಂಕರ ಪಾಟೀಲರು ಮೂಲತಃ ಬಿಜಾಪುರದವರು. ತಮ್ಮ ಪ್ರೌಢಶಾಲಾ ವಿದ್ಯಾಭ್ಯಾಸ ಮುಗಿಸುತ್ತಿದ್ದಂತೆಯೇ ಧಾರವಾಡದ ಕರ್ನಾಟಕ ಕಾಲೇಜಿಗೆ ಸೇರಿದರು. ಚಿತ್ರಕಲೆಯ ಮೇಲಿನ ಒಲವಿನಿಂದ ಮುಂಬಯಿಯ ಪ್ರಸಿದ್ಧ ಕಲಾ ಕಾಲೇಜಾದ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸನಲ್ಲಿ ಮತ್ತು ಧಾರವಾಡದ ಹಾಲಭಾವಿ ಸ್ಕೂಲ್ ಆಫ್ ಆರ್ಟ್ಸನಲ್ಲಿ ತಮ್ಮ ಕಲಾಭ್ಯಾಸ ಮಾಡಿ ಪರಿಣತರಾದರು. ವಿದ್ಯಾರ್ಥಿ ದೆಸೆಯಲ್ಲೇ ಅನೇಕ ಕಲಾ ಸ್ಪರ್ಧೆಗಳು ಹಾಗೂ ಪ್ರದರ್ಶನಗಳಲ್ಲಿ ಬಹುಮಾನ ಪಡೆದರು.

೧೯೬೮ರಿಂದ ದಾವಣಗೆರೆಯ ಚಿತ್ರಕಲಾ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇರಿ ೩೨ ವರ್ಷದ ದೀರ್ಘ ಅವಧಿಯಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ಅನ್ವಯಿಕ ಕಲೆ ಕುರಿತು ಪಾಠ ಹೇಳಿದರು, ತಿಳುವಳಿಕೆ ನೀಡಿದರು, ಮಾರ್ಗದರ್ಶನ ಮಾಡಿದರು. ತನ್ನ ವಿದ್ಯಾರ್ಥಿಗಳು ರಾಷ್ಟ್ರಮಟ್ಟದ ಚಿತ್ರಕಲಾ ಮಾಧ್ಯಮದಲ್ಲಿ ಪ್ರಸ್ತುತ ಜ್ಞಾನ ಪಡೆದವರಾಗಿರಬೇಕೆಂದು ಸದಾ ಶ್ರಮಿಸಿದರು. ತನ್ನ ಶ್ರಮಕ್ಕೆ ತಕ್ಕ ಫಲ ದೊರೆಯುವ ನಿರೀಕ್ಷೆಗಾಗಿ ಕ್ರಿಯಾಶೀಲರಾಗಿದ್ದರು.

ಮೊದ ಮೊದಲು ಛಾಯಾಚಿತ್ರಗ್ರಾಹಕರಾಗಿ ತಮ್ಮನ್ನು ಗುರುತಿಸಿಕೊಂಡರು. ಹೆಗಲಿಗೆ ಕ್ಯಾಮರಾ ನೇತುಹಾಕಿಕೊಂಡು ರಾಜ್ಯವ್ಯಾಪಿ ಓಡಾಡಿ, ತಾವು ತೆಗೆದ ಛಾಯಾಚಿತ್ರಗಳನ್ನು ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಿಸಿ ಹೆಸರು ಮಾಡಿದರು. ಅವರ ಛಾಯಾಚಿತ್ರ ಕೇಂದ್ರವೇ ನಯನ ಸ್ಟುಡಿಯೋ.

ಪಾಟೀಲರು ಚಿತ್ರಕಲಾ ಸೃಷ್ಟಿಯಲ್ಲಿ ಸದಾ ನಿರತರಾಗಿದ್ದರು. ಮನೆಯಲ್ಲಾಗಲಿ ಕಾಲೇಜಿನಲ್ಲಾಗಲಿ ಅಪೂರ್ಣ ಚಿತ್ರವೊಂದು ಸದಾ ಇರುತ್ತಿತ್ತು. ಇಂಪ್ರೆಶನಿಜಂ ರೀತಿಯಲ್ಲಿ ಬರೆದ ಅನೇಕ ಚಿತ್ರಗಳು ಮೊದಮೊದಲು ಗಾಢವಾದ ಬಣ್ಣಗಳ ಮಿಡಿತದೊಂದಿಗೆ ಇರುತ್ತಿದ್ದವು. ನಂತರ ಸೌಮ್ಯವಾದ ಬಣ್ಣಗಳಿಗೆ ಬಂದು ನಿಂತದ್ದು ಅವರ ಜೀವನ ನೀತಿಗೆ ದೃಷ್ಟಾಂತವೂ ಆಗಿರಬೇಕು. ಚಿತ್ರಕಲೆಯಲ್ಲೂ ಅವರು ಸದಾ ಪ್ರಯೋಗಶೀಲರು. ತೈಲ ವರ್ಣಚಿತ್ರಗಳು, ಪೋರ್ಟ್ರೇಟ್‌ಗಳು, ವುಡ್ ಬರ್ನಿಂಗ್ ಚಿತ್ರಗಳು ಮತ್ತು ಅದ್ಭುತವಾದ ರೇಖಾ ಚಿತ್ರಗಳು. ಒಂದೊಂದು ರೇಖಾ ಚಿತ್ರವೂ ಒಂದೊಂದು ಕಾವ್ಯ. ಕೆಲವು ಪುಟ್ಟ ಕಾವ್ಯ, ಕೆಲವು ಪ್ರೌಢ ಕಾವ್ಯ. ಆ ಕಾವ್ಯಗಳ ತುಂಬ ವೃಕ್ಷಗಳ ರಾಜಿ. ವೃಕ್ಷ ಪಾಟೀಲರ ಪ್ರಿಯವಾದ ಇಮೇಜ್.

ಹಲವು ಏಕವ್ಯಕ್ತಿ ಚಿತ್ರ ಪ್ರದರ್ಶನಗಳನ್ನು ಪಾಟೀಲರು ಏರ್ಪಡಿಸಿದ್ದರು. ಧಾರವಾಡ, ಮುಂಬಯಿ, ಗೋವಾ, ಹೈದರಾಬಾದ್, ಬೆಂಗಳೂರು, ಮದರಾಸು, ದೆಹಲಿ, ಕಲ್ಕತ್ತಾ ಇವು ಪ್ರದರ್ಶನ ಏರ್ಪಡಿಸಿದ ಪ್ರಮುಖ ನಗರಗಳು. ರೋಟರಿ ಸಂಸ್ಥೆಯ ಅಂತರರಾಷ್ಟ್ರೀಯ ಸಾಂಸ್ಕೃತಿಕ ವಿನಿಮಯ ಯೋಜನೆಯಲ್ಲಿ ಅವರು ಅಮೇರಿಕಕ್ಕೂ ಹೋಗಿ ಬಂದಿದ್ದರು. ಅಲ್ಲಿನ ಇಲಿನಾಯ್ ರಾಜ್ಯದ ಹತ್ತು ಕಡೆ ತಮ್ಮ ಚಿತ್ರಕಲಾ ಪ್ರದರ್ಶನ ಏರ್ಪಡಿಸಿ ಮೆಚ್ಚುಗೆ ಪಡೆದಿದ್ದರು.

ಪಾಟೀಲರು ದಾವಣಗೆರೆಯಲ್ಲೊಂದು ಶಾಶ್ವತ ಕಲಾ ಪ್ರದರ್ಶನ ಗ್ಯಾಲರಿಗಾಗಿ ಪರಿತಪಿಸಿದ್ದರು. ಅದಕ್ಕಾಗಿ ನಯನ ಸ್ಟುಡಿಯೋದಲ್ಲಿಯೇ ಒಂದು ಕಲಾಗುರು ಆರ್ಟ್ ಗ್ಯಾಲರಿ ತೆರೆದಿದ್ದರು. ಅಲ್ಲಿ ಸದಾ ಒಂದಿಲ್ಲೊಂದು ಚಿತ್ರಕಲಾ ಪ್ರದರ್ಶನ ನಡೆಯಬೇಕು, ವಿದ್ಯಾರ್ಥಿಗಳ ಪ್ರದರ್ಶನಗಳು ನಡೆಯಬೇಕು, ಜೊತೆಗೆ ಶ್ರೇಷ್ಠ ಕಲಾವಿದರ ಚಿತ್ರ ಪ್ರದರ್ಶನಗಳು ನಡೆದರೆ ದಾವಣಗೆರೆಯ ನಾಗರಿಕರು ಕಲಾ ಪ್ರಶಂಸೆ ಮಾಡಲು ಸಾಧ್ಯ ಎಂಬುದು ಅವರ ಇರಾದೆಯಾಗಿತ್ತು. ದುರಾದೃಷ್ಟದಿಂದ ಕಲಾಗುರು ಆರ್ಟ್ ಗ್ಯಾಲರಿ ಮುಚ್ಚಿದ್ದು ಅವರಿಗೆ ಬೇಸರ ತಂದಿತ್ತು.



ಈ ಬೇಸರ ನೀಗಿಸಲು ತಮ್ಮ ಮನೆಯ ಮೇಲೆಯೇ ಒಂದು ಆರ್ಟ್ ಗ್ಯಾಲರಿ ಕಟ್ಟಲು ಸಿದ್ಧತೆಯನ್ನು ಪಾಟೀಲರು ನಡೆಸಿದ್ದರು. ಆ ಸಿದ್ಧತೆಯ ಸಂಕೇತವಾಗಿ ಅವರ ಕಲಾ ಭವನದ ಮುಂದೆ ಇಟ್ಟಿಗೆ ರಾಶಿ ಈಗಲೂ ಮೌನವಾಗಿ ರೋದಿಸುತ್ತಿದೆ. ಹಾಗೆ ನೋಡಿದರೆ ಅವರ ಮನೆಯೇ ಒಂದು ಅತ್ಯುತ್ತಮ ಆರ್ಟ್ ಗ್ಯಾಲರಿ. ಅದು ನಿಜಕ್ಕೂ ಕಲಾಭವನ, ಉತ್ಕೃಷ್ಟ ಅಭಿರುಚಿಯ ಅನ್ಯೋನ್ಯ ಕುಟುಂಬದ ಕಲಾಭವನ.

ಪಾಟೀಲರ ಸೃಜನಶೀಲತೆ ಬಹುಮುಖಿಯಾದುದು. ಕವನ ಕೃಷಿಯಲ್ಲಿ ಅವರು ಸದಾ ನಿರತರಾಗಿದ್ದರು. ಸಂಕ್ರಮಣ, ಸಂವಾದ, ಶೂದ್ರ, ಮುಂತಾದ ಸಾಹಿತ್ಯಕ ಪತ್ರಿಕೆಗಳಲ್ಲಿ ಅವರ ಕವನಗಳು ಅನಿಯಮಿತವಾಗಿ ಪ್ರಕಟವಾಗುತ್ತಿದ್ದವು. ತಾವು ನಿಧನರಾಗುವ ಹಿಂದಿನ ದಿನವೂ ಅವರು ಕವಿತ್ವದಲ್ಲಿ ತೊಡಗಿದ್ದರು ಅವರಿಗೆ ಗೊತ್ತಾಗದಂತೆಯೇ ತಮ್ಮ ಸಾವಿನ ಸೂಚನೆಯನ್ನೂ ಅದರಲ್ಲಿ ನೀಡಿದ್ದರು !

ಪಾಟೀಲರ ಪ್ರಕಟಿತ ಕೃತಿಗಳು ಐದು : [illegible] ಬರದಿಲ್ಲ (೧೯೯೩)ಅವರ ಕವನ ಸಂಕಲನ. ಚಿತ್ರ ಕಲಾ ಚಿಂತನೆ (೧೯೯೫) ಮತ್ತು ಚಿತ್ರಾಂತರಂಗ (೧೯೯೮) ಅವರ ಚಿತ್ರಕಲೆ ಕುರಿತು ಆಳವಾದ ಚಿಂತನೆಗಳ ಬರಹಗಳನ್ನೊಳಗೊಂಡ ಗ್ರಂಥಗಳು. The Living Lines (೧೯೯೬) ರೇಖಾ ಚಿತ್ರಗಳ ಮತ್ತು ರಾಷ್ಟ್ರದ ಶ್ರೇಷ್ಠ ಬರಹಗಾರರ ಅಭಿಪ್ರಾಯಗಳನ್ನೊಳಗೊಂಡ ಅತ್ಯದ್ಭುತ ಕೃತಿ. ಅದೊಂದು ಅಂತರರಾಷ್ಟ್ರೀಯ ಗುಣಮಟ್ಟದ ಕೃತಿ. ಆ ಕೃತಿಗೆ ಸಿಕ್ಕಬೇಕಾದಷ್ಟು ಮನ್ನಣೆ ಸಿಕ್ಕಲಿಲ್ಲವೇನೋ ಎಂದು ನನಗನ್ನಿಸುತ್ತದೆ. 'ಹಿಮಾಚಲಗಳ ಹಿನ್ನೆಲೆಯಲ್ಲಿ' (೧೯೯೭) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಹೊರ ರಾಜ್ಯ ಪ್ರವಾಸ ಯೋಜನೆಯಿಂದ ಹೊಮ್ಮಿದ ಕೃತಿ. ಈ ಎಲ್ಲ ಕೃತಿಗಳೂ ಪಾಟೀಲರನ್ನು ಶ್ರೇಷ್ಠ ಕಲಾವಿದ ಎಂತೋ ಅಂತೆಯೇ ಶ್ರೇಷ್ಠ ಲೇಖಕ ಎಂಬುದನ್ನು ಸಾಬೀತು ಮಾಡಿದವು.

ಶಂಕರ ಪಾಟೀಲರು ಯಾವಾಗಲೂ ಸುಮ್ಮನಿರದೆ ಸದಾ ಚುರುಕಿನಿಂದ ಓಡಾಡುತ್ತಿದ್ದ ವ್ಯಕ್ತಿ. ವಿಚಾರವಾದಿ ಕೋವೂರರನ್ನು ಕರೆಸಿದರು, ತುರ್ತುಪರಿಸ್ಥಿತಿ ಕಾಲದಲ್ಲಿ ಜಯಪ್ರಕಾಶ್ ನಾರಾಯಣರ ಬೆನ್ನುಹತ್ತಿದರು. ಸುಮಾರು ಎರಡು ವರುಷ ಹೊಯ್ಸಳ ಪತ್ರಿಕೆ ನಡೆಸಿದರು. ಮಾಡರ್ನ್ ವಿದ್ಯಾಸಂಸ್ಥೆ ನಡೆಸುತ್ತಿದ್ದರು, ಸಂಗೀತಗಾರರನ್ನು ಕರೆಸಿ ಸಂಗೀತ ಕಚೇರಿ ಏರ್ಪಡಿಸುತ್ತಿದ್ದರು, ಕೆಲವು ಕಾಲ ಸ್ವತಃ ತಾವೇ ಸಂಗೀತಾಭ್ಯಾಸವನ್ನೂ ಮಾಡಿದರು. ಸಾಲಾರ್‌ಜಂಗ್ ಮ್ಯೂಸಿಯಂನ ಸದಸ್ಯರಾದ ಮೇಲೆ ಕರ್ನಾಟಕದ ಚಿತ್ರಕಲೆಯ ರಾಷ್ಟ್ರ ಮಟ್ಟದ ಖ್ಯಾತಿಗಾಗಿ ಓಡಾಡಿದರು, ಕಾಲೇಜಿನ ಸಹೋದ್ಯೋಗಿಗಳೊಡನೆ ಒಂದಿಲ್ಲೊಂದು ಯೋಜನೆಯನ್ನು ಸದಾ ಹಮ್ಮಿಕೊಳ್ಳುತ್ತಿದ್ದರು, ವಿದ್ಯಾರ್ಥಿಗಳಿಗೆ ಹೊಸ ಹೊಸ ಚಿತ್ರ ನಿರ್ಮಾಣಕ್ಕೆ ಸ್ಫೂರ್ತಿ ನೀಡುತ್ತಿದ್ದರು, ಚಿತ್ರಕಲೆ ಕುರಿತು ಸಾಮಾನ್ಯರೂ ಚರ್ಚೆ ಮಾಡುವಂತಾಗಬೇಕೆಂದು ಅನೇಕ ಕಾರ್ಯಕ್ರಮಗಳನ್ನು ರೂಪಿಸುತ್ತಿದ್ದರು. ಹಳೆಯ ಹಸ್ತಪ್ರತಿಗಳಲ್ಲಿನ ಪಟಲಗಳನ್ನು ಸಂಗ್ರಹಿಸಿ ಸಂಭ್ರಮಿಸುತ್ತಿದ್ದರು. ಒಟ್ಟಿನಲ್ಲಿ ಅವರು ಸದಾ ಕೆಲಸ ಮಾಡುತ್ತಲೇ ಇರುವಂತಹ ವ್ಯಕ್ತಿ ಆಗಿದ್ದರು. ರಾತ್ರಿಯಿಡೀ ಕುಳಿತು ಓದುವುದು, ಟಿಪ್ಪಣಿ ಮಾಡುವುದು, ಬರೆಯುವುದು. ಇಲ್ಲವೆ ನಿಂತು ಚಿತ್ರ ರಚನೆ ಸದಾ ನಡೆಯುತ್ತಿತ್ತು. ಅವರು ಇತ್ತೀಚೆಗೆ ಒಪ್ಪಿಕೊಂಡಿದ್ದ ಅಥವಾ ಅಪ್ಪಿಕೊಂಡಿದ್ದ ಓಶೋನ ಆಧ್ಯಾತ್ಮಿಕ ವಾಕ್‌ಝರಿ ಕೇಳುತ್ತಲೇ ಅವರು ಚಿತ್ರ ಬರೆಯುತ್ತಿದ್ದುದುಂಟು. ಸದಾ ಯಾವುದಾದರೊಂದು ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದ ಅಥವಾ ತಮ್ಮ ಸಮೀಪಕ್ಕೆ [illegible] ಏನಾದರೊಂದು ಕೆಲಸ ಹಚ್ಚುತ್ತಿದ್ದವರು ಶಂಕರ ಪಾಟೀಲರು. ಅವರು [illegible]

[illegible]

# ಅಯೋಧ್ಯೆ ಉರುಫ್ ಫೈಸಾಬಾದ್

ಅಯೋಧ್ಯೆ - ಫೈಸಾಬಾದ್ ಬೇರೆ ಬೇರೆ ನಗರಗಳಲ್ಲ. ಅದರ ಬೇರ್ಪಡೆ ಸ್ಪಷ್ಟವಿಲ್ಲ. ಇಷ್ಟು ಹೇಳಬಹುದು : ಫೈಸಾಬಾದ್ ದೊಡ್ಡ ಊರು, ಅಯೋಧ್ಯೆಗಿಂತ. ಗೋರಖ್‌ಪುರ್ ದಾಟಿ, ಸೋನಾಲಿ ಖಟ್ಮಂಡು ಕಡೆಗೆ ನಮ್ಮ ಕಾರು ಹೋಗಬೇಕಿತ್ತು. ಸಹಾರಾ ಇಂಡಿಯಾದ ಯಾವುದೋ ಕಾರ್ಖಾನೆಯ ಬಳಿ ಒಂದು ನಿಮಿಷ ನಿಲ್ಲಿಸಿ ನಿಂತಿದ್ದ ವ್ಯಕ್ತಿಯನ್ನು ನಮ್ಮ ದಾರಿ ಸರಿಯೆ ಎಂದು ಪ್ರಸ್ತಾಪಿಸಿದೆವು. "ನನ್ನನ್ನು ಕರೆದುಕೊಂಡು ಹೋದರೆ ನನಗೂ ಅನುಕೂಲ, ನಿಮಗೂ ದಾರಿ ತೋರಿಸಿಯೇನು" ಎಂದಿತು ವ್ಯಕ್ತಿ. ಆಗ ಇನ್ನೂ ಸಂಜೆ ೩ ಗಂಟೆ ಸುಮಾರು. ವ್ಯಕ್ತಿ ಸುಮಾರು ೩೦ರ ಹರೆಯದವ. ಶುದ್ಧ ಬಿಳಿ ಪೈಜಾಮ, ಕುರ್ತಾ, ಬಿಳಿಯ ವರ್ಣ. ತಲೆಯಲ್ಲಿ ಸಮ್ಮರ್ ಕ್ರಾಪ್ ಮತ್ತು ಪಿಳ್ಳು ಜುಟ್ಟು. ತಿಳಿಯದ ಹಾದಿಯಲ್ಲಿ ಅರಿಯದವರನ್ನು ಉತ್ತರ ಪ್ರದೇಶದಲ್ಲಿ ಜತೆಯಲ್ಲಿ ಕುಳ್ಳಿರಿಸಿಕೊಂಡು ಹೋಗುವುದು ಸರಿಯೋ? ಡಿ. ಡಿ. ಕೋಸಾಂಬಿಯವರ 'ಕಾನ್ಪುರಕ್ಕೆ ರಸ್ತೆ' ಪ್ರಬಂಧ ಓದಿದ್ದ ನನಗೆ, ದಾರಿ ಸುಗಮವಾಗುವಂತೆ ಇವನೊಡನೆ ಏನಾದರೂ ಚರ್ಚಿಸಬಹುದೋ ಎಂಬ ಆಸೆ. ಕೊನೆಗೂ ಧೈರ್ಯಮಾಡಿ ಅವನನ್ನು ಕೂರಿಸಿಕೊಂಡು ಮುಂದುವರಿದೆವು. ಸುಮಾರು ಎರಡು ತಾಸಿನ ಹಾದಿ ಅವನು ಇಳಿಯಬೇಕಾಗಿದ್ದ ಸ್ಥಳ. ಫೈಸಾಬಾದ್ ಊರಿನ ಒಂದು ಚಚ್ಚೌಕದ ಬಳಿ ಇಳಿದರೆ ಕವಲು ದಾರಿಯಲ್ಲಿ ಅವನ ಹಳ್ಳಿಗೆ ಹದಿನೈದು ಕಿ.ಮೀ. ಅವನ ಜೀಪು ಬಂದು ಕಾದಿರುತ್ತದೆ. ಥೇಂ ಬಯಸ್ ಎಂಬ ಗ್ರಾಮ. ವಯರ್‌ಲೆಸ್ ಟೆಲಿಫೋನ್ ಇದೆ ಅವರ ಊರಲ್ಲಿ......

ಸಹಾರಾ ಇಂಡಿಯಾದಲ್ಲಿ ಅವನಿಗೆ 'ಗನ್‌ಮ್ಯಾನ್' ಕೆಲಸ. 'ಕೋವಿ ಹಿಡಿದವನು' -ರಕ್ಷಣಾ ಸಿಬ್ಬಂದಿ. ಅವನೇನೂ ನಿವೃತ್ತ ಸೈನಿಕನಲ್ಲ. ಇದಕ್ಕೆ ಮುಂಚೆ ದೆಹಲಿಯಲ್ಲಿ ಅಣ್ಣನೊಡನೆ ಹಲಕಸಬು ಮಾಡಿ ಈಗ ವಯಸ್ಕ ತಂದೆಯೊಡನೆ ಇರಬೇಕಾಗಿ ಬಂದಿರುವುದರಿಂದ ಗ್ರಾಮಕ್ಕೆ ಹಿಂದಿರುಗಿದ್ದಾನೆ. ಸ್ವಲ್ಪ ಭೂಮಿ ಇದೆ. ಆದರೆ ಅವಿಭಕ್ತ ಕುಟುಂಬಕ್ಕೆ ಸಾಲದು. ಏನಾದರೂ ಉಪ ಕಸಬು ಬೇಕೇ ಬೇಕು. ಕೋವಿ ಚಲಾಯಿಸುವುದರಲ್ಲಿ ತರಪೇತಿ ಪಡೆದು, ಒಂದಿಷ್ಟು ಹಣ ಖರ್ಚುಮಾಡಿ ಲೈಸೆನ್ಸ್ ಪಡೆದು ಕೋವಿ ಕೊಂಡಿದ್ದಾನೆ. - ೧೮,೦೦೦ ರೂಪಾಯಿನದು. ಇಲ್ಲಿಯವರೆಗೂ ಗನ್ ಚಲಾಯಿಸುವ ಪ್ರಸಂಗ ಬಂದಿಲ್ಲಾ. ಈ ಕೆಲಸ ಮಾಡಬೇಕಾಗಿದೆ ಎಂಬ ಅಸಮಾಧಾನವಿದ್ದಂತೆ ಅನ್ನಿಸಿತು. -ನಾವು ಕೇಳದೆಯೇ ಅವನು ಬ್ರಾಹ್ಮಣ ಎಂದು ಹೇಳಿಕೊಂಡಾಗ ತಾನು ಹೆಚ್ಚು ಓದಲಾಗಲಿಲ್ಲ ಎಂದೂ ಹೇಳಿಕೊಂಡ.

"ಊರಿನಲ್ಲಿ ಶಾಲೆ ಇದೆಯೋ?" "ನಾವೆಲ್ಲಾ ಓದುವಾಗ ೧೪ ಕಿ.ಮೀ. ದೂರ ನಡೆದು ಹೋಗಬೇಕಾಗಿತ್ತು. ಈಗಲೂ ಸರ್ಕಾರಿ ಶಾಲೆ ಇಲ್ಲ. ನಾವೇ ಶಾಲೆ ಕಟ್ಟಿ, ನಡೆಸುತ್ತಿದ್ದೇವೆ." ಮತ್ತಷ್ಟು ವಿಚಾರಿಸಿದಾಗ ತಿಳಿದದ್ದು, ಅವರ ಮನೆಯಲ್ಲಿ ೧೦-೧೨ ಮಕ್ಕಳು ಶಾಲೆಗೆ ಹೋಗಬೇಕು. ಅಪ್ಪ ಊರಿನ ಹಿರಿಯ. ಹಿಂದೆ ಅವರೇ ಪಂಚಾಯಿತಿ ಅಧ್ಯಕ್ಷ. ಕಳೆದ ಕೆಲವು ವರ್ಷ, ನಿಮ್ನ ವರ್ಗದವರಿಗೆ ಮೀಸಲಾತಿಯಾಗಿ ಅವರು ಅಧ್ಯಕ್ಷರಾಗಲಿಲ್ಲ. ಈಗ ಪುನಃ ಅವರೇ ಆಗಿದ್ದಾರೆ. ಸುತ್ತಮುತ್ತಲಿನ ಊರಿನವರಿಗೆ ಅಧ್ಯಾಪಕರ ಕೆಲಸ ಕೊಟ್ಟು ಎಲ್ಲಾ ಮಕ್ಕಳನ್ನೂ ಸೇರಿ ಆ ಶಾಲೆ ತೆರೆದಿದ್ದಾರೆ. ತಲಾ ೧೫ ರೂಪಾಯಿ ಶುಲ್ಕ ವಿಧಿಸಿದ್ದಾರೆ. ಶಾಲೆ ಆದ ಮೇಲೆ ಅದೇ ಉಪಾಧ್ಯಾಯರು ಬೇಕಿದ್ದರೆ ಬೇಕಾದವರಿಗೆ ಮನೆಪಾಠ ಹೇಳಬಹುದು. ಬಂದ ಫೀಸನ್ನೇ ಅಧ್ಯಾಪಕರು



*ದೇಶದ ವಿವಿಧೆಡೆಗಳಿಂದ ಬಂದ ಇಟ್ಟಿಗೆ ರಾಶಿ*

ಸಂಬಳವಾಗಿ ಹಂಚಿಕೊಳ್ಳಬಹುದು. ಜಾತಿ ಭೇದವಿಲ್ಲದೆ, ಎಲ್ಲರಿಗೂ ಸಮಾನ ಪ್ರವೇಶ ಉಂಟು. ಸರ್ಕಾರದ ಮಾನ್ಯತೆ ಪಡೆಯುವ ಗೋಜಿಗೇ ಹೋಗಲಿಲ್ಲ. ಸಮೀಪದ ಮಾನ್ಯತೆ ಪಡೆದ ಶಾಲೆಯ ಹೆಸರಿನಲ್ಲಿ ಏಳನೇ ಇಯತ್ತೆಗೆ ಮಕ್ಕಳನ್ನು ಪರೀಕ್ಷೆಗೆ ಕಳುಹಿಸುವವರೆಗೆ ಇವರ ಜವಾಬ್ದಾರಿ. ಉಪಾಧ್ಯಾಯರು ತೃಪ್ತರು. ಶಾಲೆಯ ಫಲಿತಾಂಶ ಚೆನ್ನಾಗಿದೆಯಂತೆ. ಇಲಾಖೆಯ ಅಂಗೀಕಾರಕ್ಕೆ ಪ್ರಯತ್ನ ಪಡುವುದಿಲ್ಲವಂತೆ. ಕಾರಣ ಕಾನೂನು, ಇನ್ಸ್‌ಪೆಕ್ಟರ್ ಇವರಿಂದ ಅನವಶ್ಯ [illegible]ಯಂತೆ !

ಫೈಸಾಬಾದ್-ಅಯೋಧ್ಯೆ ಜಂಟಿನಗರದ ಅಂತರಿಕ್ಷದಲ್ಲಿ ಮಸೀದಿಯ-ದೇವಸ್ಥಾನಗಳ ಗೋಪುರಗಳು ಪರಸ್ಪರ ಸ್ಪರ್ಧೆಗಿಳಿದಿರುವಂತೆ ತೋರುತ್ತದೆ. ಅಷ್ಟೊಂದು ಸಂಖ್ಯೆ. ಕೆಲವು ಅಷ್ಟೊಂದು ಎತ್ತರವೂ ಇಲ್ಲ. ಚರಿತ್ರೆಯ ಉದ್ದಕ್ಕೂ [illegible] ನಡೆದಿರಬಹುದೆಂಬಂತೆ. ಅಯೋಧ್ಯೆ ಫೈಸಾಬಾದಿಗಿಂತ ಪುರಾತನ ನಗರವಾದುದರಿಂದ [illegible].

ಆದರೆ ಬೆಳವಣಿಗೆಯಲ್ಲಿ ಫೈಸಾಬಾದಿನದೇ ಮೇಲುಗೈ. ಅಯೋಧ್ಯೆ ಹಾಗೋ ಊರು [illegible] "ಜುಟ್ಟು"ನ ಮೇಲೆ ಒಂದು ಕವಿತೆ ರಚಿಸಿದ್ದಾರೆ. [illegible] ಪದೇ ಕ್ರಾಪು-ಜುಟ್ಟುಗಳ ಬದಲಾವಣೆ ನಡೆಯುತ್ತಿದ್ದು ಕೊನೆಗೂ ಒಂದಿಷ್ಟು ಕ್ರಾಪಿನ ಮಧ್ಯೆ ಸಣ್ಣ ಪಿಳ್ಳು ಜುಟ್ಟು ಗೆಲ್ಲದೆ ಆದರೂ ಸೋಲದೆ ಉಳಿದಿರುವುದನ್ನು ವರ್ಣಿಸುತ್ತಾ ಒಂದು ಉಪಮಾನ ಹೇಳುತ್ತಾರೆ. ಮೊಗಲರ ಸೈನ್ಯದ ಎದುರು ನಿಂತ ರಾಣಾಪ್ರತಾಪನ ಸೈನ್ಯದಂತೆ, ಎಂದು. ಅಯೋಧ್ಯೆಯದೂ ಅದೇ ಸ್ಥಿತಿ ಎಂದು ಕಾಣುತ್ತದೆ. ಆದರೆ ನಮ್ಮ ಸ್ನೇಹಿತ ಹೇಳಿದಂತೆ ಇತ್ತೀಚಿನವರೆಗೂ ಈ ಊರಿನವರು ಅಂಥದೊಂದು ಸಮಸ್ಯೆ ಇದೆಯೆಂದು ಗುರುತಿಸಿಯೇ ಇರಲಿಲ್ಲವೆಂದೂ ಕಾಲಕಾಲಕ್ಕೆ ಹೊರಗಿನವರು ಬಂದು ರಾಜಕೀಯ ರಂಪ ಎಬ್ಬಿಸುತ್ತಾರೆಂದೂ ಅವರ ಹೇಳಿಕೆ. ಬ್ರಿಟಿಷ್ ಆಡಳಿತೆಯಲ್ಲಿ ಆಗೊಮ್ಮೆ ಈಗೊಮ್ಮೆ ಈ ವಿಷಯ ಪ್ರಕೋಪಕ್ಕೆ ಹೋಗಿದ್ದಿರಬಹುದು. ಕೋರ್ಟಿನ ಆಜ್ಞೆ ಪಡೆದು ಬೀಗ ಜಡಿದು, ಕಾನೂನನ್ನು ಭದ್ರವಾಗಿ ಕಾಪಾಡಿಕೊಂಡು ಬಂದಿದ್ದರು ಅಷ್ಟೆ. ರಾಜೀವ ಗಾಂಧಿಯ ಕಾಲದಿಂದ ಆರಂಭಿಸಿ, ಸುಪ್ತವಾಗಿದ್ದ ಈ ಮುನಿಸು ಪುನಃ ಹೊಗೆ ಸೂಸಲಾರಂಭಿಸಿರುವಂತೆ ಕಾಣುತ್ತದೆ.

ಹಿಂದುವೇ ಆಗಲಿ, ಮುಸ್ಲಿಮನೇ ಆಗಲಿ, ಶೈವರಾಗಲಿ, ವೈಷ್ಣವರಾಗಲಿ ಬೇರೆ ಯಾವ ಜಾತಿ ಮತದವರೇ ಆಗಲಿ, ತಮ್ಮ ಆಸುಪಾಸಿನ ಅಲ್ಪ ಸಂಖ್ಯಾತರನ್ನು ಭಯಗ್ರಸ್ತಗೊಳಿಸಿ, ತಮ್ಮದೇ ಮೇಲ್ಮೆ ಸ್ಥಾಪಿಸಿಕೊಳ್ಳುವುದು ಖಂಡನೀಯ. ಇಂಥ ವಿಷಯಗಳನ್ನು ಎಂದಿನದೋ ಚಾರಿತ್ರಿಕವೆಂದು ನಿರ್ಲಕ್ಷಿಸುವುದೂ ಸರಿಯಲ್ಲವೇನೋ. ಆದರೆ ಇವುಗಳನ್ನು ಸ್ಥಳೀಯವೆಂದು ಪರಿಗಣಿಸಿ, ಅಲ್ಲಿಯ ಆಸುಪಾಸಿನವರು ಒಟ್ಟಿಗೆ ಕುಳಿತು ಒಪ್ಪಂದಕ್ಕೆ ಬರಲು ಪ್ರೇರೇಪಿಸಬೇಕು. ಅವರ ತೀರ್ಮಾನವನ್ನು ಪ್ರಶ್ನಿಸಲು ಹೊರಗಿನವರಿಗೆ ಅಧಿಕಾರ ಇಲ್ಲ ಎಂದಾದಾಗ, ಈ ಸಮಸ್ಯೆ ಹಾಗೂ ಇಂಥ ಇತರ ಸಮಸ್ಯೆಗಳು ಸಾಮಾಜಿಕ ಸಮಸ್ಯೆಗಳೆಂದೆನಿಸಿ ಪರಿಹಾರ ಕಂಡು ಕೊಳ್ಳುವುದು ಸುಲಭ. ಇಂದಿನ ಮಟ್ಟಿಗೆ, ಅಯೋಧ್ಯೆ ಯಲ್ಲಿ ಒಂದಿಷ್ಟು ಭಾವನಾತ್ಮಕವೆನಿಸುವ ಸಮಸ್ಯೆಯ ಸುಳಿವಿರಬಹುದೇನೋ. ಖಂಡಿತಾ ಸಾಮಾಜಿಕ ಅಥವಾ ರಾಜಕೀಯ ಸಮಸ್ಯೆ ಇಲ್ಲ. ಕಾರಿನಲ್ಲಿ ಈ [illegible]

[illegible]



ಜುಲೈ ೫ರಂದು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ನಡೆದ ಸಮಾರಂಭದಲ್ಲಿ ಪ್ರೊ॥ ಎಂ. ಎಸ್. ನಂಜುಂಡರಾವ್ ಅವರನ್ನು ಲಲಿತಕಲೆಗಳ ಕ್ಷೇತ್ರದಲ್ಲಿ ಶ್ರೀಯುತರು ಸಲ್ಲಿಸಿರುವ ಸೇವೆಗಾಗಿ ಸನ್ಮಾನಿಸಲಾಯಿತು. ಚಿತ್ರದಲ್ಲಿ ಚಿತ್ರಕಲಾ ಪರಿಷತ್ತಿನ ಅಧ್ಯಕ್ಷ ಶ್ರೀ ರಾಮಕೃಷ್ಣ ಹೆಗಡೆ, ಧರ್ಮಸ್ಥಳದ ಡಾ॥ ವೀರೇಂದ್ರ ಹೆಗ್ಗಡೆ, ಮುಖ್ಯಮಂತ್ರಿ ಎಸ್. ಎಂ. ಕೃಷ್ಣ, ರಾಜ್ಯಪಾಲರಾದ ಶ್ರೀಮತಿ ವಿ. ಎಸ್. ರಮಾದೇವಿ ಮತ್ತು ಚಿತ್ರಕಲಾ ಪರಿಷತ್ತಿನ ಪ್ರಧಾನ ಕಾರ್ಯದರ್ಶಿ ಪ್ರೊ॥ ಎಂ. ಎಸ್. ನಂಜುಂಡರಾವ್.




ಜುಲೈ ೧ರಂದು ಪತ್ರಿಕಾ ದಿನ ಹಾಗೂ ಲಕ್ಷ್ಮೀದೇವಮ್ಮ ಬಿ. ವಿ. ಪಂಡಿತ್ ಮತ್ತು ಚಪ್ಪಲ್ಲಿ ಸೂರ್ಯನಾರಾಯಣ ಶಾಸ್ತ್ರಿ ದತ್ತಿ ಉಪನ್ಯಾಸ ಸಮಾರಂಭ ನಡೆಯಿತು. ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಶ್ರೀ ಡಿ. ಬಿ. ಚಂದ್ರೇಗೌಡರು ಸಮಾರಂಭವನ್ನು ಉದ್ಘಾಟಿಸಿದರು. ಅಕಾಡೆಮಿಯ ಅಧ್ಯಕ್ಷ ಗರುಡನಗಿರಿ ನಾಗರಾಜ, ವಿಶ್ವವಿದ್ಯಾನಿಲಯದ ಕುಲಸಚಿವ ಡಾ॥ ಎಂ. ಎಸ್. ತಿಮ್ಮಪ್ಪ, ಪತ್ರಕರ್ತರ ಸಂಘದ ಅಧ್ಯಕ್ಷ ಬಿ. ವಿ. ಮಲ್ಲಿಕಾರ್ಜುನಯ್ಯ ಹಾಜರಿದ್ದರು. ಬದಲಾಗುತ್ತಿರುವ ಪತ್ರಿಕೋದ್ಯಮ ಕುರಿತು ಪತ್ರಕರ್ತ ಶೈಲೇಶ ಚಂದ್ರ, 'ಕನ್ನಡ ಪತ್ರಿಕೋದ್ಯಮ ಮತ್ತು ಮಹಿಳೆ' ಕುರಿತು ಡಾ॥ ಆರ್. ಪೂರ್ಣಿಮಾ ಉಪನ್ಯಾಸ ನೀಡಿದರು.

## ಚಲನಚಿತ್ರ ಪ್ರಪಂಚ : ಅಂದು - ಇಂದು

ಜುಲೈ ೧ ರಂದು, ಸಮಕಾಲೀನ ಅಧ್ಯಯನ ವೇದಿಕೆಯ ಆಶ್ರಯದಲ್ಲಿ ನಡೆದ ವಿಚಾರಗೋಷ್ಠಿಯಲ್ಲಿ, ಹಿರಿಯ ಚಲನಚಿತ್ರ ನಿರ್ದೇಶಕ ಹಾಗೂ ನಿರ್ಮಾಪಕ ಶ್ರೀ ಎಂ. ವಿ. ಕೃಷ್ಣಸ್ವಾಮಿಯವರು ಚಲನಚಿತ್ರದ ಪ್ರಾರಂಭದ ಕಾಲದಿಂದ ಇಂದಿನವರೆಗೆ ಈ ಕ್ಷೇತ್ರದಲ್ಲಿ



ಆಗಿರುವ, ಆಗುತ್ತಿರುವ ಅದ್ಭುತ ಬೆಳವಣಿಗೆ ಕುರಿತು ವಿಶ್ಲೇಷಿಸಿದರು. ಫಿಲ್ಮ್ ಸೊಸೈಟಿ ಚಳವಳಿಯನ್ನು ಪ್ರಾರಂಭಿಸಿದ ಮೊದಲಿಗರಲ್ಲೊಬ್ಬರಾದ ಶ್ರೀಯುತರು ಈ ಕ್ಷೇತ್ರದಲ್ಲಿ ತಮ್ಮ ಸ್ವಾನುಭವವನ್ನು, ಈ ಮಾಯಾಜಗತ್ತು ಹೇಗೆ ನಮ್ಮನ್ನು ಆಕರ್ಷಿಸುತ್ತದೆ ಎಂಬುದನ್ನು ಸ್ವಾರಸ್ಯಕರವಾಗಿ ವಿವರಿಸಿದರು.

## ಶ್ರೀ ಆರ್. ಎಂ. ಹಡಪದ್ ಅವರ ಕಲಾಕೃತಿಗಳು

*ಕಳೆದ ಸಂಚಿಕೆಯಲ್ಲಿ ಪ್ರಕಟಿಸಲಾಗಿದ್ದ ಕಲಾಕೃತಿಗಳ ಬಗ್ಗೆ ಆಯ್ದ ಕೆಲವು ಅಭಿಪ್ರಾಯಗಳು ಇಲ್ಲಿವೆ:*

ಕಲಾವಿದ ಆರ್. ಎಂ. ಹಡಪದ್‌ರವರ ನಾಲ್ಕು ಕಲಾಕೃತಿಗಳಲ್ಲಿ ಮೊದಲ ನೋಟಕ್ಕೆ ಹೆಚ್ಚು ಗಮನ ಸೆಳೆಯುವಂತಹುದು ಪತನ (೨). ಪಾತ್ರ (೩), ಟಿಸಿಲು (೪) ಮತ್ತು ಅಭಿವ್ಯಕ್ತಿ (೧) ಸ್ವಲ್ಪ ವಿಭಿನ್ನವಾಗಿ ಗಮನ ಸೆಳೆಯುತ್ತದೆ. 'ಪತನ' ಕಳಚಿ ಬೀಳುವ ಕಾಲದ ಒಳಗೇ ಮಣ್ಣಾಗುವ ನಮ್ಮ ಮನಸ್ಸಿನ ಹತ್ತು ಹಲವು 'ವೈರುಧ್ಯ'ಗಳನ್ನು ಬಿಂಬಿಸುತ್ತದೆ. ಮುಗುಚಿ ಬಿದ್ದ ಮನೆಗಳು ಇಂದಿನ ವಿಕೃತ ಜಾಗತೀಕರಣದ ಹಿನ್ನೆಲೆಯಲ್ಲಿ 'ಮನೆಗಳೂ ಮುಗುಚಿ ಬಿದ್ದಂತಿವೆಯೇನೋ' ಎನ್ನುವ ಮಾರ್ಮಿಕದ ಜೊತೆಗೆ 'ಕೆಂಪಾದ' ವೃತ್ತದಿಂದ ಕಳಚಿಕೊಂಡು ಹೊರಬರುವ 'ಬಿಳಿವೃತ್ತ' ರಕ್ತಸಿಕ್ತ ಕ್ರೂರ ವ್ಯವಸ್ಥೆಯಿಂದ 'ಶಾಂತಿಯೆಡೆಗೆ' ಹೋಗ ಬಯಸುವ ಸಾಧ್ಯತೆಯನ್ನು ಮತ್ತಷ್ಟು ಒತ್ತಿ ಹೇಳುತ್ತದೆ. **ಪಾತ್ರ** : ಕಾಲಕಾಲಕ್ಕೆ ಪಡೆಯಬಹುದಾದ ಸ್ವಾತಂತ್ರ್ಯ ಮತ್ತು ಸಮಾನತೆ ಆಕೆಗೆ ಸಿಕ್ಕಿಲ್ಲವೆನ್ನುವ ಅವಳ ಹೋರಾಟಕ್ಕೆ 'ಪಾತ್ರ' ಮತ್ತಷ್ಟು ಕಸುವು ಕಟ್ಟಿಕೊಡುತ್ತದೆ. ಹೆಣ್ಣು ತನ್ನ ಮಡಿಲಲ್ಲಿರಿಸಿಕೊಂಡಿರುವ ಮತ್ತೊಂದು ಹೆಣ್ಣುಮಗು ಸ್ತ್ರೀ ಸಂಕುಲದ ಹೋರಾಟದ 'ಜವಾಬ್ದಾರಿಯ' ಜೊತೆಗೆ ಅದರ ಲಾಲನೆ ಪಾಲನೆಯನ್ನು ಸಂಕೇತಿಸುತ್ತದೆ. ಆಶೀರ್ವಾದದ ಹಸ್ತ ಗೌರವ ಮತ್ತು ಪೂಜ್ಯ ಸ್ಥಾನವನ್ನು ಸೂಚಿಸುತ್ತಲೇ ತಿಳಿಕಪ್ಪು ಮತ್ತು ಗಾಢ ಬಿಳುಪು ಆಕೆಯ ಹೋರಾಟದ [illegible] ತೆರೆದಿಡುತ್ತದೆ. **ಟಿಸಿಲು** : ಕವಲೊಡೆದ ನಮ್ಮೊಳಗಿನ ಹತ್ತು ಹಲವು ಭಾವನೆಗಳು. ಸಂವೇದನೆಗಳು ಮುಗಿಲೆತ್ತರಕೆ ಹಬ್ಬುವ ರೀತಿ. ಬಳ್ಳಿ, ಬಲೆ, ಬಣ್ಣಬಣ್ಣದ ಗಾಢ ವಿಸ್ತೃತ ರೇಖೆಗಳು ಬದುಕಿನುದ್ದಕ್ಕೂ ಬೆಸೆದುಕೊಂಡ ಗಾಢ ಸಂಬಂಧಗಳಂತೆ [illegible] ಮೂಲದ [illegible] ಬೆಳಕಿನ ಸೆಲೆಯೊಂದು ಅಲ್ಲಲ್ಲಿ ಮುಗಿಲಿಗೇರುತ್ತಿರುವುದು [illegible] **ಅಭಿವ್ಯಕ್ತಿ** : ಸಂಗೀತ ಮತ್ತು ಸ್ತ್ರೀಯ ಅನ್ಯೋನ್ಯ ಸಂಬಂಧದ ಜೊತೆಗೆ ದ್ವಿಮುಖಗಳಲ್ಲಿ ಆಕೆಯ ಒಳಗಿನ ಇನ್ನೊಂದು ಸಂವೇದನೆಗೆ ಜೊತೆಯಾಗಿ ನಿಲ್ಲುವ ಗಂಡಿನ ಅಭಿವ್ಯಕ್ತಿಯಿದೆ. ಒಟ್ಟಾರೆ ಹಡಪದ್‌ರವರ ನಾಲ್ಕು ಕಲಾಕೃತಿಗಳು ಸಮಕಾಲೀನ ಬದುಕಿನ ಜೊತೆಜೊತೆಗೆ ಇತಿಹಾಸದ ತೆಕ್ಕೆಗೂ ನಮ್ಮನ್ನು ಕೊಂಡೊಯ್ದು ಒಂದಿಷ್ಟು ಚಿಂತನೆಗೆ ಹಚ್ಚುತ್ತವೆ.

**ರವಿಕುಮಾರ್ ಅಜ್ಜೀಪುರ**

| *ಅಸಂ.* | *ಕಲಾಕೃತಿ* | *ನಾನು ಸೂಚಿಸುವ ಶೀರ್ಷಿಕೆಗಳು* |
|---|---|---|
| ೧) | ಪೇಸ್ಟಲ್ | ಬಾಳನೌಕೆ |
| ೨) | ತೈಲವರ್ಣ | ಮುಸ್ಸಂಜೆಯ ಹೋರಾಟ |
| ೩) | ಜಲವರ್ಣ | ಸಂಬಂಧಗಳ ಸುಳಿಯಲ್ಲಿ...... |
| ೪) | ತೈಲವರ್ಣ | ಭೂರಮೆಯ ರೋಷಾಗ್ನಿ ! |

ಕಲಾತಪಸ್ವಿ ಹಡಪದ್ ಅವರ ಕಲಾಕೃತಿಗಳು ಜೀವನದ ನವರಸಗಳನ್ನು ಅಭಿವ್ಯಕ್ತಿಗೊಳಿಸುವ ಮೂಕ ಕನ್ನಡಿಗಳು ಹಾಗೂ ವ್ಯಕ್ತಿಯ ಭಾವ ದ್ವೀಪಕ್ಕೆ ಎಣ್ಣೆಬತ್ತಿಗಳಿದ್ದ ಹಾಗೆ. ಕಲಾಜ್ಯೋತಿ ಸದಾ ಬೆಳಗಲಿ.

*ಸಂಗಮೇಶ ದಿಂಡೂರ*, ರೋಟ

ಹಡಪದ್‌ರವರ ವರ್ಣ ಚಿತ್ರಗಳು ನಾ ಕಂಡಂತೆ :

೧. ಮಗದೊಂದು ೨. ಪ್ರೇಮತೀರ ೩. ಅಗಲುವ ಮೊದಲು
೪. ವನಗರ್ಭ.

*ವಂಕೀದ್ ಜಾನ್*, ಕೊಡಗು

# ಆಕಾಶದಲ್ಲಿ ವಿಕ್ರಮೋರ್ವಶೀಯ

ಈ ತಿಂಗಳ ಆಕಾಶವನ್ನು ನೋಡಲು ನೀವು ತಪಸ್ಸೇ ಮಾಡಬೇಕಾದೀತು. ಕಠಿಣ ತಪಸ್ಸು - ವರುಣದೇವನನ್ನು ಕುರಿತು. ಆತ ವರ ಕೊಟ್ಟಲ್ಲಿ ಆಕಾಶಗಂಗೆಯ ದಿವ್ಯದರ್ಶನ ನಿಮಗೆ ಪ್ರಾಪ್ತಿ.

ಈ ತಿಂಗಳ ನಕ್ಷೆಯಲ್ಲಿ ಗಣಪತಿಯ ಆಕಾರದಂತೆ ಕಾಣುವ ನಕ್ಷತ್ರ ಪುಂಜವೇ ವೃಶ್ಚಿಕ. ಈ ಅದ್ಭುತ ವಿನ್ಯಾಸವನ್ನು ಕಂಡು ಆನಂದಿಸಲು ದಕ್ಷಿಣ ದಿಕ್ಕಿಗೆ ತಿರುಗಿದರೆ ಸಾಕು. ನಿಮಗಾಗಿ ರಚಿಸಿದಂತೆ ಕಾಣುವ ಈ ಗಣಪತಿಯ ಚಿತ್ರದಲ್ಲಿ ಎದ್ದು ಕಾಣುವ ಕೆಂಪು ನಕ್ಷತ್ರವೇ ಜ್ಯೇಷ್ಠಾ - ಅಂಟಾರೆಸ್. ೧೩ರಂದು ಚಂದ್ರನೇ ಇದರ ಪಕ್ಕ ರಾರಾಜಿಸುತ್ತಾನೆ. ದುರ್ಬೀನು ಇದ್ದರೆ, ಸೊಂಡಿಲಿನ ಭಾಗವನ್ನು ವಿವರವಾಗಿ ಗಮನಿಸಿ. ಅಲ್ಲೊಂದು ಮೋಡ ಇದೆಯೇನೋ ಎಂಬ ಭ್ರಮೆ ಉಂಟಾಗುತ್ತದೆ. ಆಕಾಶ ಶುಭ್ರವಾಗಿದ್ದಾಗ ಸ್ಪಷ್ಟವಾಗಿ ಕಾಣುವ ಈ ಮೋಡವೇ ಆಕಾಶಗಂಗೆ. ಸೂಕ್ಷ್ಮವಾಗಿ ಗಮನಿಸಿದಾಗ ಈ 'ಮೋಡ' ನಮ್ಮ ಭೂಮಿಯ ವಾತಾವರಣದ್ದಲ್ಲ ಎಂದು ತಿಳಿಯುತ್ತದೆ. ಇದು ಪೂರ್ವದಿಗಂತದ ಅಂಚಿನವರೆಗೂ ವ್ಯಾಪಿಸಿದೆ ಎಂದೂ ತಿಳಿಯುತ್ತದೆ. ಅಲ್ಲೊಂದು ಮಿಣುಕು ನಕ್ಷತ್ರ ಪ್ರಕಾಶಮಾನವಾಗಿ ಕಾಣುತ್ತದೆ. ಕತ್ತಲೆಗೆ ಹೊಂದಿಕೊಂಡ ಕಣ್ಣು ಆಕಾಶಗಂಗೆಯ ಪೂರ್ಣ ಪ್ರಮಾಣವನ್ನು ವೀಕ್ಷಿಸಬಲ್ಲುದು. ಪೂರ್ವದ ಅಂಚಿನಲ್ಲಿ ಗರುಡ (ಅಕ್ವಿಲಾ) ನಕ್ಷತ್ರ ಪುಂಜವನ್ನು ಹಾದು, ಉತ್ತರದ ರಾಜಹಂಸ (ಸಿಗ್ನಸ್)ವನ್ನು ದಾಟಿ ಮುಂದುವರೆಯುತ್ತದೆ. ಈ ಆಕಾಶಗಂಗೆ ತನ್ನ ಹೆಸರಿಗೆ ಅನ್ವರ್ಥವಾಗಿ ಡೊಂಕು ಡೊಂಕಾಗಿ ಸಾಗುವ ''ನದಿ''ಯನ್ನು ವಾಲ್ಮೀಕಿ ''ಶರತ್ಕಾಲದಲ್ಲಿ ಆಕಾಶದಲ್ಲಿ ಬೆಳಗುವ ಸೇತುವೆ'' ಎಂದು ವರ್ಣಿಸಿದ್ದಾನೆ. ನದಿಯ ಅಗಲ ಎಷ್ಟು ಎಂದು ತಿಳಿಯಲು ವಿಕ್ರಮೋರ್ವಶೀಯ ಕಥೆಯನ್ನು ನೆನಪಿಗೆ ತಂದುಕೊಳ್ಳಬಹುದು. ಊರ್ವಶಿ ದೇವಲೋಕದಲ್ಲಿ ಪರಿತಪಿಸುತ್ತಿದ್ದರೆ ವಿಕ್ರಮನಿಗೆ ಬುವಿಯಲ್ಲಿ ವಿರಹವೇದನೆ; ಎಂದೆಂದಿಗೂ ದಾಟಲಾಗದ ನದಿ ಇವರಿಬ್ಬರ ನಡುವೆ. - ಇದೇ ಕಥಾವಸ್ತುವಿನ ಆಫ್ರಿಕನ್ ಜಾನಪದ ಕಥೆಯೊಂದಿದೆ. ಉದ್ದೇಶ ಒಂದೇ: ಆಕಾಶಗಂಗೆಯ ಗಡುವನ್ನು ಗುರುತಿಸುವುದು. ಅಭಿಜಿತ್ ಅಥವಾ ವೇಗಾ ಎಂಬ ನಕ್ಷತ್ರವೇ ನಾಯಕ. ಶ್ರವಣ ಅಥವಾ ಆಲ್ಟೇರ್ ಎಂಬ ನಕ್ಷತ್ರವೇ ನಾಯಕಿ. ಆಕಾಶದಲ್ಲಿ ಈ ಎರಡು ನಕ್ಷತ್ರಗಳನ್ನು ಗುರುತಿಸಿ. ಅವುಗಳ ನಡುವೆ ಕ್ಷೀಣವಾದ ಆಕಾಶಗಂಗೆಯನ್ನು ಗುರುತಿಸುವುದು ಸಾಧ್ಯವಾದರೆ, ಆಕಾಶ ನಿಜಕ್ಕೂ ಶುಭ್ರವಾಗಿದೆ ಎಂದೇ ಅರ್ಥ.





*ಕಳೆದ ವರ್ಷ 'ಹೊಸತು' ಆರಂಭದ ಸಂಚಿಕೆಯಲ್ಲಿ ಪ್ರಕಟವಾದ ನಕ್ಷೆಯೇ ಇದು. ಈ ಹನ್ನೆರಡು ತಿಂಗಳಿನ ನಕ್ಷೆಗಳನ್ನು ಸಂಗ್ರಹಿಸಿ ಇಟ್ಟುಕೊಂಡಿದ್ದಾದರೆ ಖಗೋಳದ ಪೂರ್ಣ ನಕ್ಷೆ ನಿಮ್ಮಲ್ಲಿದೆ ಎಂದಾಯಿತು. ಅಷ್ಟೇ ಅಲ್ಲ ಯಾವ ತಿಂಗಳು, ಯಾವ ದಿನ ಯಾವ ಸಮಯ ಎಂಬುದನ್ನೂ ರಾತ್ರಿಯ ಆಕಾಶ ನೋಡಿಯೇ ಕಂಡುಹಿಡಿಯುವುದನ್ನೂ ಕಲಿಯುವುದು ಸಾಧ್ಯ.*

*ಈ ನಕ್ಷೆಗಳಲ್ಲಿ ಮಾರ್ಪಾಟು ಬೇಕಾಗಿದೆಯೇ? ಬಳಸುವಲ್ಲಿ ತೊಂದರೆ ಇದೆಯೇ? ಗ್ರಹಗಳ ಸ್ಥಾನ ವಿವರಗಳನ್ನು ತಿಳಿಸುವ ಬೇರೆ ಉಪಾಯ ಮಾಡಬೇಕೇ? ಈ ಬಗ್ಗೆ ಓದುಗರಿಂದ ಸಲಹೆಗಳಿಗೆ ಸ್ವಾಗತ. ಈಗಾಗಲೇ ಅನೇಕ ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರು ಈ ನಕ್ಷೆಗಳನ್ನು ಯಶಸ್ವಿಯಾಗಿ ಬಳಸಿ ನನಗೆ ಬರೆದು ತಿಳಿಸಿದ್ದಾರೆ. ಅವರಿಗೆ ಧನ್ಯವಾದಗಳು.*

ಅಭಿಜಿತ್ ಎಂಬುದು ವೀಣಾ (ಲೈರಾ) ಎಂಬ ಪುಟ್ಟ ನಕ್ಷತ್ರ ಪುಂಜದ ಅತಿ ಪ್ರಕಾಶಮಾನವಾದ ನಕ್ಷತ್ರ. ಶ್ರವಣ ಎಂಬುದು ಗರುಡ (ಅಕ್ವಿಲಾ) ಅತಿ ಪ್ರಕಾಶಮಾನ ನಕ್ಷತ್ರ. ಇದರ ಆಚೀಚೆ ಎರಡು ನಕ್ಷತ್ರಗಳಿದ್ದು, ಮೂರೂ ಒಂದೇ ಸರಳರೇಖೆಯಲ್ಲಿ ಇರುವಂತೆ ಕಾಣುತ್ತವೆ. ಶ್ರವಣ ಎಂಬ ನಕ್ಷತ್ರದಿಂದ ಈ ತಿಂಗಳ ಹೆಸರು ಶ್ರಾವಣ ಎಂದಾಗಿದೆ. ೧೫ರ ಹುಣ್ಣಿಮೆಯಂದು ಚಂದ್ರ ಈ ನಕ್ಷತ್ರದ 'ಸಮೀಪ' ಕಾಣುತ್ತದೆ.

ಜುಲೈ ೩೧ರಂದು ಸೂರ್ಯಗ್ರಹಣವಾಗಿದ್ದರಿಂದ ಅದರ ಮರುದಿನ ಅಂದರೆ ಆಗಸ್ಟ್ ೧ರಂದು ಬಾಲ ಚಂದ್ರನ ತೆಳ್ಳನೆಯ ಗೆರೆಯ ಆಕಾರವನ್ನು ಸಂಜೆ ಪಶ್ಚಿಮದ ದಿಗಂತದ ಅಂಚಿನಲ್ಲಿ ಹುಡುಕಲು ಪ್ರಯತ್ನಿಸಬಹುದು. ಆಕಾಶ ಶುಭ್ರವಾಗಿದ್ದು ನಿಮ್ಮ ಪ್ರಯತ್ನ ಫಲಿಸಿದರೆ, ಅದರ ಪಕ್ಕದಲ್ಲೇ ಶುಕ್ರಗ್ರಹವೂ ಕಾಣುವುದು. ಇವು, ಅಮೆರಿಕನ್ನರಿಗೆ ವೈಶಿಷ್ಟ್ಯಪೂರ್ಣ ''ಶುಕ್ರಗ್ರಹಣ''ದ ನೋಟವನ್ನು ಒದಗಿಸಲಿವೆ. ಆದರೆ ಅದು ಸಂಧ್ಯಾ ಪ್ರಕಾಶದಲ್ಲಿ ಅಡಗಿಹೋಗುವುದು. ಸಾಧಾರಣವಾಗಿ ಈ ತಿಂಗಳಿನುದ್ದಕ್ಕೂ ಇದೇ ಸ್ಥಾನದಲ್ಲಿ ಕಾಣುವ ಶುಕ್ರ ೬ನೇಯ ತಾರೀಖು ಮಘ ನಕ್ಷತ್ರದೊಡನೆ ಜೋಡಿಯಾಗುತ್ತದೆ. ೩೦ನೇಯ ತಾರೀಖು ಪುನಃ ಬಾಲಚಂದ್ರ ಹಾಗೂ ಶುಕ್ರ ಜೋಡಿಯಾಗುತ್ತವೆ.

ಮಂಗಳ ಮತ್ತು ಬುಧಗ್ರಹಗಳು ಸೂರ್ಯ ಪ್ರಭೆಯಲ್ಲಿ ಅಡಗಿ ಹೋಗುತ್ತವೆಯಾದರೂ ಆಗಸ್ಟ್ ೭ರಂದು ಜೋಡಿಯಾಗುವ ನೋಟ ರಮಣೀಯವಾಗಿರುತ್ತದೆ. ಕ್ರಮೇಣ ಮಂಗಳದ ಕೆಂಪು ಚುಕ್ಕೆಯಿಂದ ಬುಧ ದೂರ ಸರಿದು ದಿಗಂತದಂಚಿನಲ್ಲಿ ಸಂಧ್ಯಾ ಪ್ರಕಾಶದಲ್ಲಿ ಕರಗಿಹೋಗುವುದನ್ನು ಗಮನಿಸಬಹುದು. ಆಗಸ್ಟ್ ೨೮ರಂದು ತೆಳ್ಳನೆಯ ಬಾಲಚಂದ್ರ ಮಂಗಳದ ಸಮೀಪ ಕಾಣುವುದು. ಇದು ಛಾಯಾಗ್ರಾಹಕರಿಗೆ ಒಂದು ಒಳ್ಳೆಯ ಅವಕಾಶ.

೨೫ರ ಮಧ್ಯರಾತ್ರಿ ಉದಯಿಸುವ ಚಂದ್ರ ಶನಿಗ್ರಹದೊಡನೆ ಜೋಡಿಯಾಗಿ ಕಾಣುತ್ತದೆ. ೨೬ರಂದು ಗುರುಗ್ರಹದೊಡನೆ ಜೋಡಿಯಾಗುತ್ತದೆ. ಈ ಘಟನೆಗಳನ್ನು ನೋಡಲು ನೀವು ಮಧ್ಯರಾತ್ರಿ ಎದ್ದು ಕೂಡಬೇಕಾಗಿಲ್ಲ. ಬೆಳಗಿನ ಝಾವ ನೆತ್ತಿಯ ಮೇಲೆ ನೋಡಬಹುದು.

ನೆಪ್ಚೂನ್, ಯುರೇನಸ್ ಹುಡುಕಲು ಹೊರಟವರಿಗೆ ೧೩ ಮತ್ತು ೧೪ರಂದು ಚಂದ್ರನ ಸಹಾಯ ದೊರಕುತ್ತದೆ. ೧೩ರಂದು ನೆಪ್ಚೂನನ್ನು ಚಂದ್ರ ಮರೆಮಾಡಲಿದೆ. ಆದರೆ ಅದು ನಮಗೆ (ಭಾರತಕ್ಕೆ) ಕಾಣುವುದಿಲ್ಲ. ಎರಡೂ ಸಮೀಪ ಇರುವುದನ್ನು ದುರ್ಬೀನಿನಿಂದ ನೋಡಬಹುದು. ೧೪ರಂದು ಯುರೇನಸ್ ಚಂದ್ರನ ಸಮೀಪ ಇರುತ್ತದೆ.

ವಿಖ್ಯಾತ ಪರ್ಸಿಯೈಡ್ ಉಲ್ಕಾವೃಷ್ಟಿಯ ಗರಿಷ್ಠ ೧೨ರಂದು. ಆದ್ದರಿಂದ ಬೆಳಗಿನ ವಾಯುವಿಹಾರಕ್ಕೆ ಹೊರಟವರು ಆಕಾಶವನ್ನು ೫:೩೦ರ ಹೊತ್ತಿನಲ್ಲಿ ಗಮನಿಸಿದರೆ ೧೧,೧೨,೧೩ ಈ ದಿನಗಳಲ್ಲಿ ಹೆಚ್ಚು ಉಲ್ಕೆಗಳು ಬೀಳುವುದನ್ನು ಕಾಣಬಹುದು. ಗಂಟೆಗೆ ಸುಮಾರು ೪೦ ರಿಂದ ೬೦ ಉಲ್ಕೆಗಳು ಬೀಳುವುವು. ಇನ್ನೊಂದು ಉಲ್ಕಾವೃಷ್ಟಿ ೧೭ ರಿಂದ ೨೫ರವರೆಗೂ ವ್ಯಾಪಿಸಿದೆ. ಗಂಟೆಗೆ ೨೦-೩೦ ಉಲ್ಕೆಗಳು ಬೀಳಬಹುದು. ಪೂರ್ವದಿಕ್ಕಿನತ್ತ (ಬೆಳಗಿನ ಝಾವ) ಗಮನ ಇಟ್ಟಿದ್ದರೆ ಸಾಕು, ಅರ್ಧಗಂಟೆಯಲ್ಲಿ ಐದು ಹತ್ತಾದರೂ ಕಣ್ಣಿಗೆ ಬೀಳುವುವು.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಶ್ರೀ ಟಿ ಚೌಡಯ್ಯ ರಸ್ತೆ, ಬೆಂಗಳೂರು - ೫೬೦ ೦೦೧

# ಸವಾಲುಗಳೊಡನೆ ಸೆಣಸಿ ಬಂದ ಸಾಹಸಿಗಳು

## ಸ್ವಾಮಿ ರಾಮಕೃಷ್ಣಾರ್ಪಣಾನಂದ

ರಾಮಾಯಣ, ಮಹಾಭಾರತಗಳಿಗೂ ಭಾರತಕ್ಕೂ ಒಂದು ರೀತಿಯ ಅವಿನಾಶಿ ಸಂಬಂಧ. ಆದ್ದರಿಂದ ಈ ಕತೆಗಳಲ್ಲಿ ಬರುವ ಪಾತ್ರಧಾರಿಗಳು ಎಲ್ಲಾ ಕಡೆಯೂ ಸಂಚರಿಸಿದ್ದರೋ ಇಲ್ಲವೋ ಅವರಿಗೇ ಗೊತ್ತು. ಆದರೆ, ಎಲ್ಲರ ದೇಶ, ಭಾಷೆ, ವೇಷಗಳೆಲ್ಲವೂ ವಿಭಿನ್ನವಾಗಿದ್ದರೂ ಅಂದಿನ ಆ ಹೀರೋ, ಹಿರೋಯಿನ್‌ಗಳೊಡನೆ ಗುರುತಿಸಿಕೊಳ್ಳುವುದನ್ನು ಪ್ರತಿಷ್ಠೆಯನ್ನಾಗಿ ಮಾಡಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ 'ಇಲ್ಲೆ ರಾಮ ಆ ರಾಕ್ಷಸನನ್ನು ಕೊಂದ', 'ಅಲ್ಲೆ ಭೀಮ ಬಕಾಸುರನನ್ನು ಕೊಂದ', 'ಇಲ್ಲೆ ಅರ್ಜುನ ತಪಸ್ಸನ್ನಾಚರಿಸಿದ', 'ಅಲ್ಲೆ ಕುಂತಿ ವಾಸವಾಗಿದ್ದಳು' ಎಂಬ ಕತೆಗಳು ಸೃಷ್ಟಿಯಾಗಿವೆ. ಇದಕ್ಕೆ ಮಂಡ್ಯಾ ಜಿಲ್ಲೆಯ ಪಾಂಡವಪುರದ ಬಳಿಯಿರುವ ಕುಂತಿ ಬೆಟ್ಟ ಸಹ ಹೊರತಾಗಿಲ್ಲ. ಈ ಬೆಟ್ಟದ ಪಕ್ಕದಲ್ಲೇ ಸಿದ್ಧ ಬೆಟ್ಟ ಮತ್ತು ಒನಕೆ ಬೆಟ್ಟಗಳಿದ್ದರೂ ಸಹ ಕುಂತಿ ಬೆಟ್ಟದಲ್ಲಿ ಆಕೆ ವಾಸವಾಗಿದ್ದಳೆಂಬ ಹಿನ್ನೆಲೆಯಲ್ಲಿ ಆ ಪ್ರದೇಶಕ್ಕೆಲ್ಲಾ ಆಕೆಯ ಹೆಸರನ್ನೇ ಸ್ಥಳೀಯರು ನೀಡಿ ಆಕೆಗೆ ಗೌರವವನ್ನು ಸಲ್ಲಿಸಿದ್ದಾರೆ. ಈ ಸ್ಥಳದಲ್ಲೇ ಭೀಮ ತಾಯಿಯ ಆಣತಿಯಂತೆ ಬಕಾಸುರನೆಂಬ ಅಸುರನನ್ನು ಸಂಹರಿಸಿದನೆಂಬ ಕತೆ ಪ್ರಚಲಿತದಲ್ಲಿದೆ. ಮೈಸೂರು ಹುಲಿ ಟಿಪ್ಪೂ ಸುಲ್ತಾನನ ಆಳ್ವಿಕೆಯ ಅವಧಿಯಲ್ಲಿ ಅವನ ಅಪೇಕ್ಷೆಯಂತೆ ಆತನ ನೆರವಿಗೆ ನಲ್ವತ್ತು ಫ್ರೆಂಚ್ ಸೈನ್ಯ ತುಕ್ಕಡಿಗಳು ಈ ಪ್ರದೇಶದಲ್ಲಿ ಬೀಡುಬಿಟ್ಟಿದ್ದರಿಂದ ಇದಕ್ಕೆ ಫ್ರೆಂಚ್ ರಾಕ್ಸ್ ಎಂಬ ಹೆಸರೂ ಇದೆ.

ಬಹಳಷ್ಟು ದೂರದಿಂದಲೇ ಪ್ರವಾಸಿಗರ ಗಮನ ಸೆಳೆವ ಈ ಶಿಲಾ ಬೆಟ್ಟಗಳ ಸಮೂಹದ ಬಲ ತುದಿಯಲ್ಲಿರುವ ಒನಕೆ ಬೆಟ್ಟ (ಬೆಟ್ಟದ ನೆತ್ತಿಯ ಮೇಲೆ ನಿಲ್ಲಿಸಲಾಗಿರುವ ಚಚ್ಚೌಕಾಕಾರದ ಶಿಲಾ ಕಂಬ ದೂರಕ್ಕೆ ಒನಕೆಯಂತೆ ಗೋಚರಿಸುವುದರಿಂದ ಈ ಹೆಸರು ಬಂದಿದೆಯಂತೆ) ಭೂಮಟ್ಟದಿಂದ ಸುಮಾರು ಒಂದು ಸಾವಿರ ಅಡಿಗಳಷ್ಟು ಎತ್ತರಕ್ಕೆ ಲಿಂಗಾಕಾರವಾಗಿ ಬೆಳೆದು ನಿಂತಿದೆ. ನೋಡುವುದಕ್ಕೆ ಚಿಕ್ಕ ಬೆಟ್ಟದಂತೆ ತೋರಿದರೂ ಮೇಲೇರುವುದು ಮಾತ್ರ ಸುಲಭ ಸಾಧ್ಯದ ಮಾತಿನ ಸಾಹಸವಲ್ಲ. ಆ ಸಾಹಸವನ್ನೂ ಕೂಡ ಪೂರ್ವ ದಿಕ್ಕಿನಿಂದ ಮಾತ್ರ ಮಾಡಬಹುದಾಗಿದೆ. ಈ ಬೆಟ್ಟದ ಸಮೂಹಗಳು ಹಾಗೂ ಇವಕ್ಕೆ ಹೊಂದಿಕೊಂಡಿರುವ ಪ್ರದೇಶಗಳು ಚಾರಣ, ಶಿಲಾರೋಹಣ, ಶಿಲಾವರೋಹಣ ಮಾಡಲಿಚ್ಛಿಸುವ ಗಂಡೆದೆ ಗುಂಡಿಗೆಯ ಸಾಹಸಿಗರಿಗೆ, ಸ್ವರ್ಗೀಯ ದೃಶ್ಯದ ನಿಸರ್ಗವನ್ನು ಕಾಣಲಿಚ್ಛಿಸುವ ಪ್ರಕೃತಿ ಪ್ರಿಯರಿಗೆ ಹೇಳಿ ಮಾಡಿಸಿದ ತಾಣವಾಗಿದೆ.

ಕಬ್ಬಿನ ಗದ್ದೆ ಮತ್ತು ಆಲೇ ಮನೆಗಳಿಂದ ಆವೃತವಾಗಿರುವ ಪಾಂಡವಪುರ-ಮಂಡ್ಯಾದ ರಸ್ತೆಯಿಂದ ಎರಡು ಕಿ.ಮೀ. ದೂರದಲ್ಲಿ ಎಡಕ್ಕೆ ಕವಲೊಡೆದಿರುವ ಡಾಂಬರು ರಸ್ತೆಯಲ್ಲಿ ನೇರವಾಗಿ ಒಂದು ಕಿ.ಮೀ. ನಡೆದರೆ ಈ ಬೆಟ್ಟವನ್ನು ತಲುಪುತ್ತೇವೆ. ಬೆಟ್ಟದ ಪಾದದಲ್ಲಿ ಸ್ಥಳೀಯರು ನಡೆಸುತ್ತಿರುವ ಉಚಿತ ವಸತಿ ಶಾಲೆ, ಇದರಿಂದ ಸ್ವಲ್ಪ ಮೇಲೆ ಶ್ರೀ ಮಲ್ಲಿಕಾರ್ಜುನ ಸ್ವಾಮಿ ದೇವಾಲಯ, ಸರ್ವ ಋತುವಿನಲ್ಲೂ ತುಂಬಿರುವ ಆಳವಾದ ಪುಟ್ಟ ಕೊಳ, ಕೇರಳ ಮೂಲದ ಸ್ವಾಮಿ ಶಂಕರಾನಂದ ಭಾರತೀಯವರ ಸಮಾಧಿ, ಏಕಶಿಲಾ ಬೃಹತ್ ಗಣಪ, ಕಲ್ಯಾಣ ಮಂದಿರ ಮುಂತಾದವು ಇವೆ. ಇಲ್ಲಿನ ಪರಿಸರ ಪ್ರಶಾಂತವೂ ಸುಂದರವೂ ಆಗಿರುವುದರಿಂದ ಸಾಮಾನ್ಯವಾಗಿ ಎಲ್ಲಾ ಭಾಷೆಗಳ ಚಿತ್ರದ ಚಿತ್ರೀಕರಣಕ್ಕೆ ಪೋಸು ಕೊಟ್ಟ ಹೆಗ್ಗಳಿಕೆ ಇದಕ್ಕಿದೆ.

ಯುವಜನತೆಯಲ್ಲಿ ಸಾಹಸ ಪ್ರವೃತ್ತಿಯನ್ನು ಒಡಮೂಡಿಸಲು ಹಾಗೂ ಸಾಹಸ ಕ್ರೀಡೆಗಳ ಬಗ್ಗೆ ಜಾಗೃತಿಯನ್ನು ಮೂಡಿಸಿ, ಅವುಗಳನ್ನು ಜನಪ್ರಿಯಗೊಳಿಸುವ ದೃಷ್ಟಿಯಿಂದ ಮೈಸೂರು ಜಿಲ್ಲೆಯ 'ಸಾಹಸಿ' ಆಗಿಂದಾಗ್ಗೆ ಸಾಹಸ ಕ್ರೀಡೆಗಳಾದ ಚಾರಣ, ಶಿಲಾರೋಹಣ, ಶಿಲಾವರೋಹಣ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿರುತ್ತದೆ. ಅಂತಹ ಒಂದು ಕಾರ್ಯಕ್ರಮ ಇತ್ತೀಚೆಗೆ ಇದುವರೆಗೂ ಪ್ರಸ್ತಾಪ ಮಾಡಿದ ಕುಂತಿ ಬೆಟ್ಟದಲ್ಲಿ ಜರುಗಿತು. ಆ ಸಾಹಸದಲ್ಲಿ ನಾವು ಸಾವಿನ ದವಡೆಗೂ ಸಮೀಪವಾಗಿದ್ದ ಸವಾಲುಗಳೊಡನೆ ಸೆಣೆಸಿಬಂದು ರೋಮಾಂಚಿತರಾಗಿದ್ದೇವೆ.


ಕಡಿದಾದ ಬಂಡೆ ಏರುವ ಸಾಹಸ

ಎರಡು ದಿನಗಳ ಸಾಹಸ ಕ್ರೀಡೆಗಳ ತರಬೇತಿ ಶಿಬಿರದಲ್ಲಿ ಮೊದಲನೆಯ ದಿನ ಬೆಳಿಗ್ಗೆ ವಸತಿ ಶಾಲೆಯ ಹಿಂದೆ ಸುಮಾರು ಒಂದು ಕಿ.ಮೀ. ದೂರದಲ್ಲಿ ಪ್ರಾಥಮಿಕ ಹಂತದ ಶಿಲಾರೋಹಣದ ಬಂಡೆಗಳನ್ನು ಹಾಗೂ ಗೋಡೆಯಂತಹ ಎರಡು ಬಂಡೆಗಳ ನಡುವಿನ ಸುಮಾರು ಎರಡು-ಮೂರು ಅಡಿ ಅಗಲದ ಇಕ್ಕಟ್ಟಾದ ಜಾಗದಲ್ಲಿ ಕೆಳಗಿನಿಂದ ಮೇಲೇರುವ 'ಚಿಮಣಿ ಕ್ಲೈಂಬಿಂಗ್' ಕಲೆಯನ್ನು ಕಲಿಸಲಾಯಿತು. ನಂತರ ಪಾಂಡವಪುರದ ಕೆರೆ, ಕುಂತಿ ಬೀಡುಬಿಟ್ಟದ್ದ ಹಾಗೂ ಸ್ನಾನ ಮಾಡುತ್ತಿದ್ದ ಜಾಗ, ಭೀಮನ ಪಾದ, ಕುಂತಿ ಕೊಳಗಳ ಮೂಲಕ ಶಿಬಿರಕ್ಕೆ ಹಿಂದಿರು ಗಿದೆವು. ಮಧ್ಯಾಹ್ನ ಹಗ್ಗದಿಂದ ವಿವಿಧ ನಮೂನೆಯ ಗಂಟುಗಳನ್ನು ಹಾಕುವುದನ್ನು ಹೇಳಿಕೊಟ್ಟರು ತರಬೇತು ದಾರರಾದ ಹಿರಿಯ ಪರ್ವತಾರೋಹಿ ಗೋವಿಂದ ರಾಜರವರು. ತರುವಾಯ ಶಿಬಿರದ ಮುಂದೆಯೇ ಇದ್ದ ಎತ್ತರವಾದ ಬಂಡೆಯ ಮೇಲಿಂದ ರ್‍ಯಾಪ್ಲಿಂಗ್ (ಅವರೋಹಣ) ಮಾಡಿಸಲಾಯಿತು. ರಾತ್ರಿ ಊಟದ ನಂತರ ಶಿಬಿರಾಗ್ನಿ ಕಾರ್ಯಕ್ರಮವಿತ್ತು.

ಮರುದಿನ ಬೆಳಿಗ್ಗೆ ಉಪಹಾರದ ನಂತರ ಮುವ್ವತ್ತು ಜನರಿದ್ದ ಶಿಬಿರಾರ್ಥಿಗಳ ತಂಡವನ್ನು ಎರಡು ಗುಂಪುಗಳಾಗಿ ವಿಭಜಿಸಿ ಒಂದು ಗುಂಪು ಎದುರಿಗೆ ಕಾಣುತ್ತಿದ್ದ ಒನಕೆ ಬೆಟ್ಟವನ್ನು ಅದರ ಎಡಭಾಗದಿಂದಲೂ ಮತ್ತೊಂದು ತಂಡ ಅದರ ಬಲಭಾಗದಿಂದಲೂ ಮೇಲೇರಿ ವಿರುದ್ಧ ದಿಕ್ಕಿನಲ್ಲಿ ಹಿಂದಿರುಗಿ ಬರುವಂತೆ ತಿಳಿಸಿ ಚಾರಣಕ್ಕೆ ಕಳಿಸಲಾಯಿತು. ಮೊದಲನೇ ತಂಡದಲ್ಲಿದ್ದ ನಾವು ಎಡಭಾಗದಿಂದ ಬೆಟ್ಟವನ್ನು ಉಪಕ್ರಮಿಸತೊಡಗಿದೆವು. ಆಳೆತ್ತರದ ಹುಲ್ಲು ಪೊದೆಗಳ ನಡುವೆ ಹಾಯುತ್ತಾ, ಮಳೆಯಿಂದ ತೊಯ್ದು ಜಾರುತ್ತಿದ್ದ ಬಂಡೆಗಳನ್ನು ಪ್ರಯಾಸದಿಂದ ಏರುತ್ತಾ, ಆ ಪ್ರಯತ್ನದಲ್ಲಿ ಕೆಲವೊಮ್ಮೆ ಜಾರಿ ಬಿದ್ದು ಮೈ ಕೈ ತರಚಿಕೊಂಡು ೧೧ ಗಂಟೆ ಹೊತ್ತಿಗೆಲ್ಲಾ ಒನಕೆ ಬೆಟ್ಟವನ್ನು ಏರಿ ವಿಜಯೋತ್ಸವವನ್ನು ಆಚರಿಸಿದೆವು. ಮತ್ತೊಂದು ತಂಡ ಬರುವವರೆಗೂ ನಾವು ಬೆಟ್ಟದ ಮೇಲಿಂದ ಸುತ್ತಮುತ್ತಲ ನಿಸರ್ಗದ ಅಪೂರ್ವ ದೃಶ್ಯಗಳನ್ನು ಕಣ್ಣು ಮತ್ತು ಕ್ಯಾಮರಾಗಳಲ್ಲಿ ಸೆರೆ ಹಿಡಿದು ಹೃನ್ಮನಗಳನ್ನು ತಣಿಸಿಕೊಂಡೆವು. ಅರ್ಧ ಗಂಟೆ ತಡವಾಗಿ ಮತ್ತೊಂದು ತಂಡ ಬಂದ ನಂತರ ಶರಬತ್ತನ್ನು ತಯಾರಿಸಿ ಕುಡಿದು ಮತ್ತೆ ವಿಮುಖರಾಗಿ ಶಿಬಿರದತ್ತ ಪಾದ ಬೆಳೆಸಲು ಪ್ರಾರಂಭಿಸಿದೆವು.

ಒನಕೆ ಬೆಟ್ಟವನ್ನು ಎಡ ಭಾಗದಿಂದ ಹತ್ತುವುದು ಅಥವಾ ಇಳಿಯುವುದು ಹಾಗೆಯೇ ಬಲಭಾಗದಿಂದ ಮೇಲೇರುವುದು ಸುಲಭವಾಗಿತ್ತು. ಆದರೆ, ಅತ್ತಲಿಂದ ಇಳಿಯುವುದು ಅಷ್ಟು ಸುಲಭ ಸಾಧ್ಯವಾಗಿರಲಿಲ್ಲ. ಏಕೆಂದರೆ ಆ ಕಡೆಗಿನ ದೃಶ್ಯಗಳು ನಮಗೆ ಗೋಚರಿಸದಂತೆ ಆ ಬೆಟ್ಟ ನೆಟ್ಟಗೆ ತಲೆಯೆತ್ತಿ, ಹಾದಿಯಿಲ್ಲದ ಹಾದಿಯಲ್ಲಿ ಹಾದಿ ಮಾಡಿಕೊಂಡು ನಾವು ಮುನ್ನಡೆಯುತ್ತಿದ್ದ ಸ್ಥಳಕ್ಕಿಂತ ಎತ್ತರವಾಗಿ ತೊಡೆ ತಟ್ಟಿ ನಿಂತಿತ್ತು. ಆದ್ದರಿಂದ ನಾವು ಮುಂದಿನ ಮಾರ್ಗವನ್ನು ಮುಂದಾಗಿ ಗುರುತಿಸಿಕೊಳ್ಳುವುದು ಕಷ್ಟವಾಗಿತ್ತು. ಆದಾಗ್ಯೂ ಆದಷ್ಟು ಬೇಗ

ಮತ್ತು ಮೊದಲು ನಾವೇ ಶಿಬಿರವನ್ನು ತಲುಪಬೇಕೆಂಬ ಉತ್ಸುಕತೆಯಿಂದ ಹತ್ತಿರದ ದಾರಿಯನ್ನು ಬೆನ್ನತ್ತಿ ಚಿಗರೆ ಮರಿಗಳಂತೆ ಒಂದು ಬಂಡೆಯಿಂದ ಮತ್ತೊಂದು ಬಂಡೆಗೆ ಜಿಗಿಯುತ್ತಾ ಉಡದಂತೆ ಬಂಡೆಗಳನ್ನು ಏರಿಳಿಯುತ್ತಾ ಮುಳ್ಳು ಪೊದೆಗಳಿಂದ ಮೈ ಕೈ ಗೀರಿಕೊಂಡು ಶರ್ಟುಗಳನ್ನು ಹರಿದುಕೊಂಡು ಮಾರ್ಗವನ್ನು ಕ್ರಮಿಸಲು ಮೊದಲು ಮಾಡಿದೆವು. ಕೆಲವು ಸನ್ನಿವೇಶಗಳಲ್ಲಿ ನಮ್ಮ ಸಾಹಸ ನಮ್ಮ ಸಾಮರ್ಥ್ಯಕ್ಕೆ ಮೀರಿದ್ದಾಗಿತ್ತು. ಇದು ಒಂದಿಬ್ಬರು ಅಳುಕು ಮನದವರ ಎದೆಯಲ್ಲಿ ನಡುಕ ಹುಟ್ಟಿಸಿ ಹಿಮ್ಮೆಟ್ಟುವಂತೆ ಮಾಡಿತು. ಏನೋ ನೆಪ ತೆಗೆದುಕೊಂಡು, ಬಂದ ದಾರಿಯಲ್ಲೇ ಹಿಂದಿರುಗಿ 'ಅಯ್ಯೋ! ಬದುಕಿದೆಯಾ ಬಡ ಜೀವಿಯೇ!' ಎಂದು ನಿಟ್ಟುಸಿರುಬಿಟ್ಟರು. ಆದರೆ ಇವುಗಳಾವುವೂ ಉಳಿದವರ ಮೇಲೆ ಪ್ರಭಾವ ಬೀರಲಿಲ್ಲ ವಾದ್ದರಿಂದ ಹುಮ್ಮಸ್ಸಿನಿಂದ ಮುಂದುವರಿದೆವು.

ಕೆಳಗೆ ಕಬ್ಬಿಣದಂತೆ ಕಾದ ಶಿಲಾ ಬೆಟ್ಟದ ಕಾವು, ನೆತ್ತಿಯ ಮೇಲೆ ರಣ ಬಿಸಿಲಿನ ತಾಪ ಶಾಪದಂತೆ ಕಾಡುತ್ತಿದ್ದವು! ಜನ ಸಂಚಾರವಾಗಲಿ, ಸಮೀಪದಲ್ಲಿ ಅವರುಗಳ ಇರುವಿನ ಒಂದು ಕುರುಹಾಗಲಿ ಇಲ್ಲದ್ದರಿಂದ ಸುತ್ತಮುತ್ತ ನೀರವತೆ ಮನೆ ಮಾಡಿ ಸನ್ನಿವೇಶದಲ್ಲಿ ಗಂಭೀರತೆಯನ್ನು ಹೆಚ್ಚಿಸಿತ್ತು. ಇದಾವುದರಿಂದಲೂ ನಾವು ವಿಚಲಿತರಾಗದೆ ಕಾರ್ಗಿಲ್‌ಗೆ ಹೊರಟ ಸಿಪಾಯಿಗಳಂತೆ ಅರ್ಧ ಗಂಟೆಯ ನಂತರ ಶಿಖರದ ದಕ್ಷಿಣದ ಅಂಚಿಗೆ ಬಂದೆವು. ಅಲ್ಲಿಂದ ಮುಂದಕ್ಕೆ ಮಾರ್ಗ ಒಡ್ಡಿದ್ದ ಸಮಸ್ಯೆಗಳು ಸಾಮಾನ್ಯರ ಧೈರ್ಯಕ್ಕೆ ಮೀರಿದ್ದಾಗಿದ್ದವು. ಏಕೆಂದರೆ, ಒಮ್ಮೆಗೇ ಕಡಿದಾದ ಅಂಚು ನೂರಾರು ಅಡಿಗಳ ತಳವನ್ನು ದರ್ಶನ ಮಾಡಿಸಿ ಸಾಹಸದ ಹುಮ್ಮಸ್ಸಿನಲ್ಲಿ ಪುಳಕವಾಗಿದ್ದ ಗುಂಡಿಗೆಯಲ್ಲಿ ಸಾವು ನೋವಿನ ಅಳುಕು ಅಂಕುರವಾಗತೊಡಗಿತು! ಆಗ ಅಲ್ಲಿ ನಮಗಿದ್ದ ಎರಡು ಆಯ್ಕೆಗಳೆಂದರೆ, ಒಂದು, ಬಂದ ದಾರಿಗೆ ಸುಂಕವಿಲ್ಲದಂತೆ ಹಿಂದಿರುಗುವುದು, ಇಲ್ಲಾ ಅಂಚಿನಲ್ಲಿದ್ದ ಬಂಡೆಯೊಂದರ ಏಣನ್ನು ಹಿಡಿಕೆಯನ್ನಾಗಿ ಮಾಡಿಕೊಂಡು ಹತ್ತಡಿ ಕೆಳಗಿಳಿದು ಅಲ್ಲಿಂದ ಬಲಕ್ಕೆ ಕೇವಲ ಒಂದುವರೆ ಎರಡು ಅಡಿ ಅಗಲದ ಅಂಚಿನಲ್ಲಿ ಬೆನ್ನನ್ನು ಬಂಡೆಗೆ ಒತ್ತಿ ಪ್ರಪಾತಕ್ಕೆ ಅಭಿಮುಖವಾಗಿ ಪಕ್ಕಪಕ್ಕಕ್ಕೆ ಕೊಂಚಕೊಂಚವೇ ಸುಮಾರು ಹದಿನೈದು ಅಡಿಗಳನ್ನು ಕ್ರಮಿಸಿ ಸುರಕ್ಷಿತವಾದ ಸ್ಥಳವನ್ನು ಸೇರಿ ಮುಂದುವರಿಯುವುದು. ಈ ಹಂತದ ಸಾಹಸದಲ್ಲಿ ಕೊಂಚ ಆಯ ತಪ್ಪಿದರೂ ಎಚ್ಚರಗೆಟ್ಟರೂ ತಳಕಂಡ ಚಾರಣ, ಶಿಲಾರೋಹಣಗಳನ್ನು ಬದಿಗೊತ್ತಿ ಸ್ವರ್ಗಾರೋಹಣವನ್ನು ಮಾಡಬೇಕಾಗುವುದು ನಿಶ್ಚಯವಾಗಿತ್ತು. ಅದನ್ನು ಕಲ್ಪಿಸಿಕೊಂಡೇ ನಮ್ಮೆಲ್ಲರ ಜಂಘಾಬಲವೆಲ್ಲಾ ನಡುಗಿ, ಹೆಸರಿಲ್ಲದಂತೆ ಉಡುಗಿಹೋಯಿತು. ನಮ್ಮಲ್ಲಿ ಒಂದಿಬ್ಬರು ಮನೆಯಲ್ಲಿ ಸಾಹಸ ಕ್ರೀಡೆಗಳ ತರಬೇತಿ ಶಿಬಿರಕ್ಕೆ ಹೋಗುತ್ತಿರುವುದಾಗಿ ತಿಳಿಸಿದರೆ ಕಳುಹಿಸುವುದಿಲ್ಲವೆಂಬ ಕಾರಣಕ್ಕಾಗಿ ಪ್ರವಾಸವೆಂದು ಸುಳ್ಳು ಹೇಳಿ ಬಂದಿದ್ದರು. ಆದ್ದರಿಂದ ಬಂದ ದಾರಿಯಲ್ಲೇ ಹಿಂದಿರುಗೋಣವೆಂದರೆ, ಆಗಲೇ ಬಹಳಷ್ಟು ದೂರ ಬಂದಿದ್ದೆವು. ಹೋಗಲಿ, ಮುಂದೆ ಹೋಗೋಣವೆಂದರೆ ಅವಕಾಶ ಸಿಕ್ಕರೆ ಸಾಕು ನುಂಗಿ ನೀರು ಕುಡಿಯಲು ಕಾದು ಕುಳಿತಿರುವ ಯಮನ ಏಜೆಂಟ್ ಆದ ಆಳವಾದ ಕಮರಿ : ಅತ್ತ ಪುಲಿ ಇತ್ತ ದರಿ ಎಂಬ ಸಂದಿಗ್ಧ ಪರಿಸ್ಥಿತಿ ನಮ್ಮದಾಗಿತ್ತು. ಒಂದಿಬ್ಬರಂತೂ, 'ಏಕಾದರೂ ಈ ಶಿಬಿರಕ್ಕೆ ಬಂದೆವೋ, ಯಾರಿಗೆ ಬೇಕಾಗಿತ್ತು ಈ ಸಾಹಸದ ಸಹವಾಸ' ಎಂದು ಕಂಗಾಲಾಗಿ ಪೇಚಾಡಿಕೊಳ್ಳುತ್ತಾ ನಿಷ್ಕ್ರಿಯರಾಗಿಬಿಟ್ಟರು. ಉಳಿದವರು,

ತಲೆಯೆತ್ತಿ ನಿಂತ ಶಿಲಾಬೆಟ್ಟ

'ಶಿಬಿರಕ್ಕೆ ಮತ್ತು ತಮ್ಮ ಸಾಹಸ ಪ್ರವೃತ್ತಿಗೆ ಅರ್ಥ, ಬೆಲೆ ಬರಬೇಕಾದರೆ ಮುಂದಿದ್ದ ಸವಾಲನ್ನು ಎದೆಗುಂದದೆ ಎದುರಿಸಿಯೇ ಮುಂದುವರಿಯೋಣ'ವೆಂಬ ದೃಢ ನಿರ್ಧಾರಕ್ಕೆ ಬಂದು ಕಾರ್ಯೋನ್ಮುಖರಾಗಿಯೇ ಬಿಟ್ಟೆವು.

ತಂಡದ ನಾಯಕತ್ವವನ್ನು ವಹಿಸಿದ್ದ ಮಿತ್ರ ಆನಂದ್‌ಕುಮಾರ್ ತಾನೇ ಮೊದಲು ನಿರಾಧಾರವಾಗಿ ಕೆಳಗಿಳಿದು ಮುಂದೆ ಹೋಗಿ ಮುಂದಿನ ಮಾರ್ಗವನ್ನು ಸರ್ವೆ ಮಾಡಿ ಬಂದು, ಮತ್ತೆ ಮೇಲೇರಿ ಹಗ್ಗದ ನೆರವಿನಿಂದ ಒಬ್ಬೊಬ್ಬರನ್ನೇ ಕೆಳಗಿಳಿಸತೊಡಗಿದ. ನಮ್ಮಲ್ಲಿ ಎಲ್ಲರಿಗಿಂತ ಸ್ವಲ್ಪ ಸ್ಥೂಲಕಾಯನಾದ ಸತೀಶನನ್ನು ಕೆಳಗಿಳಿಸುವಾಗ ಮುನ್ನೆಚ್ಚರಿಕೆ ಕ್ರಮವಾಗಿ ಇಬ್ಬರು ಹಗ್ಗವನ್ನು ಹಿಡಿದುಕೊಂಡೆವು. ಆದಾಗ್ಯೂ ಆತ ಗಾಯಗೊಳ್ಳುವುದನ್ನು ತಪ್ಪಿಸಲಾಗಲಿಲ್ಲ. ಕೈ ಹಿಡಿಕೆ ಜಾರಿ ಅವನ ಬುರುಡೆ ಬಂಡೆಯ ಅಂಚಿಗೆ ತಾಗಿ ಚಳ್ಳನೆ ರಕ್ತ ಚಿಮ್ಮಿತು! ಆಗಲೇ ಕೆಳಗಿಳಿದಿದ್ದವರು ಕೂಡಲೇ ಅವನಿಗೆ ಪ್ರಥಮ ಚಿಕಿತ್ಸೆ ನೀಡಿ ಶುಶ್ರೂಷೆ ಮಾಡಿದರು. ನಮ್ಮಲ್ಲಿ ಎಲ್ಲರಿಗಿಂತ ಚುರುಕಾಗಿ ಅತೀ ಆತ್ಮವಿಶ್ವಾಸದಿಂದ ಚಂಗ ಚಂಗನೆ ನೆಗೆಯುತ್ತಿದ್ದ ಪ್ರವೀಣ್ ಕೆಳಗಿಳಿದು ಬಂಡೆಯ ಅಂಚಿನಲ್ಲಿ ಚಕಚಕನೆ ಪಕ್ಕಕ್ಕೆ ಸರಿಯುತ್ತಾ ಇನ್ನೇನು ಸುರಕ್ಷಿತ ಸ್ಥಳಕ್ಕೆ ಜಿಗಿಯಬೇಕೆನ್ನುವಷ್ಟರಲ್ಲಿ ಸಮತೋಲನ ತಪ್ಪಿ ಮುಗ್ಗರಿಸಿದ. ಮುಂದಾಗಬಹುದಾಗಿದ್ದ ಅನಾಹುತವನ್ನು [illegible] ಅನಿರೀಕ್ಷಿತ ಆಘಾತದಿಂದ ಚೇತರಿಸಿಕೊಳ್ಳಲು ಹತ್ತು ನಿಮಿಷ ತೆಗೆದುಕೊಂಡು, ಎಲ್ಲರಿಗಿಂತಲೂ ಮುಂದೆ ಹೋಗಿ ಶೂರತನವನ್ನು ಪ್ರದರ್ಶಿಸುತ್ತಿದ್ದವನು ಈಗ ಪಳಗಿದ ಪ್ರಾಣಿಯಂತೆ ಎಲ್ಲರನ್ನೂ ಮೌನವಾಗಿ ಹಿಂಬಾಲಿಸತೊಡಗಿದ. ಆದರೆ, ಆ ಸನ್ನಿವೇಶ ನಮ್ಮೆಲ್ಲರ ಎದೆ ಬಡಿತವನ್ನೂ ಕ್ಷಣಕಾಲ ಸ್ತಬ್ಧಗೊಳಿಸಿತು. ಯಾರಿಗೂ ಹೆಚ್ಚು ಮಾತನಾಡುವ ಉಲ್ಲಾಸವಾಗಲಿ, ಉತ್ಸಾಹವಾಗಲಿ ಇರಲಿಲ್ಲ. ಆದಷ್ಟು ಶೀಘ್ರವಾಗಿ, ಸುರಕ್ಷಿತವಾಗಿ ಶಿಬಿರ ಸೇರುವ ಧಾವಂತ ಎಲ್ಲರಲ್ಲೂ ಹೆಚ್ಚಾಯಿತು. ಅಪಾಯದ ಅಂಚಿನಿಂದ ನೂರಡಿ ಕ್ರಮಿಸುತ್ತಿದ್ದಂತೆ ಎರಡೂ ಕಡೆ ತೆರವಿರುವ ಗುಹೆಯೊಂದು ಸಿಕ್ಕಿತು. ಅದರ ಪೂರ್ವದ ಬಾಯಿ ಕಿರಿದಾಗಿದ್ದು, ವಕ್ರವಾಗಿ ಹಾಗೂ ದೊಡ್ಡದಾಗುತ್ತಾ ಮುಂದುವರಿದು ಪಶ್ಚಿಮದ, ಅಂದರೆ ಶಿಬಿರವಿದ್ದ ಕಡೆಗಿನ, ದೃಶ್ಯಗಳು ಗೋಚರಿಸುತ್ತಿದ್ದವು. ಅತ್ತಲ ದ್ವಾರದಲ್ಲಿ ಬೆಳೆದಿದ್ದ ಮರಕ್ಕೆ ಹಗ್ಗವನ್ನು ಕಟ್ಟಿ ಸುಮಾರು ಐವತ್ತು ಅರವತ್ತು ಅಡಿ ಕೆಳಗಿಳಿದರೆ ಅಲ್ಲಿಂದ ಶಿಬಿರವು ಕೇವಲ ೧೫-೨೦ ನಿಮಿಷಗಳ ನಡಿಗೆಯ ದೂರದಲ್ಲಿತ್ತು. ಪೂರ್ವದ ದ್ವಾರದಿಂದ ಒಬ್ಬೊಬ್ಬರೇ ಎಂಟಡಿ ಕೆಳಗಿಳಿಯುವಾಗ ಮಳೆ ನೀರಿನ ವಸ್ತ್ರಿಯಿಂದ ಬಲವನ್ನು ಕಳೆದುಕೊಂಡಿದ್ದ ಬಂಡೆಯ ಮೇಲಿನ ಹಿಡಿಕೆಯನ್ನು ಹಿಡಿದು ಇಳಿಯುವಾಗ ಅದು ಕಿತ್ತು ಬಂದುದರ ಪರಿಣಾಮವಾಗಿ (ಇಲ್ಲಿನ ಬಂಡೆಗಳೆಲ್ಲವೂ ಹಿಟ್ಟು ಕಲ್ಲಿನವೇ) ನಾನು ಧೊಪ್ಪನೆ ಕೆಳಗೆ ಬಿದ್ದೆ. ಆದರೆ, ಕೆಳಗೆ ಹುಲ್ಲು ಮತ್ತು ಮೆತ್ತನೆಯ ಮಣ್ಣಿದ್ದರಿಂದ ಏನೂ ಆಗಲಿಲ್ಲ. ನಂತರ ಪಶ್ಚಿಮ ದ್ವಾರದ ಮರಕ್ಕೆ ಹಗ್ಗವನ್ನು ಕಟ್ಟಿ ಒಬ್ಬೊಬ್ಬರಾಗಿ ಇನ್ನೇನು ಕೆಳಗಿಳಿಯಬೇಕೆಂಬ ಸನ್ನಾಹದಲ್ಲಿರುವಾಗ ಇದ್ದಕ್ಕಿದ್ದಂತೆ ಗುಹೆಯ ಚಾಚು ಭಾಗದ ಕೆಳಗೆ ಗೂಡು ಕಟ್ಟಿದ್ದ ಹೆಜ್ಜೇನುಗಳು 'ಗುಂಯ್' ಗುಟ್ಟುತ್ತಾ ನಮ್ಮ ಮೇಲೆರಗಿದವು! ಅಂತಹ ಒಂದು ಸನ್ನಿವೇಶ ಸೃಷ್ಟಿಯಾಗಬಹುದೆಂಬ ಕಲ್ಪನೆಯೂ ಇಲ್ಲದ ನಾವು ಅವುಗಳ ಅನಿರೀಕ್ಷಿತ ಆಗಮನ ಮತ್ತು ಧಾಳಿಯಿಂದ ಕಂಗೆಟ್ಟರೂ ವಿವೇಕ ಶೂನ್ಯರಾಗದೆ ಕೆಳಗಿಳಿಯುವ ಸಾಹಸವನ್ನು ಕೈ ಬಿಟ್ಟು, ಮುಖ ಕೆಳಗೆ ಮಾಡಿ ನಾವುಗಳು ಧರಿಸಿದ್ದ ಜಾಕೆಟ್ ಮತ್ತು ಟ್ರಾಕ್‌ಸೂಟ್‌ಗಳಿಂದ ಮುಖವನ್ನು ಮುಚ್ಚಿಕೊಂಡು ಸದ್ದು ಮಾಡದೆ ಶವಗಳಂತೆ ಬಿದ್ದುಕೊಂಡೆವು. ಆ ಹೆಜ್ಜೇನುಗಳಾದರೂ 'ಗುಂಯ್' ಗರೆಯುತ್ತಾ ನಮ್ಮ ಸುತ್ತ ಸುತ್ತಾಡಿ ಸ್ವಲ್ಪವೂ ಮಿಸುಕಾಡದಿದ್ದ ನಾವುಗಳು [illegible]ಮೋ ನಿರುಪದ್ರವಿ ವಸ್ತುಗಳೆಂದು ಹಿಂದಿರುಗಿ ಗೂಡು ಸೇರಿದಾಗ ನೆಮ್ಮದಿಯ ನಿಟ್ಟುಸಿರು [illegible]

# ಬದುಕಿಗೊಂದು ಸವಾಲು

'ಮಾತು ಮನೆ ಕೆಡಿಸಿತು....' ಎಂಬ ಲೋಕಾನು ಭವದ ಮಾತು ಹಲವರ ಜೀವನದಲ್ಲಿ ನಿಜವಾಗಿರ ಬಹುದು. ಆದರೆ ಕುಮುದಾವತಿಯ ಜೀವನದಲ್ಲಿ ಹಾಗಾಗಲಿಲ್ಲ. ಆಕೆಯ ಬದುಕನ್ನು ಕುರಿತು ಸ್ನೇಹಿತೆಯೊಬ್ಬಳ ತಾಯಿ ಆಡಿದ ವ್ಯಂಗ್ಯದ ಮಾತು ಮನೆ ಕಟ್ಟಿಕೊಟ್ಟಿತು, ಮನ ಕೆರಳಿಸಿತು, ಬದುಕಿನ ದಿಕ್ಕನ್ನೇ ಬದಲಿಸಿತು. ಕುಮುದಾವತಿ ಹುಟ್ಟಿದ್ದು ಕೃಷ್ಣರಾಜ ಪೇಟೆಯಲ್ಲಾದರೂ, ಬೆಳೆದದ್ದು ಚಿತ್ರದುರ್ಗ ಜಿಲ್ಲೆಯ ಹಿರಿಯೂರಿನಲ್ಲಿ. ತಂದೆ ಸರ್ಕಾರಿ ನೌಕರರು. ಮನೆತುಂಬ ಮಕ್ಕಳು. ಆರು ಜನ ಹೆಣ್ಣು ಮಕ್ಕಳಿದ್ದ ದೊಡ್ಡ ಸಂಸಾರ. ಹದಿನಾಲ್ಕರ ಕಿಶೋರಿ ಕುಮುದಾವತಿಗೆ ಮದುವೆ ಮಾಡಿದರು. ಮದುವೆ, ಗಂಡ ಎಂದರೇನೆಂಬುದನ್ನೇ ಇನ್ನೂ ಸರಿಯಾಗಿ ಅರಿಯದ ಕುಮುದ ಕಕ್ಕಾಬಿಕ್ಕಿ ಯಾಗಿದ್ದಳು. ಮದುವೆಯಾದ ಮೂರು ತಿಂಗಳಲ್ಲೇ ಗಂಡ ಅಕಾಲ ಮರಣಕ್ಕೆ ಈಡಾದ. ಹೆಣದ ಮುಂದೆ ಅಳುತ್ತಿರುವ ವರನ್ನೆಲ್ಲಾ ನೋಡಿ ಈ ಕಿಶೋರಿ ನಗುತ್ತಿದ್ದಳು. ಆದರೆ ಕ್ರೂರ ಸಮಾಜ, ನೆರೆಹೊರೆ ಅವಳ ನಗುವನ್ನು ಬಹುಬೇಗ ಹಿಂಗಿಸಿತು. ವೈಧವ್ಯದ ಕಹಿ ಯನ್ನು ಅನುಭವಿಸುವಂತೆ ಮಾಡಿತು.

ಹಿತವಂತರೆನಿಸಿಕೊಂಡವರೇ ಕೆಲವರು ಆಡುತ್ತಿದ್ದ ಮಾತು ಗಳಿಂದಲೇ ವೈಧವ್ಯದ ಕಠೋರತೆಯನ್ನು ಅರಿತ ಕುಮುದಾವತಿಗೆ ತನ್ನನ್ನು ನಿಕೃಷ್ಟ ವಾಗಿ ಕಾಣುತ್ತಿದ್ದ ಸಮಾಜದ ಬಗ್ಗೆ ಜುಗುಪ್ಸೆ; ಶಾಲೆಗೆ ಹೋಗುತ್ತಿದ್ದ ಮಕ್ಕಳನ್ನು ಕಂಡು ತಾನೂ ಓದಬೇಕೆಂಬ ಹಂಬಲ. ಆ ಸಮಯದಲ್ಲೇ ಗೆಳತಿಯ ತಾಯಿ, 'ಗಂಡ ಸತ್ತವಳು ಸುಮ್ಮನೆ ಮನೆಯಲ್ಲಿ ಕೂಡೋದಕ್ಕೆ ಆಗೋದಿಲ್ವಾ ? ಇವಳೇನು ಓದಿ ದೊಡ್ಡ ಲೆಕ್ಚರರ್ ಆಗ್ತಾಳಾ ?' ಎಂದು ಆಡಿದ ವ್ಯಂಗ್ಯ ಕುಮುದಾವತಿಯ ಜೀವನದ ದಿಕ್ಕನ್ನೇ ಬದಲಿಸಿತು. ತಾನು ಓದಿ ಲೆಕ್ಚರರ್ ಆಗಲೇಬೇಕೆಂಬ ಛಲ ಬೇರೂರಿತು. ಕಷ್ಟಪಟ್ಟು ಓದಿ ಬಿ.ಎ. ಪದವೀಧರೆಯಾದರು. ಆದರೆ ಲೆಕ್ಚರರ್ ಆಗಲು ಅಷ್ಟೇ ವಿದ್ಯೆ ಸಾಲದು ಎಂಬ ಅರಿವು ಅವರನ್ನು ಎಚ್ಚರಿಸಿತು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡದಲ್ಲಿ ಸ್ನಾತಕೋತ್ತರ ಪದವೀಧರೆಯಾಗಿ ತಮ್ಮ ಗುರಿಸಾಧನೆಗಾಗಿ [illegible]ತಗಿದರು. ಹಿರಿಯೂರು ತಾಲ್ಲೂಕಿನ [illegible]ಗೊಂಡನಹಳ್ಳಿಯ ಖಾಸಗಿ ಕಾಲೇಜಿನಲ್ಲಿ ಲೆಕ್ಚರರ್ ಆಗಿ ಕೆಲಸಕ್ಕೆ ಸೇರಿದರು. ಸಾಧನೆಯ ಗುರಿ ತಲುಪಿದ ಸಂತಸ, ಸಂಭ್ರಮದಲ್ಲೇ ತಮ್ಮ ಬದುಕಿನ ಕರಾಳ ದಿನಗಳಲ್ಲಿ ವ್ಯಂಗ್ಯವಾಡಿದ್ದ ಮಹಿಳೆಯ ಮನೆಗೆ ಹೋಗಿ ಸಿಹಿ ಹಂಚಿದರು. ತಾವೂ ಬದುಕಿನ ಸಿಹಿಯನ್ನು ಉಂಡರು. ಸಂಬಳವನ್ನೇ ಸರಿಯಾಗಿ ನೀಡದ ಆ ಕಾಲೇಜಿಂದ ಹೊರಬಂದ ಕುಮುದ ಮುಂದೆ ಪಾಂಡವಪುರ, ಕೃಷ್ಣರಾಜಪೇಟೆಯಲ್ಲಿ ಉಪನ್ಯಾಸಕಿಯಾಗಿ ಸೇವೆ ಮುಂದುವರಿಸಿದರು. ಆದರೆ ಒಂಟಿ ಹೆಂಗಸಿನ ಬದುಕಿನ ಬವಣೆ ತಿಳಿದು ಆಡಳಿತ ವರ್ಗದವರು ನೀಡಿದ ಕಿರುಕುಳದ ಜೊತೆಗೆ, ಸಹಾಯಹಸ್ತ ನೀಡುವ ನೆಪದಲ್ಲಿ ಶೋಷಿಸಲು ಪ್ರಯತ್ನಿಸುತ್ತಿದ್ದ ಕುತಂತ್ರಿಗಳನ್ನು ಎದುರಿಸಬೇಕಾಯಿತು. ನೋವುಂಡ ಬದುಕು ಇವೆಲ್ಲವನ್ನೂ ಧೈರ್ಯದಿಂದ ಎದುರಿಸುವ ರೀತಿಯನ್ನು ಕಲಿಸಿತ್ತು. ಆದರೆ ಅಲ್ಲಿನ ಆರ್ಥಿಕ ಪರಿಸ್ಥಿತಿ ಅವರನ್ನು ಕೆಲಸದಲ್ಲಿ ಮುಂದುವರೆಯಲು ಅಸಾಧ್ಯವಾಗಿಸಿತು. ಮುಂದೆ ತಿಪಟೂರಿನ ಕಲ್ಪತರು ಕಾಲೇಜಿನಲ್ಲಿ ಉಪನ್ಯಾಸಕಿಯಾಗಿ ಕೆಲಕಾಲ ದುಡಿದರು. ತೀವ್ರ ಅನಾರೋಗ್ಯದಿಂದಾಗಿ ಕುಮುದಾವತಿ ಆ ಊರನ್ನೂ ಬಿಟ್ಟರು. ನೌಕರಿಗಾಗಿ ಅಲೆದಾಟ ಸಾಕೆನಿಸಿ ಬಾಲ್ಯದಲ್ಲಿ ಬೆಳೆದು ವಿದ್ಯಾಭ್ಯಾಸ ಮಾಡಿದ್ದ ಹಿರಿಯೂರಿಗೆ ಮತ್ತೆ ಬಂದರು. ಆಸ್ತಿಗೆ ಸಂಬಂಧಿಸಿದ ಕುಟುಂಬ ಕಲಹದಿಂದಾಗಿ ಒಡಹುಟ್ಟಿದವರಿಗೂ ಅವರು ಬೇಡವಾದರು. ಗೆಳತಿಯೊಬ್ಬಳ ಸಲಹೆಯಂತೆ ರುಡ್‌ಸೆಟ್ ಸಂಸ್ಥೆಯತ್ತ ಹೋದರು. ಚಿತ್ರದುರ್ಗದಲ್ಲಿದ್ದ ಈ ಸಂಸ್ಥೆಯ ಮಾರ್ಗದರ್ಶನದ ಫಲವಾಗಿ ಉಜಿರೆಯ ರುಡ್‌ಸೆಟ್‌ನಲ್ಲಿ ಬಟ್ಟೆಗಳ ಮೇಲೆ ಕಲೆ ಬಿಡಿಸುವ ಕೌಶಲ್ಯ ಪಡೆದರು.



*ಶ್ರೀಮತಿ ಕುಮುದಾ ಹತ್ತಾರು ಪ್ರಶಸ್ತಿಗಳನ್ನು ಪಡೆದಿದ್ದಾರೆ*

**ಚಿತ್ತಾರದ ಬದುಕು**

ಸೀಮೆಸುಣ್ಣ ಹಿಡಿದ ಕೈ, ಚಿತ್ರ ಮೂಡಿಸುವ ಕುಂಚ ಹಿಡಿಯಿತು. ಸೀರೆಗಳ ಮೇಲೆ ಬಣ್ಣ ಬಣ್ಣದ ಚಿತ್ತಾರಗಳನ್ನು ಬಿಡಿಸಿ, ಆಕರ್ಷಕವಾಗಿ ಕಾಣುವಂತೆ ಮಾಡಿ ಮಾರುವುದು ಅವರ ದಿನನಿತ್ಯದ ಕೆಲಸವಾಯಿತು. ಜೊತೆಗೆ ಟೈ ಅಂಡ್ ಡೈ, ಬಾಟಿಕ್ ಪ್ರಿಂಟ್ಸ್ ಇತ್ಯಾದಿ ವಿವಿಧ ರೀತಿಯ ವಿನ್ಯಾಸಗಳಲ್ಲಿ ನೈಪುಣ್ಯತೆಯನ್ನು ಸಾಧಿಸಿದರು. ಯಾವ ಪದಾರ್ಥವೂ ಅವರಿಗೆ ನಿರುಪಯುಕ್ತವಲ್ಲ. ಇವರ ಮನೆಯಲ್ಲಿ ಹಳೆಯ ಪೊರಕೆಕಡ್ಡಿ, ಗೀರಿ ಆರಿದ ಬೆಂಕಿಕಡ್ಡಿ, ಎಸೆದ ಕಾಗದಗಳ ಚೂರು, ಸುಲಿದ ಏಲಕ್ಕಿಯ ಸಿಪ್ಪೆ ಹೀಗೆ ಎಲ್ಲಕ್ಕೂ ಮಹತ್ವವಿದೆ. ಕಲಾವಂತಿಕೆಯೇ ಮೈದುಂಬಿ ಅವುಗಳು ಮೆರೆಯುತ್ತವೆ. ಹಳೆಯ ಸೀರೆಗಳಿಂದ ಮಾಡಿದ ಕಾಲೊರಸು, ಕಡ್ಡಿಗಳಿಂದ ಮಾಡಿದ ಸಿಂಗಾರದ ಗೊಂಬೆಗಳು, ಬೆಂಡು, ತಗಡು, ಬಣ್ಣದ ಕಾಗದ ಇತ್ಯಾದಿಗಳಿಂದ ತಯಾರಿಸಿದ ಕಲಾತ್ಮಕ ವಸ್ತುಗಳು ಇವರ ಜಾಣ್ಮೆಯ ದ್ಯೋತಕಗಳಂತಿವೆ.

ಪ್ರಾರಂಭದ ದಿನಗಳಲ್ಲಿ ತಾವು ಉತ್ಪಾದಿಸಿದ ವಸ್ತುಗಳ ಮಾರುಕಟ್ಟೆಯ ಸಮಸ್ಯೆಯನ್ನು ಎದುರಿಸಬೇಕಾಯಿತು. ಮೈಸೂರಿನ ಅಂಗಡಂಗಡಿಗೂ ಅಲೆದು ಮಾರಾಟವನ್ನು ಸ್ಥಿರಪಡಿಸಿಕೊಂಡ ಶ್ರೇಯಸ್ಸು ಅವರದು. ಈಗಂತೂ ಅಂಗಡಿಯವರೇ ಅವರ ಬಾಗಿಲಿಗೆ ಬಂದು ಬೇಡಿಕೆ ಸಲ್ಲಿಸುತ್ತಾರೆ.

ಆರ್ಥಿಕವಾಗಿ ಸ್ವಾವಲಂಬಿ ಯಾಗಿರುವ ಕುಮುದಾ ಅವರಿಗೆ ಈ ಕಲಾವೃತ್ತಿ ಸಂತೃಪ್ತಿ ನೀಡಿದೆ. ತನ್ನಲ್ಲಿ ಅಡಗಿರುವ ಕಲೆಯನ್ನು ಗುರುತಿಸಿ ಉತ್ತೇಜಿಸಿದ 'ರುಡ್ ಸೆಟ್' ಸಂಸ್ಥೆಗೆ ಮತ್ತು ತನ್ನ ಕಷ್ಟಕಾಲದಲ್ಲಿ ತನ್ನನ್ನು ಅರ್ಥಮಾಡಿಕೊಂಡು, ನೆರವಿಗೆ ಬಂದ ಸ್ನೇಹಿತರಿಗೆ ತಾನು ಚಿರಋಣಿ ಎನ್ನುತ್ತಾರೆ ಅವರು. ನಮ್ಮ ಸಮಾಜದಲ್ಲಿ ಹೆಣ್ಣನ್ನು ಇನ್ನೂ ಹಲವಾರು ಚೌಕಟ್ಟುಗಳೊಳಗೇ ನೋಡುವ ಸಂಕುಚಿತ ಮನೋಭಾವದ ಜನರಿದ್ದಾರೆ. ಹೆಣ್ಣಿನ ಶೋಷಣೆಯಂತೂ ನಿರಂತರವಾಗಿ ನಡೆದೇ ಇದೆ. ''ಎಂತಹ ಸಂದರ್ಭದಲ್ಲೂ ಮಹಿಳೆ ಧೈರ್ಯ ಕೆಡಬಾರದು. ಯಾವ ಅನ್ಯಾಯಗಳಿಗೂ ಬಗ್ಗಬಾರದು. ಮಹಿಳೆ ಸ್ವಾವಲಂಬಿ ಯಾಗಬೇಕಾದ ಅನಿವಾರ್ಯತೆ ಇಂದು ತುಂಬಾ ಇದೆ. ಸ್ವ-ಉದ್ಯೋಗ ಎಷ್ಟೋ ಮಟ್ಟಿಗೆ ಮಹಿಳೆಯ ಆರ್ಥಿಕ ಸ್ಥಿತಿಯನ್ನು ಸುಧಾರಿಸಿ, ಮನಸ್ಸಿಗೆ ನೆಮ್ಮದಿ ತರುತ್ತದೆ. ಆತ್ಮ ಗೌರವವನ್ನು ಹೆಚ್ಚಿಸುತ್ತದೆ,'' ಎನ್ನುವ ಕುಮುದಾವತಿ ತಾನಿಂದು ಪರಮಸುಖಿ ಎನ್ನುತ್ತಾರೆ. ಅವರ ಬದುಕು ಹಸನಾದ ಹಿನ್ನೆಲೆಯಲ್ಲಿ ''ನೀವೇಕೆ ಮರು ಮದುವೆಯಾಗಬಾರದು?'' ಎಂದು ಪ್ರಶ್ನಿಸಿದಾಗ ಬಂದ ಉತ್ತರ : ಯಾಕೋ ಮರು ಮದುವೆಯ ಬಗ್ಗೆ ಮನಸ್ಸು ಒಪ್ಪುತ್ತಿಲ್ಲ. ಆದರೆ ಯಾವುದಾದರೂ ಅನಾಥ ಮಗುವಿಗೆ ಆಸರೆ ನೀಡಬೇಕೆಂಬ ಆಸೆ ಇದೆ.

ಡಾ।। ವಿಜಯ ಹರನ್
ಮೈಸೂರು

# ಉಪಸಂಸ್ಕೃತಿಗಳ ಸಂಘಟನೆ : 'ಹಗಲುವೇಷ'ದ ಆಶಯ

**ಡಾ॥ ರಂಗರಾಜ ವನದುರ್ಗ**

'ಹಗಲುವೇಷ' ಬರಗೂರು ರಾಮಚಂದ್ರಪ್ಪನವರ ಬಹುದಿನಗಳ ಕನಸು. ಕಳೆದ ಮೂರು ದಶಕಗಳ ಹೋರಾಟ, ಓದು, ವಿಚಾರಗಳ ಫಲವಿದು. ಏಕೆಂದರೆ ಇದರ ಆಶಯವೇ ಅಂಥದ್ದು. ಆದ್ದರಿಂದ ಇದು ಕಲಾತ್ಮಕ- ವಾಣಿಜ್ಯಾತ್ಮಕಗಳ ಗಡಿಗೆರೆ ಮೀರಿ ಗಮನ ಸೆಳೆದ ಚಿತ್ರ.

ಹಗಲುವೇಷದ ಮುಖ್ಯ ಆಶಯ 'ರಾತ್ರಿವೇಷಗಳ' ಅನಾವರಣ. ಕಂದಾಯದೊಂದಿಗೆ ನೇರವಾಗಿ ಮುಖಾ-ಮುಖಿಗಿಳಿವ ಕಲೆಯೇ ಇಲ್ಲಿಯ ಕಥಾವಸ್ತು. 'ಕಂದಾಯ' ಮತ್ತು 'ಕಲೆ' ಒಂದೆಡೆ ಸೇರದ ವಿಭಿನ್ನ ಧ್ರುವಗಳು. ಕಾರಣ, ಪ್ರಭುವರ್ಗ ಪ್ರತಿನಿಧಿಸುವ ಕಂದಾಯ, ಪ್ರಜಾವರ್ಗ ಪ್ರೀತಿಸುವ ಕಲೆಗಳು ಸಹಜವಾಗಿಯೇ ಈ ಚಿತ್ರದಲ್ಲಿ ಜಟಾಪಟಿಗಿಳಿದಿವೆ. ಕಲೆಯನ್ನು ಖರೀದಿಸುವ ಶಕ್ತಿ ಕಂದಾಯಕ್ಕಿದೆ ಎನ್ನುವುದೇ ಇಲ್ಲಿಯ ಸೊಕ್ಕಿನ ಮಾತೆಂದು ಚಿತ್ರ ಕೆರಳಿ ಕೇಳುತ್ತದೆ.

ಇಲ್ಲಿಯ ಪ್ರಧಾನ ಕಥನ ಸ್ವಾತಂತ್ರ್ಯ ಪೂರ್ವದ್ದು. ಬಡ ಭಾರತೀಯ ಬದುಕಿನ ಮೇಲೆ ಕರಭಾರ ಹೇರಿದ ಪರಂಗಿ ಸರ್ಕಾರ, ಇಂತಹ ಸರ್ಕಾರಕ್ಕೆ ಹಣೆ ಹೊತ್ತಿ ಅಡ್ಡಬಿದ್ದ ಪಟೇಲ- ಶಾನುಭೋಗರ ನಿರ್ಧಾರಗಳು ಚಿತ್ರವನ್ನು ಆರಂಭಗೊಳಿಸುತ್ತವೆ. ಮುಂದೆ ಉರುಳುವ ಕಥೆಯಂತೂ ನಮ್ಮ-ನಿಮ್ಮ ಮಧ್ಯದಲ್ಲಿಯೇ ಸಾಗಿ ಬರುತ್ತದೆ; ಹತ್ತಿರವೂ ಆಗುತ್ತದೆ. ಇದುವೆ ಬರಗೂರು ಬಳಸುವ ಕಥಾತಂತ್ರ.

ತಮ್ಮ ದೌಲತ್ತಿನ ಉಳಿವಿಗಾಗಿ ಪರಂಗಿ ಸರ್ಕಾರದ ಪಾದವನ್ನೆ ನೆಕ್ಕಿದ ಮೊದಲ ನಮ್ಮ ನಾಯಿಗಳೆಂದರೆ ಪಟೇಲ ಮತ್ತು ಶಾನುಭೋಗ. ಇಂಗ್ಲಿಷನಿಗೆ ಹತ್ತಿರವಾಗಲು ಶಾನುಭೋಗ ಇಂಗ್ಲಿಷ್ ಭಾಷೆಯನ್ನೇ ಕಲಿತ. ಅದೇ ಇಂಗ್ಲಿಷನನ್ನು ಬಲಪಡಿಸಲು ಪಟೇಲ ಸೈನ್ಯವನ್ನೇ ಕಟ್ಟಿದ. ಹೀಗೆ ಒಂದು ಕಡೆಯಿಂದ ಬೌದ್ಧಿಕ ಶಕ್ತಿ, ಇನ್ನೊಂದು ಕಡೆಯಿಂದ ಭೌತಿಕ ಶಕ್ತಿಯನ್ನೇ ಪರದೇಶಕ್ಕೆ ಮಾರಿದ ಸ್ಥಳೀಯ ಪ್ರಭುತ್ವಗಳ ಕೃತ್ಯ ಚಿತ್ರದಲ್ಲಿ ಎಳೆ ಎಳೆಯಾಗಿ ಬಿಡಿಸಲ್ಪಟ್ಟಿದೆ. ಇದನ್ನೇ ಬೇಕಾದರೆ ಆಳರಸ, ಊರರಸ ಮತ್ತು ದೇವರಸರ ಜಂಟಿ ಕಾರ್ಯಾಚರಣೆಯೆನ್ನಬಹುದು. ಇಲ್ಲಿಯೇ ಬರಗೂರರು ಗಮನಿಸಿದ ಬಹುಮುಖ್ಯ ಸಂಗತಿ ಎಂದರೆ, ಇವರ ಷಡ್ಯಂತ್ರ, ಸ್ವಾತಂತ್ರ್ಯ ಪೂರ್ವದಲ್ಲಿಯೇ ಮಾತ್ರ ಇರಲಿಲ್ಲ; ಅದು ಇಂದೂ ಇದೆ ಎನ್ನುವುದು. ಬ್ರಿಟಿಷ್ ಅಧಿಕಾರಿ ಇಲ್ಲಿ ಕೇವಲ ಸಾಂಕೇತಿಕ ಬಿಳಿಯ ಮಾತ್ರ. ಇನ್ನೊಂದು ರೀತಿಯ ''ಬಿಳಿಯ ಭಾರತೀಯ'' ನನ್ನು ಅವನಲ್ಲಿ ಕಾಣುತ್ತೇವೆ ಅಷ್ಟೆ.

ಕರನಿರಾಕರಣೆ ಚಳವಳಿಗೆ ಮುಖ್ಯ ಭೂಮಿಕೆ ಸಿದ್ಧಗೊಂಡದ್ದೇ ಅಲೆಮಾರಿ ವೇಷಗಾರರಿಂದ. ಇವರನ್ನು ಸಿದ್ಧಗೊಳಿಸಿದ ಶಕ್ತಿ ಓರ್ವ ಶಿಕ್ಷಕಿ. ಉಪಸಂಸ್ಕೃತಿಗಳನ್ನು ಸಂಘಟಿಸುವ ಮತ್ತು ಮೇಲ್ವರ್ಗದ ವಿರುದ್ಧ ಅವುಗಳನ್ನು ಮುಖಾ-ಮುಖಿಗೆ ಇಳಿಸುವ ಶಕ್ತಿ ಶಿಕ್ಷಣಕ್ಕೆ ಮಾತ್ರ ಇರುವುದನ್ನು ಕಥೆ ಧ್ವನಿಸುತ್ತದೆ.

ಶಿವ ಪಾರ್ವತಿ ವೇಷ, ಕೃಷ್ಣ ದ್ರೌಪದಿಯ ವೇಷ, ಹುಲಿ ವೇಷ ಮತ್ತು ಕಳ್ಳನ ವೇಷಗಳನ್ನು ಪ್ರದರ್ಶಿಸುವ ವೇಷಗಾರರ ಬದುಕು ಕೇವಲ ಬಣ್ಣದ ಬದುಕು. ಇಂಥ ಬದುಕಿನಲ್ಲೇ ಹತ್ತಾರು ಕನಸು ಹಡೆಯುವುದೇ ಅವರ ಚರಿತ್ರೆ. ವೇಷ ವೇನೋ ಶಿವ ಪಾರ್ವತಿಯರದು; ಆದರೆ ಅವರ ನಿಜ ವಾಸ ಮಾತ್ರ ಅದೇ ಊರಾಚೆಯ ಹಾಳು ದೇಗುಲ. ಆದರೂ, ರಾತ್ರಿವೇಷಗಳನ್ನು ಅನಾವರಣಗೊಳಿಸುವ, ಕರಾಳ ಕೃತ್ಯ ಗಳನ್ನು ಖಂಡಿಸುವ, ಅಸಮಾನತೆಯನ್ನು ವಿರೋಧಿಸುವ, ದರ್ಪವನ್ನು ಧಿಕ್ಕರಿಸುವ ಶಕ್ತಿ ಕಲೆಗಿದೆ - ಎಂಬುದೇ ಇಲ್ಲಿಯ ಪ್ರಧಾನ ಆಸೆ. ಕಲೆ ಕೆರಳಿದರೆ ಪರಂಗಿ ಸರ್ಕಾರವೇನು, ಇವತ್ತಿನ ಸರ್ಕಾರಗಳನ್ನೂ ಉರುಳಿಸಬಲ್ಲದು. -ಇಂಥ ಕಿಚ್ಚಿನ ಕಲ್ಪನೆಗಳು ಬರಗೂರರಂಥವರ ಬಂಡಾಯಕ್ಕೆ ಮಾತ್ರ



*ಹಗಲುವೇಷದ ಒಂದು ದೃಶ್ಯ*

ಸಾಧ್ಯವೇನೊ. ಹಾಗಾಗಿ, ಕಲೆಯ ಕೈಗೆ ಖಡ್ಗವನ್ನು, ಬಣ್ಣದ ಬದುಕಿಗೆ ಬಂದೂಕನ್ನು ಇವರು ನೀಡಬಲ್ಲರು. ನಿಜವಾದ ಜೀವಪರ ನೆಲೆಗಳು (ಸೆಲೆಗಳು), ಡೊಳ್ಳು, ಹಲಗೆ, ಕೊಂಬು, ಕಹಳೆ, ಭೇರಿ, ನಗಾರಿ, ತಾಳ, ತಂಬೂರಿ, ಪೇಟಿ, ತಬಲಾ, ಬಾಣಿಬಾರಕೋಲು, ಉಳಿಮೇಳಿ, ಕುರುಪಿ ಕುಡ ಗೋಲುಗಳಲ್ಲಿರುವುದನ್ನು ಬರಗೂರರು ಸ್ಪಷ್ಟವಾಗಿ ಗುರುತಿಸಿದ್ದಾರೆ. ಇಂಥ ಹತ್ತಾರು ಉಪ ಸಂಸ್ಕೃತಿಗಳು ಒಂದೇ ಧ್ವಜದಡಿ ಸೇರಬೇಕೆನ್ನುವ ತುರ್ತು ನಿರ್ದೇಶಕರಿಗಿದೆ. ಇವು ಒಂದಾದರೆ ಅಕ್ಷರ ಲೋಕವೇನು, ಅಧಿಕಾರ ಲೋಕವನ್ನೇ ಅದುಮಿಡಬಹುದೆನ್ನುತಾರೆ.

ಹೀಗೆ, ಈ ರೀತಿಯ ಆಶಯ ಹೊತ್ತ 'ಹಗಲುವೇಷ' ನಮ್ಮೊಂದಿಗೆ ಅಷ್ಟ ಮುಖಗಳಿಂದಲೂ ಮಾತನಾಡುತ್ತದೆ. ಹರಿಹರ ತನ್ನ 'ಗಿರಿಜಾ ಕಲ್ಯಾಣ'ದ ಮೂಲಕ ಮಹಿಳೆಗೆ ಮೊದಲ ಕಥಾನಾಯಕಿ ಪಾತ್ರ ಕೊಟ್ಟ, ಅಷ್ಟೇ ಅಲ್ಲ, ರಗಳೆ ಗಳಲ್ಲಿ ದಲಿತ ಪಾತ್ರಗಳು ಪ್ರಭುವರ್ಗದಿಂದ ಆರಾಧಿ ಸಲ್ಪಡುವಂತೆ ಮಾಡಿದ. ಇದು ಅಂದು ಹರಿಹರ ಮಾಡಿದ ಬಂಡಾಯ. ಅದೇ ಇಂದು ಬರಗೂರರು, ವೇಷಗಾರ ಹುಡುಗನನ್ನು ಅಧಿಕಾರದ ವಿರುದ್ಧ ನಿಲ್ಲಿಸಿ, ಪಟೇಲನ ಮಗಳನ್ನೇ ಮೋಹಿಸಿ ಮಗ್ಗುಲಿಗೆಳೆದುಕೊಳ್ಳುವಂತೆ ಮಾಡಿಸಿದ್ದು ಒಂದು ರೀತಿಯ ಬಂಡಾಯವಾಗುತ್ತದೆ. ಆದ್ದರಿಂದಲೇ ಇಲ್ಲಿ ಹುಲಿ ವೇಷ ಕೇವಲ ವೇಷವಾಗಿ ಉಳಿಯದೆ ಪರಂಗಿ ವಿರುದ್ಧ ಕೆಂಡಕಾರುತ್ತದೆ; ತೊಟ್ಟ ಕರೀಕೋಟನ್ನು ಸುಟ್ಟು ಬೂದಿ ಮಾಡುತ್ತದೆ.

ಬರಗೂರರ ಸಮತಾವಾದ, ಸಮಾಜವಾದ ಮತ್ತು ಮಾರ್ಕ್ಸ್‌ವಾದಗಳು ಚಿತ್ರದುದ್ದಕ್ಕೂ ಕೆಲಸ ಮಾಡಿವೆ; ಕ್ಷಿಪ್ರ ಬದಲಾವಣೆ ತರಲು ಪಾದರಸದಂತೆ ಹರಿದಾಡಿವೆ. ಉಪ ಸಂಸ್ಕೃತಿಗಳು ಪ್ರಧಾನ ಸಂಸ್ಕೃತಿಯೊಂದಿಗೆ ಬೆರೆಯಬೇಕೆಂಬ ನಿಲುವನ್ನು ರಾಮ ಮತ್ತು ಸೀತೆಯ ಪ್ರೀತಿ ಪ್ರೇಮ ಸಮಾಗಮದಲ್ಲಿ ಕಂಡರೆ, ಕೇಂದ್ರೀಕರಿಸಿದ ಸಂಪತ್ತು ವಿಕೇಂದ್ರೀಕರಣಗೊಳ್ಳಬೇಕೆಂಬ ಆಶಯ ಪಟೇಲನ ಹಣ ಕದಿಯುವ ರಂಗನಲ್ಲಿ ನೋಡುತ್ತೇವೆ.

ಬಂಡಾಯಕ್ಕೆ ಬಾಲಕರು, ಸ್ತ್ರೀಯರು, ಕಾರ್ಮಿಕರು, ರೈತರು, ಇದ್ದವರು. ಬಿದ್ದವರು ಎಲ್ಲರೂ ಬೇಕು. ಶಿಕ್ಷಕಿ (ಕಾವೇರಿ)ಯ ಸಂಘಟನೆಗೆ ಒಗ್ಗೊಟ್ಟ ದಂಡು ಇಂಥದ್ದೇ. ರಾಮನ ನೇತೃತ್ವಕ್ಕೆ ಬೆಂಬಲಿಸಿದ್ದೂ ಇದುವೆ. ಬಾಲಕರ ಧ್ವಜವಿಡಿದ ಕೈಗಳು ದಂಗೆಯನ್ನು ಬೆಂಬಲಿಸಬಲ್ಲವು. ಪೇಟಿ, ತಬಲ, ತಾಳ, ತಂಬೂರಿ ಬಾರಿಸುವ ಬೆರಳು ಗಳು ಬಂದೂಕಿನ ನಳಿಗೆ ಜಗ್ಗಬಲ್ಲವು. ಇಲ್ಲಿ ಶೋಷಣೆಗೆ ಒಳಗಾದವರಷ್ಟೆ ಸೇರಬೇಕೆಂದಿಲ್ಲ; ಸೀತೆಯಂತ ಪಟೇಲರ ಮಕ್ಕಳೂ ಭಾಗವಹಿಸ ಬಹುದು. ಹೇಗಿದೆ ನೋಡಿ ಬರಗೂರರ ದೂರದೃಷ್ಟಿ: ಬಂಡಾ ಯಕ್ಕೆ ಇದ್ದವರ ಬೆಂಬಲವೂ ಬೇಕೆನ್ನುವುದು, ಅವರಲ್ಲೂ ಇಂಥ ಮನಸ್ಸಿದೆ ಎನ್ನುವುದು.

ಇಡೀ ಚಿತ್ರದ ಯಶಸ್ಸು ನಿಂತದ್ದು ಇದರ ಮೇಲೆಯೇ ಎಂದು ಬೆರಳಿಟ್ಟು ಹೇಳಲಾಗದಿದ್ದರೂ, ಇಲ್ಲಿಯ ಕಥಾವಸ್ತು, ಪಾತ್ರವರ್ಗ, ನಿರ್ವಹಣಾ ತಂತ್ರ, ಸಂಭಾಷಣೆಯ ಸೊಗಸು, ಹಾಡುಗಳ ಮಾಧುರ್ಯ ಅದರ ಫಲವನ್ನು ಹಂಚಿ ಕೊಳ್ಳುತ್ತವೆ. ಶಿವರಾಜಕುಮಾರ, ರೇಷ್ಮ, ತಾರಾ, ಕರಿ ಬಸವಯ್ಯ, ಉಮೇಶ, ಕೃಷ್ಣೇಗೌಡ ಮುಂತಾದವರು ತುಂಬಾ ಅನುಕರಣೀಯ ಅಭಿನಯ ನೀಡಿದ್ದಾರೆ. [illegible] ಮಾತಿಗೆ ಬರಗೂರರ ಸಂಭಾಷಣೆಯೂ ಹೇಳಿ ಮಾಡಿಸಿದಂತಿದೆ. ಆದರೆ ಮಾತುಗಳು ತುಂಬಾ ಕಾವ್ಯಾತ್ಮಕ, ಗೂಢಾತ್ಮಕವಾಗಿವೆಯೆನ್ನಿಸುತ್ತದೆ. ರಾಮ ಬಳಸುವ ಗಾದೆ, ಒಗಟುಗಳ ವೈಖರಿಗೆ ಇವತ್ತಿನ ಬಿಚಪಾಯಿ ಕನ್ನಡ ಪ್ರೊಫೆಸರ್ ಸಹ ಬೆಪ್ಪಾಗುತ್ತಾನೆ. ಪರಂಗಿ ಅಧಿಕಾರಿಯ ಪ್ರಭಾವ, ಪಟೇಲನ ದರ್ಪ, ಶಾನುಭೋಗನ ನರಿಬುದ್ಧಿ

(ಕೊನೆಯ ಪುಟ ನೋಡಿ)

# ದೇಗುಲ ಸಂಸ್ಕೃತಿ

ರಾಮಲಿಂಗಪ್ಪ ಟಿ. ಬೇಗೂರು

*(ಕಳೆದ ಸಂಚಿಕೆಯಿಂದ ಮುಂದುವರೆದಿದೆ.)*

ಕೆಲವು ದೇಗುಲ ಸಂಬಂಧಿ ಆಚರಣೆಗಳನ್ನು ನೋಡಿದರೆ ಹಲವಾರು ಸಾಮಾಜಿಕ ಸತ್ಯಗಳು ಹೊರಬೀಳುತ್ತವೆ. ದೇವದಾಸಿ ಪದ್ಧತಿ, ಬಸವಿ ಬಿಡುವುದು, ದಿವ್ಯಗಳನ್ನು ಒಡ್ಡುವುದು ಇವೆಲ್ಲವೂ ಪ್ರಭು-ಪುರೋಹಿತರ ಅಗತ್ಯಕ್ಕಾಗಿಯೇ ಬಳಕೆಯಾಗಿವೆ. ಸಾಮಾಜಿಕ ಆರೋಗ್ಯ ಒಂದು ನೆಪ ಮಾತ್ರ. ಡಾ|| ರಹಮತ್ ತರೀಕೆರೆ ಹೇಳುವಂತೆ, ''ಭೂತಾರಾಧನೆ, ಮಾರಿಹಬ್ಬ ಇತ್ಯಾದಿಗಳು ಇಂದಿಗೂ ನಮ್ಮ ಅಸಮಾನ ಸಾಮಾಜಿಕ ಸ್ತರ-ವಿನ್ಯಾಸ ವನ್ನು ಮತ್ತೆ ಮತ್ತೆ ಅಭಿನಯಿಸಿ ಸ್ಥಿರೀಕರಿಸುವ ಆಚರಣೆಗಳಾಗಿವೆ.'' ಅಲ್ಲದೆ ಅನ್ನದಾನ, ಮಸ್ತಕಾಭಿಷೇಕ, ಉರುಳುಸೇವೆ, ಗಣಬರಿಸುವುದು ಮೊದಲಾದವನ್ನು ವ್ಯಕ್ತಿ ಮತ್ತು ಸಮೂಹ ಸಾಮಾಜಿಕ ಮನೋವಿಜ್ಞಾನದ ಹಿನ್ನೆಲೆಯಿಂದಷ್ಟೇ ನೋಡಿದರೆ ಸಾಲದು; ಸಾಂಸ್ಕೃತಿಕ ರಾಜಕಾರಣಗಳಾಗಿ ಇವನ್ನು ನೋಡಬೇಕಿದೆ. ಭೌತಿಕ, ಭಾವನಾತ್ಮಕ ಮತ್ತು ಶ್ರೇಣೀಕೃತ ಸಾಮಾಜಿಕ ಸಂಬಂಧಗಳ ಮೂಲಕ ನೋಡಬೇಕಾಗಿದೆ.

ಮುಡಿಪು ಹಾಕುವುದು, ಮಣೇವು ಹಾಕಿಸುವುದು, ಪಡಿಕೊಡುವುದು, ಚರ್ಪು ಹಂಚುವುದು, ಶಾಂತಿ ಮಾಡಿಸುವುದು, ವಸ್ತ್ರ, ಮೆಟ್ಟು, ಛತ್ರಿ ಗೋವು ಚಿನ್ನಾದಿಗಳ ದಾನ ನೀಡುವುದು, ಅಭಿಷೇಕ-ಉತ್ಸವಾದಿ ಗಳನ್ನು ಮಾಡಿಸುವುದು ಇವೆಲ್ಲವೂ ಭಕ್ತರ ಮಿಗುತಾಯ ವನ್ನು ಕಬಳಿಸುವ, ಉತ್ಪಾದಕ ಸಾಮರ್ಥ್ಯವನ್ನು ಶೋಷಿಸುವ ಕ್ರಿಯೆಗಳೇ ಆಗಿವೆ. ಹಾಗೇ ಕೊಂಡ ಹಾಯುವುದು, ಬಾಯಿ ಬೀಗ, ದೆವ್ವ ಉಚ್ಚಾಟನೆ, ಶಾಸ್ತ್ರ, ನೈಮಿತ್ಯ ಕೇಳುವುದು, ತಾಯಿತ ಮಾಡಿಸುವುದು, ಉರುಳುಸೇವೆ, ಮಂಡೆ ಕೊಡುವುದು, ಮರೆ ಬೀಳುವುದು, ಇತ್ಯಾದಿಗಳನ್ನು ಜನಪದ ವೈದ್ಯ ಪದ್ಧತಿಗಳ ದೃಷ್ಟಿಯಿಂದ ಅಭ್ಯಸಿಸಿದರೆ ಕುತೂಹಲಕರ ವಿವರಗಳು ದೊರಕ ಬಹುದು.

ಸಮಾಜದಲ್ಲಿ ಶ್ರಮ ವಿಭಜನೆಯನ್ನು ನಿರ್ಧರಿಸುವ ಮತ್ತು ಶ್ರಮಕ್ಕೆ ಬೆಲೆಯನ್ನು ನಿರ್ಧರಿಸುವ ಹಕ್ಕನ್ನು ದೇಗುಲ ಶಕ್ತಿಯ ಮೂಲಕ ಪುರೋಹಿತ ವರ್ಗ ದಕ್ಕಿಸಿಕೊಂಡಿ ರುವುದನ್ನು ಶ್ರಮಿಕ ವರ್ಗದ ದೇಗುಲ ಸಂಸ್ಕೃತಿ ಹೇಳುತ್ತದೆ. ಕೃಷಿ ಕೂಲಿ ಮತ್ತು ರೈತಾಪಿ ಜನ ತಮ್ಮ ಉತ್ಪಾದನಾಂಗ ಮತ್ತು ಉತ್ಪನ್ನಗಳೆಲ್ಲವನ್ನೂ ದೈವವೆಂದು ಪೂಜಿಸಿದರೂ ಊರಿನ ದೇಗುಲಗಳಿಗೆ ಹೋಗುವುದನ್ನು ಬಿಡುವುದಿಲ್ಲ. ಇರಬರುವ ದೇವರುಗಳನ್ನೆಲ್ಲ ಇವರು ತಮ್ಮ ಉತ್ಪಾದನೆಯ ಹಿಂದಿನ ಪ್ರೇರಕ ಶಕ್ತಿಗಳೆಂದು ಪರಿಗಣಿಸಿದ್ದಾರೆ. ಅಲ್ಲದೆ ವಿಧಿ, ಹಣೆಬರಹಗಳಿಗೂ ಉತ್ಪನ್ನಕ್ಕೂ (ಇಳುವರಿ) ಅನ್ಯೋನ್ಯ ಸಂಬಂಧವುಂಟೆಂದು ನಂಬುತ್ತಾರೆ. ಹೀಗಾಗಿ ದೇಗುಲದ ದಲ್ಲಾಳಿಗಳಾದ ಪುರೋಹಿತರ ಅಧೀನರಾಗಿ ಕೃಷಿಕೂಲಿ ಮತ್ತು ರೈತಾಪಿಗಳು ಬದುಕುತ್ತಿದ್ದಾರೆ. ಇಂದೂ ಎಷ್ಟೋ ಹಳ್ಳಿಗಳಲ್ಲಿ ಮುಂಗಾರು ಮತ್ತು ಗೌರಿಹುಣ್ಣಿಮೆಯಲ್ಲಿ [illegible] ಮಳೆ ಬೆಳೆ ಹೇಗಾಗುತ್ತದೆಂಬ ಭವಿಷ್ಯ ಹೇಳುವವರು ಪುರೋಹಿತರೇ ಆಗಿದ್ದಾರೆ. ಇದು ಕೃಷಿಕರ ಉತ್ಪಾದಕ ಉತ್ಸಾಹದ ಮೇಲೆ, ಮನೋದೃಢತೆಯ ಮೇಲೆ ತೀವ್ರ ಪರಿಣಾಮ ಬೀರುತ್ತದೆ.

ಬಹುಪಾಲು ಆಚರಣೆಗಳೆಲ್ಲ ಆದಿಯಲ್ಲಿ ಸಾಮಾಜಿಕ ಆರೋಗ್ಯಕ್ಕಾಗಿ ನಡೆದ ಅವಿಷ್ಕಾರಗಳೇ ಆಗಿರುತ್ತವೆ. ಆದರೆ ಅವು ಕ್ರಮೇಣ ವ್ಯಕ್ತಿ ಮತ್ತು ಸಂದರ್ಭದ ಅಗತ್ಯಕ್ಕೆ ತಕ್ಕಂತೆ ತಮ್ಮ ಸ್ವರೂಪ ಮತ್ತು ವಿಧಾನದಲ್ಲಿ ಬದಲಾವಣೆಗೆ ಒಳಗಾಗುತ್ತವೆ. ಆರಂಭದಲ್ಲಿ ವೈಜ್ಞಾನಿಕ ವಿಚಾರಗಳಾದ ಇವು ಅನಂತರ ಕುರುಡು ಆಚರಣೆಗಳಾಗಿ ಬದಲಾಗುತ್ತವೆ. ಈ ಸೈದ್ಧಾಂತಿಕ ಹಿನ್ನೆಲೆಯಿಂದ ಎಲ್ಲ ದೇಗುಲ ಸಂಬಂಧಿ ಆಚರಣೆ, ಪದ್ಧತಿ, ನಂಬಿಕೆ, ದಂತಕತೆ, ನಾಮವಿಚಾರ ಇತ್ಯಾದಿಗಳನ್ನು ಅಧ್ಯಯನ ಮಾಡಬೇಕಿದೆ. ಈ ಲೇಖನದಲ್ಲಿ ಈ ನೆಲೆಯ ಪ್ರಯತ್ನ ಅಷ್ಟಾಗಿ ಆಗಿಲ್ಲ ಎಂಬುದನ್ನಿಲ್ಲಿ ನೆನಪಿಸಿಕೊಳ್ಳಬೇಕು.

> ***"ನಮ್ಮ ಭವ್ಯ ದೇಗುಲಗಳನ್ನು ನೋಡುತ್ತಾ ನಾವೆಷ್ಟೇ ಹೆಮ್ಮೆ ಪಟ್ಟುಕೊಂಡರೂ ಅವುಗಳ ಹಿಂದೆ ಸಾಮಾಜಿಕ ಅಸಮಾನತೆಯ, ಶೋಷಣೆಯ, ಹಸಿವಿನ, ಸ್ವಾರ್ಥಮೂಲ ಕ್ರೌರ್ಯದ ಕತೆಗಳಿವೆ. ಅಂತೆಯೇ ಯುದ್ಧ ಖೈದಿಗಳ, ಗುಲಾಮರ, ಶಿಲ್ಪಿಗಳ, ಸಾಮಾನ್ಯರ ಅವಿರತ ಪರಿಶ್ರಮದ ಕತೆಗಳಿವೆ."*** *ಈ ಲೇಖನದ ಮೊದಲ ಭಾಗ ಜುಲೈ ಸಂಚಿಕೆಯಲ್ಲಿ ಪ್ರಕಟವಾಗಿದ್ದಿತು.*

ನಮ್ಮಲ್ಲಿ ಮಕ್ಕಳು ಮೊಮ್ಮಕ್ಕಳಿಗೆ ದೇವರುಗಳ ಹೆಸರನ್ನೇ ಇಡುವುದು ದೇಗುಲ ಸಂಸ್ಕೃತಿಯ ಒಂದು ಆಚರಣೆಯಾಗಿದೆ. ಕೆಲವರು ತಮ್ಮ ತಾತ ಅಜ್ಜಿಯರ ಹೆಸರುಗಳನ್ನು ಮಕ್ಕಳು ಮರಿಗೆ ಇಡುತ್ತಾರಾದರೂ ಈ ತಾತ ಅಜ್ಜಿಯರ ಹೆಸರುಗಳೂ ದೇವರ ಹೆಸರುಗಳೇ ಆಗಿರುತ್ತವೆ. ಐತಿಹಾಸಿಕ ದೇವರುಗಳಾದ ಮಾದೇಶ, ತಿಪ್ಪೇಶ, ಸಿದ್ಧಲಿಂಗೇಶ, ದುರುಗಮ್ಮ, ಎಲ್ಲಮ್ಮ, ಮೈಲಾರ ಇವರ ಹೆಸರುಳ್ಳ ಸಾವಿರಾರು ಜನ ಆಯಾ ದೇವರುಗಳ ಪ್ರದೇಶದಲ್ಲಿ ಈಗಲೂ ಇದ್ದಾರೆ (ಇಂದು ನಾಮಕರಣ ಆಚರಣೆ ಜಾಗತೀಕರಣಕ್ಕೆ ಒಳಗಾಗುತ್ತಿದೆ). ವ್ಯಕ್ತಿ ನಾಮಾಭ್ಯಾಸಿಗಳಿಗೆ ಈ ದೇವರುಗಳು ಸಾಕಷ್ಟು ನೆರವಾಗುತ್ತಾರೆ. ಕನ್ನಡದಲ್ಲಿ ಕೆಲವು ನಾಮಗಳು ದ್ವಿಲಿಂಗ ನಾಮಗಳಾಗಿಯೇ ಬಳಕೆಯಾಗುತ್ತವೆ. ಇದೊಂದು ಕನ್ನಡ ವ್ಯಾಕರಣ ವಿಶೇಷವೂ ಹೌದು. ಉದಾ : ರಾಮಯ್ಯ -ರಾಮಕ್ಕ, ಸಿದ್ಧಲಿಂಗಯ್ಯ-ಸಿದ್ಲಿಂಗಮ್ಮ, ಮಾದಯ್ಯ- ಮಾದಮ್ಮ, ಎಲ್ಲಪ್ಪ-ಎಲ್ಲಮ್ಮ, ದುರುಗಯ್ಯ-ದುರುಗಮ್ಮ, ತಿಪ್ಪೇಶ-ತಿಪ್ಪಮ್ಮ ಇತ್ಯಾದಿ.

ತಿಪ್ಪೇಸ್ವಾಮಿ, ನಾಗಲಿಂಗ, ಜುಂಜಪ್ಪ, ಮೈಲಾರ, ಗೌರಸಂದ್ರ ಮಾರಮ್ಮ, ಬಳ್ಳಾರಿ ದುರುಗಮ್ಮ, ಮಲೆ ಮಾದೇಶ, ರಾಘವೇಂದ್ರ, ಪರಮಹಂಸ, ಮುಂತಾದ ಐತಿಹಾಸಿಕ ದೇವರುಗಳು ಬುದ್ಧ, ಮಹಾವೀರ, ಏಸು, ಪೈಗಂಬರ್, ಬಸವ, ಅಂಬೇಡ್ಕರ್, ಗಾಂಧಿ ಇವರಂತೆಯೇ ಆದರ್ಶಪ್ರಾಯರು. ಇವರೆಲ್ಲರ ಜೀವನ ಬೋಧನೆ ಭಿನ್ನವಾದರೂ ಸಾಧನೆ ಮತ್ತು ಉದ್ದೇಶಗಳು ಒಂದೇ ಆಗಿದ್ದವು. ಇವರೆಲ್ಲರಿಗೂ ಇಂದು ದೇಗುಲಗಳಿವೆ. ಈ ದೇಗುಲಗಳ ಸುತ್ತ ಬೆಳೆದಿರುವ ಆಚರಣೆಗಳು ಮಾತ್ರ ಮೂಲ ಮೂರ್ತಿಗಳ ಉದ್ದೇಶ, ಆದರ್ಶಗಳನ್ನು ತಿರುಚಿದವುಗಳಾಗಿವೆ. ಈ ದೇಗುಲಗಳಲ್ಲಿ ಸಂಪ್ರದಾಯಗಳನ್ನಾಗಿ ಅನುಸರಿಸುವ ಆಚರಣೆಗಳು ಮೂಲ ಮೂರ್ತಿಗಳವಲ್ಲ, ಅವರ ಭಕ್ತರವು. ಇಲ್ಲಿ ಆದರ್ಶ ಪುರುಷರನ್ನು ದೇವರನ್ನಾಗಿಸಿ ಆದರ್ಶಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ತಿರುಚಿಕೊಂಡ ನಮ್ಮ ಪಿತೃ ಪಿತಾಮಹರೇ ತಮ್ಮ ಮುಂದಿನ ಪೀಳಿಗೆಗೆ ಆದರ್ಶ ಪ್ರಾಯರಾದದ್ದು ಮಾತ್ರ ನಮ್ಮ ದುರಂತ. ಈ ಹಿನ್ನೆಲೆಯಿಂದ ನಮ್ಮ ದೇಗುಲ ಸಂಸ್ಕೃತಿಯ ಭಿನ್ನ ಪಾಠಗಳ ಮರು ನಿರ್ವಚನ ಆಗಬೇಕಿದೆ.

ಪ್ರತಿಯೊಂದು ದೇಗುಲದ ಮೂಲದಲ್ಲೂ ತಿಲಕರಂಥ ಸದುದ್ದೇಶದ ವ್ಯಕ್ತಿಗಳೋ (ಗಣೇಶ, ಶಿವಾಜಿ, ಉತ್ಸವಗಳನ್ನು ಸ್ವಾತಂತ್ರ್ಯ ಹೋರಾಟಕ್ಕೆ ಜನರಸಂಘಟನೆ ಗಾಗಿ ಆರಂಭಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬೇಕು). ಬೂದಾಳಮ್ಮ, ಮಾದೇಶ, ಗಾಂಧಿಯಂಥ ಮೂಲ ಮೂರ್ತಿಗಳೋ ಇದ್ದೇ ಇರುತ್ತಾರೆ. ಆದರೆ ಆನಂತರದಲ್ಲಿ ಈ ಸದುದ್ದೇಶದ ವ್ಯಕ್ತಿಗಳು, ಮೂಲ ಮೂರ್ತಿಗಳು ಇಲ್ಲವಾಗಿ ಸ್ವಾರ್ಥಪರರಾದ ಪ್ರಭು-ಪುರೋಹಿತರು ಈ ದೇಗುಲಗಳಿಗೆ ತಗಲಿಕೊಂಡಿದ್ದಾರೆ. ಹಾಗಾಗಿ ನಮ್ಮ ಪ್ರತಿಯೊಂದು ದೇಗುಲಗಳ ಪಾಯದಲ್ಲಿ ಸಮಾಜ ಸುಧಾರಣೆಯ ಆದರ್ಶಗಳಿದ್ದರೆ ಅಂಗಳದಲ್ಲಿ ಇವುಗಳ ಸಮಾಧಿಗಳಿರುತ್ತವೆ. ಪುರಿಯ ಜಗನ್ನಾಥ ದೇಗುಲದ ಚರಿತ್ರೆ ಈ ಮಾತಿಗೆ ಒಂದು ಉಜ್ವಲ ಸಾಕ್ಷಿ.

ಇವತ್ತು ನಾವು ಯಾವುದೇ ಹಳ್ಳಿಗೆ ತೆರಳಿದರೂ - ರಸ್ತೆಗಳೇ ಇಲ್ಲದ, ಕುಡಿಯಲು ನೀರೇ ಇಲ್ಲದ ಹಳ್ಳಿಗೆ ತೆರಳಿದರೂ - ಅಲ್ಲಿ ಕಡ್ಡಾಯವಾಗಿ ಒಂದಾದರೂ ದೇಗುಲವಿರುತ್ತದೆ. ಜನಮನದಲ್ಲಿ ದೇವರು ಸರ್ವ ಪೀಡಾಪಹಾರಿ - ಶಿಷ್ಟ ರಕ್ಷಕನೆಂದು ಬೇರು ಬಿಟ್ಟಿದ್ದಾನೆ. ಸರ್ವಾಂತರ್ಯಾಮಿ ಎಂಬ ನಂಬಿಕೆ ಇದ್ದರೂ ಮೂರ್ತೀಕರಣಗೊಂಡು ದೇಗುಲವಾಸಿಯಾಗಿದ್ದಾನೆ. ಊರಿನಲ್ಲಿ ಆಸ್ಪತ್ರೆ, ಪಂಚಾಯ್ತಿ, ಗ್ರಂಥಾಲಯ, ಶೌಚಾಲಯ ಯಾವುದಕ್ಕೂ ಕಟ್ಟಡ ಇಲ್ಲದಿದ್ದರೂ ಸರಿ, ದೇವರಿಗೆ ಮಾತ್ರ ಭವ್ಯ ಕಟ್ಟಡ ಇರಲೇಬೇಕು. ಕೋಮಿಗೊಂದು, ಪಂಗಡಕ್ಕೊಂದು ದೈವಗಳಿದ್ದರೂ ಪ್ರತಿಕುಟುಂಬಗಳಿಗೂ ಮನೆದೇವರುಗಳಿವೆ. ಆದರೂ ಇಂದು ಪ್ರತಿ ಮನೆಗಳಲ್ಲೂ ದೇವರ ಕೋಣೆಗಳು ನಿರ್ಮಾಣವಾಗುತ್ತಿವೆ. ದೇಗುಲ ಸಂಸ್ಕೃತಿ ಆತ್ಯಂತಿಕ

ವಿಕೇಂದ್ರೀಕರಣಕ್ಕೆ ಒಳಗಾಗುತ್ತಿರುವ ಪರಿ ಇದು. ಜನ ತಮ್ಮ ದೇವರಿಗೆ ತಾವೇ ಪೂಜಾರಿಗಳಾಗುತ್ತಿದ್ದಾರೆ. ಆದರೂ ಇವರು ದೇಗುಲಗಳಿಗೆ - ತೀರ್ಥಕ್ಷೇತ್ರಗಳಿಗೆ ಹೋಗುವುದನ್ನೇನೂ ಬಿಟ್ಟಿಲ್ಲ. ಇತ್ತೀಚೆಗೆ ದೇಗುಲಗಳು ಸರ್ಕಾರೀಕರಣ ಆಗುತ್ತಾ ದೇಗುಲ ಸಂಸ್ಕೃತಿಯು ರೂಪಾಂತರಕ್ಕೆ ಒಳಗಾಗುತ್ತಿದೆ. ಮಡೀಕರಣ ವ್ಯಾಪಕವಾಗುತ್ತಿದೆ. ಕರ್ನಾಟಕದ ಪ್ರಬಲ ಕೋಮುಗಳೆಲ್ಲ ತಮ್ಮ ಕೋಮಿನ ಮಠಗಳ ಮೂಲಕ ಮಠಾಧೀಶ ಜೀವಂತ ದೈವಗಳನ್ನು ಮೆರೆಸುತ್ತಿದ್ದಾರೆ. ಹಿಂದೆ ರಾಜಗುರುಗಳಿಗೆ ಸಲ್ಲುತ್ತಿದ್ದ ಮರ್ಯಾದೆಗೂ ಹೆಚ್ಚು ಭಯ ಮರ್ಯಾದೆಗಳು ಮಠಾಧೀಶರಿಗೆ ಸಲ್ಲುತ್ತಿವೆ.

ಹಿಂದೆ ದೇಗುಲಗಳು ಮಾಡುತ್ತಿದ್ದ ಎಲ್ಲ ಪರಿಯ ಶೋಷಣೆ, ನಿಯಂತ್ರಣಗಳು ಮಠಗಳಿಗೆ ವರ್ಗಾವಣೆಯಾಗಿವೆ. ಪುರೋಹಿತರ ಅಧಿಕಾರವನ್ನು ಮಠಾಧೀಶರೂ, ಪ್ರಭುಗಳ ಸ್ಥಾನವನ್ನು ರಾಜಕಾರಣಿಗಳೂ ಆಕ್ರಮಿಸಿದ್ದಾರೆ. ಪಾತ್ರಗಳು ಬದಲಾದರೂ ಸೂತ್ರ ಮಾತ್ರ ಅದೇ ಇದೆ. ಮಠಾಧೀಶರ ಗುಪ್ತಕಾಮ, ಅಂತರರಾಷ್ಟ್ರೀಯ ಭಯೋತ್ಪಾದನೆ (ಕುದುರೆ ಮೋತಿ ಸ್ವಾಮಿ - ಚಂದ್ರಸ್ವಾಮಿ), ರಾಜಕಾರಣಿಗಳ ಬಹುಕೋಟಿ ಹಗರಣ-ಜಾತಿವಾರು ಅಭ್ಯರ್ಥಿತನ (ರಾಜೀವ್ ಬೋಫೋರ್ಸ್ - ಹಾಸನದ ಚುನಾವಣೆ)ಗಳು ಸ್ವರೂಪದಲ್ಲಿ ಭಿನ್ನವಾದರೂ ಪ್ರಾಚೀನ ಪ್ರಭು-ಪುರೋಹಿತರ ಪ್ರಜಾಪ್ರಭುತ್ವವಾದಿ ಮುಖಗಳೇ ಆಗಿವೆ.

ಸಾವಿರಾರು ವರ್ಷಗಳ ಹಿಂದಿನ ನಮ್ಮ ಜನಪದ ವಾಸ್ತು ಹೀಗೇ ಇತ್ತೆಂದು ಹೇಳಲಾಗುವುದಿಲ್ಲ. ಯಾಕೆಂದರೆ ಸಾಮಾನ್ಯ ಜನರ ಮನೆಗಳು ನಾಮಾವಶೇಷವಾಗಿವೆ. ಸಾಮಾನ್ಯರ ಮನೆಗಳೇ ಏಕೆ ಅರಮನೆಗಳೇ ನಾಶವಾಗಿವೆ. ಆದರೆ ಅನೇಕ ದೇಗುಲಗಳು ಇಂದಿಗೂ ಚಾರಿತ್ರಿಕ ಸಾಕ್ಷಿಗಳಾಗಿ ಉಳಿದಿವೆ. ಪರ್ವತಗಳೇ ಸಾವಿರಾರು ವರ್ಷಗಳ ಮುಂಚೆ ಇದ್ದ ಆಕಾರದಲ್ಲಿ ಇಂದು ಇಲ್ಲದಿರುವಾಗ ಈ ದೇಗುಲಗಳು ಉಳಿದಿವೆಯಲ್ಲ! ಇದಕ್ಕೆ ಕಾರಣ ಬಹುಶಃ ಎರಡು : (ಅ) ನಮ್ಮ ಸಂಸ್ಕೃತಿ ಮತ್ತು ದೇಗುಲಗಳ ನಡುವಿನ ಸಂಬಂಧ; (ಆ) ಪ್ರಭು ಮತ್ತು ಪುರೋಹಿತರ ಸ್ವಾರ್ಥ ಮೂಲ ಕಾಳಜಿ. ಇದನ್ನು ಇನ್ನೊಂದಿಷ್ಟು ವಿಸ್ತರಿಸುವುದಾದರೆ, ನಮ್ಮ ಪ್ರಾಚೀನ ದೇಗುಲಗಳು ಉಳಿದಿರುವುದು ನಮ್ಮವರ ಕಾಲಾತೀತ ಕಟ್ಟಡ ನಿರ್ಮಾಣ ಕಲೆಯಿಂದಾಗಿ ಅಲ್ಲ. ಮಮ್ಮತ್ತೆ ನಡೆದ ಜೀರ್ಣೋದ್ಧಾರಗಳಿಂದಾಗಿ, ಪಾಲನೆಯಿಂದಾಗಿ, ನಮ್ಮ ಇತಿಹಾಸದಲ್ಲಿ ಒಬ್ಬ ರಾಜನನ್ನು ಉರುಳಿಸಿ ಮತ್ತೊಬ್ಬ ಬಂದರೆ ಅವನು ಹಿಂದಿನವನ ಅರಮನೆಯನ್ನು ಯಾವ ಕಾರಣಕ್ಕೂ ಸಂರಕ್ಷಿಸುವುದಿಲ್ಲ. ಆದರೆ ಆ ಕಾಲದ ದೇಗುಲಗಳನ್ನು ಮಾತ್ರ ಜೀರ್ಣೋದ್ಧರಿಸದೆ ಬಿಡುವುದಿಲ್ಲ. ದೇಗುಲ ಜೀರ್ಣವಾಗಿಲ್ಲದಿದ್ದರೂ ಆ ದೇಗುಲಕ್ಕೆ ಪ್ರಾಕಾರವನ್ನೋ, ಪ್ರದಕ್ಷಿಣಾ ಪಥವನ್ನೋ ಕಲಶವನ್ನೋ ಮಾಡಿಸುತ್ತಾನೆ. ಹೀಗಾಗಿ ನಮ್ಮ ಬಹುಪಾಲು ದೇಗುಲಗಳು ಒಮ್ಮೆಗೇ ಕಟ್ಟಿದವುಗಳಾಗಿರದೆ ಮಮ್ಮತ್ತೆ ಕಟ್ಟಿದವುಗಳಾಗಿವೆ (ಉದಾಹರಣೆಗೆ ವಿಜಯನಗರದ ವಿಜಯವಿಠ್ಠಲ ದೇಗುಲ ೧೪೦೦ ರಿಂದ ೧೬೫೦ರ ವರೆಗೆ ಕಟ್ಟಿದುದಾಗಿದೆ. ಈಗಲೂ ಜೀರ್ಣೋದ್ಧಾರಕ್ಕೆ ಒಳಗಾಗುತ್ತಿದೆ).

ಇಂದಿನ ಭವ್ಯ ದೇಗುಲಗಳನ್ನು ಕಂಡಾಗ ಎಷ್ಟೊಂದು ಸಂಪತ್ತಿನ ದುರ್ವ್ಯಯ ಆಗಿದೆ ಎನಿಸದಿರದು. ದೇಗುಲ ನಿರ್ಮಾಣಕ್ಕಾಗಿ ಆಗುತ್ತಿದ್ದ ವೆಚ್ಚ ಸಂಪತ್ತಿನ ಕೆಳ ಮುಖ ಹರಿಪಿಗೆ ನಿಮಿತ್ತವಾದರೂ ದೇಗುಲಗಳು ನಿರ್ಮಾಣವಾಗುತ್ತಿದ್ದ ಕಾರಣ ಮಾತ್ರ ಸಂಪತ್ತಿನ ಕ್ರೋಡೀಕರಣವೇ ಆಗಿರುತ್ತಿತ್ತು. ಸಂಪತ್ತಿನ ಕ್ರೋಡೀಕರಣ ಮತ್ತು ಸಂಚಲನ ಈ ಎರಡು ಕೆಲಸಗಳನ್ನು ಮಾಡುತ್ತಿದ್ದ ದೇಗುಲಗಳ ಹಿಂದೆ ನಿಜಕ್ಕೂ ಭಕ್ತಿ ಇತ್ತೆ? ಜನಗಳ ಪ್ರಾಣ ಹಿಂಡಿ, ಭಂಡಾರವನ್ನೆಲ್ಲ ಸುರಿದು, ನೆರೆರಾಜ್ಯಗಳನ್ನು ಸುಲಿದು

*ಕಾಂಚೀಪುರದ ವರದರಾಜ ಸ್ವಾಮಿ ದೇವಾಲಯ*

ದೇಗುಲ ನಿರ್ಮಿಸುವ ಈ ಕಾಳಜಿಯ ಹಿಂದಿನ ರಾಜಶಾಹಿಯ ಅಗತ್ಯವೇನು? ರಾಜಶಾಹಿಗೆ ಇದರ ಬಗೆಗೆ ನಿಜವಾದ ಭಕ್ತಿ, ಪ್ರೀತಿ ಇತ್ತೆ? ಇದ್ದರೂ ಭಕ್ತಿ ಪ್ರೀತಿಗಳಿಗೆ ಈ ಪರಿ ವೈಭವದ ಹಂಗೇಕೆ? ಈ ಪ್ರಶ್ನೆಗಳನ್ನು ಹಲವು ರೀತಿಯಲ್ಲಿ ಅರ್ಥೈಸಿಕೊಳ್ಳಬಹುದು :

(೧) ಇದು ರಾಜಶಾಹಿಯ ಅಳಿವು ಉಳಿವಿನ ಯತ್ನ; (೨) ಜನರ ದೈವ ಭಕ್ತಿಯನ್ನು ರಾಜನಿಷ್ಠೆಯನ್ನಾಗಿ ಪರಿವರ್ತಿಸಿಕೊಳ್ಳುವ ಹುನ್ನಾರ; (೩) ಸಾಮಾನ್ಯರ ಸೇವೆ, ಸರಕು, ಸಂಪತ್ತು, ಮನಸ್ಸುಗಳನ್ನು ಪ್ರಭು-ಪುರೋಹಿತರ ಹಿತಕ್ಕಾಗಿ ಸಂಗ್ರಹಿಸಿಕೊಳ್ಳುವ ಯತ್ನ; (೪) ಸಾಂಸ್ಕೃತಿಕ ರಾಜಕಾರಣದ ತಂತ್ರ.

ಏನೇ ಆದರೂ ಅಪಾರ ಮಾನವ ದಿನಗಳ ಉದ್ಯೋಗ ಸೃಷ್ಟಿಯಾಗಬಹುದಾಗಿದ್ದ, ಆರ್ಥಿಕ ಸಂಚಲನೆಯ ಚಾಲಕ ಶಕ್ತಿಯಾಗಬಹುದಾಗಿದ್ದ ಈ ದೇಗುಲ ನಿರ್ಮಾಣದ ಹಿಂದೆ ಬಹುಪಾಲು ಗುಲಾಮರ, ಯುದ್ಧ ಖೈದಿಗಳ ಬಿಟ್ಟಿ ಶ್ರಮ ವಿನಿಯೋಗವಾಗಿದೆ. ಆದರೂ ಸ್ವಯಂಶಕ್ತಿ ಪ್ರಜಾಸೌಕರ್ಯಗಳಿಗಾಗಿ ಸದ್ವಿನಿಯೋಗವಾಗಬೇಕಿದ್ದ ಸಂಪತ್ತು ದೇಗುಲಕ್ಕೆ ದುರ್ಬಳಕೆಯಾಗಿರುವುದು [illegible] [illegible] ಗುಲಾಮಗಿರಿಯ ಪ್ರತೀಕ. [illegible] [illegible] ನಿರ್ಮಾಣದ ಚರಿತ್ರೆ ನಮ್ಮ ಜನರಿಗೆ ಹೊಸ ಮತ್ತು ಹಸಿವುಗಳನ್ನು ನೀಡಿರುವುದು ಸುಳ್ಳಲ್ಲ. [illegible] ಅಪಥ್ಯವೆನಿಸಬಹುದು, ಆದರೆ ಅದರಲ್ಲಿ ತಥ್ಯವಿದೆ.

ಚಾಲುಕ್ಯ ಇಮ್ಮಡಿ ವಿಕ್ರಮಾದಿತ್ಯನ ಪಲ್ಲವ ವಿಜಯಗಳ ನೆನಪಿಗಾಗಿ ಇವನ ರಾಣಿಯರಾದ ಲೋಕಮಹಾದೇವಿ ಮತ್ತು ತ್ರೈಲೋಕ ಮಹಾದೇವಿಯರು ಲೋಕೇಶ್ವರ ಮತ್ತು ತ್ರೈಲೋಕೇಶ್ವರ ದೇವಾಲಯಗಳನ್ನು ಕಟ್ಟಿಸುತ್ತಾರೆ. ಇಮ್ಮಡಿ ವಿಕ್ರಮನ ವಿಜಯಕ್ಕಾಗಿ ಹೆಂಡತಿ ಮಕ್ಕಳನ್ನು ಅಗಲಿ ದಂಡಿನಲ್ಲಿ ಹೋರಾಡಿದ ಸೈನಿಕರ ಶ್ರಮಕ್ಕೆ ರಾಣಿಯರು ಕೊಟ್ಟ ಕೊಡುಗೆ ಇದು. ನಮ್ಮ ರಾಜಶಾಹಿಗೆ ನಿರ್ದಿಷ್ಟ ಸೈದ್ಧಾಂತಿಕ ಸಾಮಾಜಿಕ ಬದ್ಧತೆ ಇಲ್ಲದಿದ್ದನ್ನು ಈ ದೇಗುಲ ಸಂಸ್ಕೃತಿ ಹೇಳುತ್ತದೆ. ಹೊಸ ದೇಗುಲಗಳು ಹೊಸ ಪೂಜಾರಿಗಳಿಗೆ ಉದ್ಯೋಗವನ್ನೇನೋ ನೀಡುತ್ತಿದ್ದವು. ಆದರೆ ಭಕ್ತರೇನೂ ಹೊಸಬರಲ್ಲ. ಅದೇ ಭಕ್ತರೇ ಇನ್ನಷ್ಟು ಅನುತ್ಪಾದಕ ವಿದ್ಯಾವಂತ ವರ್ಗದ ಹೊರೆಯನ್ನು ಹೊರಬೇಕಾಗುತ್ತಿತ್ತು. ಪುರೋಹಿತಶಾಹಿಯಲ್ಲಿ ಒಂದು ಅನೌಪಚಾರಿಕ ಸಂಘಟಿತ ಗುಣ ಇರುವುದನ್ನು ದೇಗುಲ ಸಂಸ್ಕೃತಿಯಲ್ಲಿ ಕಾಣಬಹುದು. ನಮ್ಮ ಪರಂಪರೆಯಲ್ಲಿ ಬಂಡವಾಳಶಾಹಿಯಾಗಿ ಬೆಳೆದ ದೇಗುಲ ಪರಿವಾರ ತನ್ನ ವಿದ್ಯೆಯ ಏಕಸ್ವಾಮ್ಯದಿಂದ ಜನರ ಅಜ್ಞಾನ ಮತ್ತು ಮುಗ್ಧತೆಯನ್ನು ಇನ್ನಿಲ್ಲದಂತೆ ದುರ್ಬಳಸಿರುವುದನ್ನೂ ಕಾಣಬಹುದು. ಈ ಪರಿವಾರ ರಾಜಶಾಹಿಯೊಂದಿಗೆ ಶಾಮೀಲಾಗಿ, ಕೆಲವೊಮ್ಮೆ ತಾನೇ ರಾಜಶಾಹಿಯಾಗಿ ಜನರನ್ನು ಆಧ್ಯಾತ್ಮಿಕ, ನೈತಿಕ, ಆರ್ಥಿಕ, ಬೌದ್ಧಿಕ, ಸಾಮಾಜಿಕ ಏನೆಲ್ಲ ನೆಲೆಗಳಲ್ಲಿ ಶೋಷಿಸಿದೆ. ಈ ಶೋಷಣೆಯ ರುಚಿಯುಂಡ ಪರಿವಾರ ವಂಶಪಾರಂಪರ್ಯವಾಗಿ ಈ ಸವಲತ್ತನ್ನು ಉಳಿಸಿಕೊಳ್ಳಲು ಇತರರಿಗೆ ವಿದ್ಯೆಯ ಹಕ್ಕನ್ನೇ ನಿರಾಕರಿಸಿದೆ. ಅಸಂಘಟಿತ ಭಕ್ತರನ್ನು ಅದೇ ನಂಬಿಕೆಗಳಲ್ಲಿ ಉಳಿಸಿಕೊಳ್ಳಲು ತತ್ವಜ್ಞಾನ, ಪುರಾಣ, ಅಧ್ಯಾತ್ಮ, ಎಲ್ಲವನ್ನೂ ಸ್ವಹಿತ, ಸ್ವಜನ ಹಿತಕ್ಕಾಗಿ ನಿರ್ಮಿಸಿದೆ - ದುರ್ಬಳಸಿದೆ. ಆ ಮೂಲಕ ಸಾಮಾಜಿಕ ಕಾನೂನುಗಳನ್ನು ನಿರ್ಮಿಸುವ, ಕಟ್ಟುಪಾಡು, ವಿಧಿ ನಿಷೇಧಗಳನ್ನು ಜಾರಿಮಾಡುವ ಅಧಿಕಾರವನ್ನು ಗುತ್ತಿಗೆ ಪಡೆದ ಈ ಪರಿವಾರ, ತನ್ನೆಲ್ಲ ಜ್ಞಾನ ಮತ್ತು ಶಕ್ತಿಯನ್ನು ತನ್ನ [illegible]ಕ್ಕಾಗಿ. [illegible]

ಇವೆಲ್ಲವುಗಳ ಮೊತ್ತ. ಆದರೆ ಇಂದಿನ ನಮ್ಮ ರಾಜಕೀಯ ಅಧಿಕಾರಶಾಹಿಯು ರಾಷ್ಟ್ರೀಯತೆಯೆಂದರೆ ಹಿಂದುತ್ವ ಎಂಬಂತೆ - ಆಂಗ್ಲಪೂರ್ವ ಭಾರತದ ರಾಷ್ಟ್ರೀಯತೆಯನ್ನೇ ಪುನಃ ಸ್ಥಾಪಿಸಲು ಯತ್ನಿಸುತ್ತಿದೆ. ಇದು ದೇಗುಲ ಸಂಸ್ಕೃತಿಯ ಪುನರ್ ಸ್ಥಾಪನೆಯಲ್ಲದೆ ಬೇರೆ ಅಲ್ಲ, ಪ್ರಭು- ಪುರೋಹಿತರ ಹೊಸ ಆಟವಲ್ಲದೆ ಬೇರೆ ಅಲ್ಲ.

ಇಂದು ಅನೇಕ ಪುರೋಹಿತಶಾಹಿಯ ಪಳೆಯುಳಿಕೆಗಳು ಸಂಘಟಿತಗೊಂಡು ಹೊಸ ಹೊಸ ಹೆಸರುಗಳಿಂದ ಹೊಸ ರೀತಿಯ ಮೋಸಗಳಿಗಾಗಿ ಯತ್ನಿಸುತ್ತಿವೆ. ಆದರೆ ವಿದ್ಯೆಯ ವಿಕೇಂದ್ರೀಕರಣ ಎಚ್ಚರವನ್ನು ಎಲ್ಲ ಪ್ರಜೆಗಳಿಗೂ ಹಂಚುತ್ತಿದೆ. ಹಾಗಾಗಿ ಹೆದರುವ ಅಗತ್ಯವಿಲ್ಲ.

ದೇಗುಲಗಳಲ್ಲಿ ಇಂದು ಬಹುಪಾಲು ಪೂಜಾರಿಗಳು, ಧರ್ಮದರ್ಶಿಗಳು ಬ್ರಾಹ್ಮಣರಾಗಿದ್ದಾರೆಂದ ಮಾತ್ರಕ್ಕೆ ನಮ್ಮ ದೇಗುಲ ಸಂಸ್ಕೃತಿಯ ಪುರೋಹಿತರೆಂದರೆ ಇಂದಿನ ಬ್ರಾಹ್ಮಣರೇ ಎಂದು ತಿಳಿಯಬೇಕಿಲ್ಲ. ಬ್ರಾಹ್ಮಣ ಎಂಬುದು ಒಂದು ವರ್ಣ-ವರ್ಗಸೂಚಿ ಪದ. ರೋಮಿಲ ಥಾಪರ್ ದೃಷ್ಟಾಂತ ಸಹಿತವಾಗಿ ನಿರೂಪಿಸಿರುವಂತೆ, ಆದಿ ಕಾಲದಿಂದಲೂ ಈ ವರ್ಣಕ್ಕೆ ಪ್ರವೇಶಿಸಲು ಕೆಳವರ್ಗ-ಜಾತಿಯವರಿಗೆ ಮೇಲ್ಮುಖ ಚಲನೆ ಸಾಧ್ಯವಿತ್ತು. ಹಾಗೇ ಪ್ರತಿ ಪಂಗಡ, ಜಾತಿ, ಕೋಮಿನಲ್ಲೂ ದೇಗುಲಗಳಿಗೆ ಅಂಟಿಕೊಂಡ ಪುರೋಹಿತವರ್ಗ ಇತ್ತು ಮತ್ತು ಇದೆ. ಹಾಗಾಗಿ ವಿದ್ಯಾವಂತ ಬಿಳಿಕಾಲರ್ ವರ್ಗವನ್ನಾಗಿ ಈ ಪುರೋಹಿತ ಶಾಹಿಯನ್ನು ಗ್ರಹಿಸಬೇಕಾಗಿದೆ. ಹಾಗೇ ಪ್ರಭುವರ್ಗ ಕೂಡ ಕ್ಷತ್ರಿಯರೆಂಬ ಒಂದೇ ವರ್ಣ (ಜಾತಿ)ಕ್ಕೆ ಸೇರಿದ ಜನರಲ್ಲ. ಹಾಗೆ ನೋಡಿದರೆ ಇದೊಂದು ವರ್ಣವೇ ಅಲ್ಲ; ಇದೊಂದು ವರ್ಗ. ರಾಜಕೀಯ ಅಧಿಕಾರ ಅನುಭವಿಸಿದ ಎಲ್ಲರೂ ಕ್ಷತ್ರಿಯರೇ.

ದೇಗುಲಗಳು ಒಳಿತನ್ನೇ ಮಾಡಿಲ್ಲ ಎಂಬುದು ಈ ಲೇಖನದ ಅಭಿಪ್ರಾಯವಲ್ಲ. ಒಳಿತುಗಳನ್ನು ಹೇಳುವುದು ಇಲ್ಲಿನ ಉದ್ದೇಶವೂ ಅಲ್ಲ. ಆದರೆ ನಮ್ಮ ಸಾಮಾಜಿಕ ಆರೋಗ್ಯಕ್ಕೆ ದೇಗುಲಗಳು ಒಳಿತಿಗಿಂತ ಹೆಚ್ಚು ಕೆಡುಕನ್ನೇ ಮಾಡಿವೆ ಎಂಬುದಂತೂ ನಿಜ. ಹಾಗೇ ಈ ಲೇಖನದ ಉದ್ದೇಶ ಇತಿಹಾಸದ ಪುನರ್‌ನಿರ್ಮಾಣ ಅಲ್ಲ. ಅಥವಾ ಚಾರಿತ್ರಿಕ ಸಂಬಂಧಗಳನ್ನು ಆಯಾ ಸಾಂದರ್ಭಿಕತೆಗಳೊಂದಿಗೆ ಗುರ್ತಿಸುವ ಪ್ರಯತ್ನವನ್ನೇ ಉದ್ದೇಶವಾಗಿಟ್ಟುಕೊಂಡದ್ದಲ್ಲ. ಇದೆಲ್ಲದರ ಮೂಲಕ ವರ್ತಮಾನದ ಪ್ರಯುಕ್ತತೆ ಏನೆಂದು ಕೇಳಿಕೊಳ್ಳುವುದು ಇಲ್ಲಿಯ ಮೂಲೋದ್ದೇಶ : ಆದರೂ.......

ನಾವಿಂದು ನಮ್ಮ ಭವ್ಯ ದೇಗುಲಗಳನ್ನು ನೋಡುತ್ತಾ ಎಷ್ಟೇ ಹೆಮ್ಮೆ ಪಟ್ಟುಕೊಂಡರೂ ಅವುಗಳ ಹಿಂದೆ ಸಾಮಾಜಿಕ ಅಸಮಾನತೆಯ, ಶೋಷಣೆಯ, ಹಸಿವಿನ, ಸ್ವಾರ್ಥಮೂಲ ಕ್ರೌರ್ಯದ ಕತೆಗಳಿವೆ. ಅಂತೆಯೇ, ಯುದ್ಧ ಖೈದಿಗಳ, ಗುಲಾಮರ, ಶಿಲ್ಪಿಗಳ, ಸಾಮಾನ್ಯರ ಅವಿರತ ಪರಿಶ್ರಮದ ಕತೆಗಳಿವೆ ಎಂಬುದನ್ನು ನಾವು ಎಂದಿಗೂ ಮರೆಯುವಂತಿಲ್ಲ.

**ರಾಮಲಿಂಗಪ್ಪ ಟಿ. ಬೇಗೂರು**
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕುಕನೂರು, ಕೊಪ್ಪಳ ಜಿಲ್ಲೆ

---

*(೬೧ನೇ ಪುಟದಿಂದ)*

ಸೀತೆಯ ನೋವು, ಕಾವೇರಿಯ ಸವಾಲುಗಳು ನಟನೆ ಮತ್ತು ಸಂಭಾಷಣೆಗಳಲ್ಲಿ ಎದ್ದುಕಾಣುತ್ತವೆ. ಚಿತ್ರದ ಯಶಸ್ಸಿಗೆ ಹಂಸಲೇಖರ ಸಂಗೀತ, ಬರಗೂರರ ಹಾಡುಗಳು ತುಂಬಾ ಪ್ಲಸ್ ಪಾಯಿಂಟ್. ''ಎಂಥ ಎಂಥ ವೇಷನೋ'' ಶುರುವಾಗುತ್ತಲೇ ತುಮಕೂರಿನ ಬೆಟ್ಟ, ಗುಡ್ಡ, ಹಳ್ಳ-ಕೊಳ್ಳ, ಕೆರೆ-ಕಾಲುವೆ, ಬಾವಿ, ಹೊಲ-ಗದ್ದೆಗಳ ವಿಹಂಗಮ ದರ್ಶನವಾಗುತ್ತದೆ. ಹಾಡಿನಲ್ಲಿಯ ವೇಷದ ಅರ್ಥಕ್ಕೆ ಪ್ರಕೃತಿ, ಪಟೇಲ, ಪರಂಗಿ, ಶಿಕ್ಷಕಿ, ಸೀತೆ, ರಂಗ, ಗೌರಿಯಂಥವರೆಲ್ಲ ಬಂದು ಹೋಗುತ್ತಾರೆ. ''ಮಾಯಾಜಿಂಕೆ ಮಾಯಾಜಿಂಕೆ'' ಹಾಡಿನ ಸಂದರ್ಭವಂತೂ ಪ್ರೀತಿ-ಪ್ರೇಮ-ವಿರಹಗಳ ತಾಪಾಯಣ. ಇದಕ್ಕೆ ತಕ್ಕಂತೆ ಮುಳ್ಳಿನ ಕಂಟಿ, ಒಣಗಿದ ಹುಲ್ಲು, ಆ ಹುಲ್ಲಿಗೆ ಹತ್ತಿಕೊಂಡ ಬೆಂಕಿ ದೃಶ್ಯದಲ್ಲಿ ಪೂರಕವಾಗಿ ನಿಲ್ಲುತ್ತವೆ. ''ಅನ್ನ ಇಟ್ಟ ಮನೆಗೆ ಕನ್ನ'' ಗೀತೆಗೆ ಅಪಾರ ಅಂತಃಕರಣವಿದೆ. ಹಡೆದ-ಪಡೆದ ಕರುಳುಗಳು ರಾಮನ ವಿದಾಯಕ್ಕೆ ಅಬ್ಬರಿಸಿ ಅಳುತ್ತವೆ. ಪಟೇಲನ ಊರಿನಿಂದ ನಿರ್ಗಮನಗೊಳ್ಳುವ ಉಪಸಂಸ್ಕೃತಿಯ ವೇಷಗಾರರು ಮತ್ತೆ ತಮ್ಮ ಮೂಲ ಕಾಡಿಗೆ ಸರಿದುಕೊಳ್ಳುವಲ್ಲಿ ಹಾಡು ಅರ್ಥಗರ್ಭಿತವಾಗಿ ಮಿಡಿಯುತ್ತದೆ. ಬಂಡಾಯದ ತುಟ್ಟ ತುದಿ ಹಿಡಿಸುವ ಗೀತೆ ''ಏಯ್ ತುಂಡು ನಾಡಿನ ಒಡೆಯ ದಾಟಿ ಬಂದನು ಬಂದನು ಗಡಿಯ''ದಲ್ಲಿ ದುರ್ಗದ ಬಯಲಲ್ಲಿ ಸೇರಿದ ವೀರಗಾಸೆ, ಡೊಳ್ಳು, ಹಲಗೆ, ಮೇಳಗಳು ಬಲಿಷ್ಟ ಯುವಕರ ಮಧ್ಯೆ ಹುರಿದುಂಬಿ ಕುಣಿಯುತ್ತವೆ, ಕೇಳುತ್ತವೆ, ಕೆರಳುತ್ತವೆ. ಗುಂಡು ಹೊಡೆದವರ ವಿರುದ್ಧ ''ಬಂಡೆದ್ದೇವೊ ನಾವ್ ಬಂಡೆದ್ದೇವೊ'' ಎಂದು ಬಹಿರಂಗವಾಗಿ ಅರ್ಭಟಿಸುತ್ತವೆ. ಕೊನೆಗೆ ಈ ಎಲ್ಲಾ ಉಪಸಂಸ್ಕೃತಿ ಸಮುದಾಯಗಳ ಒಗ್ಗಟ್ಟಿನ ವಿಜಯವನ್ನು ''ಜಗ್ಗದು ಜಗ್ಗದು ಯಾರಿಗು ಜಗ್ಗದು ಇಂಡಿಯಾ, ನಮ್ಮಿಂಡಿಯಾ'' ಹಾಡಿನಲ್ಲಿ ಪ್ರತಿಬಿಂಬಿಸುತ್ತದೆ.

ಹಗಲುವೇಷದಲ್ಲಿ [illegible] ಇಂದು ಓದಿದ [illegible] ಕೊಡಬಹುದು [illegible] ಆಗಿರಬಹುದು. ಆದರೆ ಕಥೆ, ಚಿತ್ರಕಥೆ, ನಿರ್ದೇಶನ, ಸಂಭಾಷಣೆಗಳ ಜವಾಬ್ದಾರಿ ಹೊತ್ತ ಬರಗೂರು ರಾಮಚಂದ್ರಪ್ಪ ಅವರಿಗೆ ಮಾತ್ರ ತೃಪ್ತಿ ಇದೆ. ಯಾಕೆಂದರೆ, ಕೆಳ ವರ್ಗದ ಕಥನಗಳಿಗೆ ಇಷ್ಟು ಪ್ರಮಾಣದಲ್ಲಿ ಪ್ರೇಕ್ಷಕರು ಸಿಕ್ಕಿದ್ದೇ ಹೆಚ್ಚು ಎನ್ನುತ್ತಾರೆ. ಇವತ್ತಿನ ತರ್ಲೆ ಸಿನಿಮಾಗಳ ಟ್ರೆಂಡ್‌ನಲ್ಲಿ ನೋಡುವ ಕೆಲ ಹುಡುಗ-ಹುಡುಗಿಯರಿಗೆ ತಮ್ಮ ಅಸ್ತಿತ್ವ ಕುರಿತು ಆಲೋಚಿಸುವ ಶಕ್ತಿಯೇ ಕಡಿಮೆಯಾಗುತ್ತಿದೆ. ಏನಿದ್ದರೂ ಇವರಿಗೆ ಮೂರು ತಾಸಿನ ಮಜಾ ಬೇಕು. ಭಯಂಕರ ಸಂಗೀತ, ಹೊಡೆದಾಟ ಮತ್ತು ಅವ್ವನ್, ಅಕ್ಕನ್ ಸಂಭಾಷಣೆಗಳು ಇವರಿಗೆ ಇಷ್ಟ. ಇಂಥ ಸ್ಥಿತಿಯಲ್ಲಿ ಓದು, ವಿಚಾರ, ಹೋರಾಟ, ಬದುಕು, ಬಂಡಾಯಗಳಿಗೆ ಇವರಲ್ಲಿ ಜಾಗವೆಲ್ಲಿದೆ? ಸರಿ, ಇದೆಲ್ಲ ಹಗಲುವೇಷದ ಹೊರಗಿನ ಮಾತು; ಒಳಗೇನಾದರೂ ಬಿರುಕಿದೆಯೇ? ಕೆಲವಿವೆ. ಪ್ರೇಕ್ಷಕನ ಗೊಣಗಾಟದ ಮೇಲೆ ಅರ್ಥೈಸಿ ಹೇಳುವುದಾದರೆ, ಅದು ಕಥಾವಸ್ತುವಿನ ಕ್ರಿಯೆ-ಪ್ರತಿಕ್ರಿಯೆಗೆ ಸಂಬಂಧಿಸಿದ್ದು. ಇಲ್ಲಿ ಕಂದಾಯ ಹೇರುವ ಪರಂಗಿ ಮತ್ತು ಪಟೇಲರ ಕಾರ್ಯಾಚರಣೆ ಪ್ರೇಕ್ಷಕನ ಕಾಲದ್ದಲ್ಲ. ಬ್ರಿಟಿಷ್ ದಿನಗಳನ್ನು ಆತ ಕಲ್ಪಿಸಿಕೊಳ್ಳಬೇಕಷ್ಟೆ. ಕಲ್ಪಿಸಿಕೊಂಡಾಗಲೇ ರಾಮನ ಪ್ರತಿಕ್ರಿಯೆಗೆ ಜೀವ ಬರುತ್ತದೆ. ಆದರೆ ಇಲ್ಲಿ ಪರಂಗಿ ಮತ್ತು ಪಟೇಲರ ಕ್ರಿಯೆಗಳು ಗೌಣವಾಗಿಯೂ, ರಾಮ-ಸೀತೆ-ಶಿಕ್ಷಕಿಯರ ಪ್ರತಿಕ್ರಿಯೆಗಳು ಪ್ರಧಾನವಾಗಿಯೂ ಪ್ರೇಕ್ಷಕ ಗ್ರಹಿಸುತ್ತಾನೆ. ಯಾಕೆಂದರೆ ಕ್ರಿಯೆ ಕ್ರೂರವಾಗಿದ್ದಷ್ಟು, ಪ್ರತಿಕ್ರಿಯೆಗೆ ಬಲ ಜಾಸ್ತಿ. ಇನ್ನು ರಾಮ ಇದ್ದಾನೆ ಎನ್ನುವ ಕಾರಣಕ್ಕೆ ಸೀತೆ, ಗೌರಿ ಇದ್ದಾಳೆ ಎನ್ನುವ ಕಾರಣಕ್ಕೆ ರಂಗ, ಇಲ್ಲಿ ಪ್ರವೇಶ ಪಡೆದಿದ್ದಾರೆನ್ನಿಸುತ್ತದೆ. ಈ ಎರಡೂ ಜೋಡಿಗಳ ಪ್ರೀತಿ-ಪ್ರೇಮ ಕಥಾ ವಸ್ತುವಿನ ಸೈಡ್ ವಿಂಗಿನಲ್ಲೇ ಸಾಗುತ್ತದೆ. ಕೊನೆಗೆ ಅಂತ್ಯ ಭಾಗಕ್ಕೆ ಮರೆಯೂ ಆಗುತ್ತದೆ. ಪಾಪ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದ ಪ್ರೇಕ್ಷಕನಿಗೆ ಇದರಿಂದ ನಿರಾಸೆ ಆಗಿರಲೂಬಹುದು. ಆದರೆ ಬರಗೂರರಿಗೆ ಈ ಪ್ರೀತಿ ಪ್ರೇಮ ಪ್ರಣಯಗಳು ಮುಖ್ಯವಾಗಿರಲಿಲ್ಲ. ಅವರ ಕಣ್ಣ ಮುಂದೆ ಸಿದ್ಧಾಂತ, ಸಂಘಟನೆ, ಸಂಘರ್ಷದ ದಿಕ್ಕುಗಳಿದ್ದವು. ಪ್ರಭುವರ್ಗದ ವಿರುದ್ಧ ಕಲಾವಿದರನ್ನು ಸಂಘಟಿಸುವ ಬಂಡಾಯ ಸಾಹಿತ್ಯ ಸಂಘಟನೆಯ ಸಿದ್ಧಾಂತವಿತ್ತು. ಹಾಗಾಗಿ ಸಿದ್ಧ ಪ್ರೇಕ್ಷಕ ಉಳಿದರೆ, ಸಾಮಾನ್ಯ ಪ್ರೇಕ್ಷಕ ಎದ್ದು ಹೋಗುತ್ತಾನೆ. ಪ್ರೇಮ ಪ್ರಣಯಗಳಿದ್ದರೆ ಗಲ್ಲಾಪೆಟ್ಟಿಗೆ ತುಂಬುತ್ತದೆನ್ನುವ ಗಾಂಧಿನಗರದ ನಂಬಿಕೆ ಬಹುಶಃ ಬರಗೂರರಿಗೆ ಬೇಕಿರಲಿಲ್ಲ. ಅದು ಬಂಡಾಯದ ಆಶಯವೂ ಅಲ್ಲ. ಚಿತ್ರದ ಕೊನೆಯ ದೃಶ್ಯಕ್ಕೆ ಬಂದಾಗ ಮೆದುಳು ಮತ್ತು ಕರುಳಿನ ಗುದ್ದಾಟದಲ್ಲಿ ಕಥಾವಸ್ತು ನಲುಗಿದಂತೆ ಭಾಸವಾಗುತ್ತದೆ. ರಾಮನ ತಂದೆ-ತಾಯಿಯರು ಇನ್ನೇನು ಪರಂಗಿ - ಪಟೇಲನ ಗಲ್ಲು ಶಿಕ್ಷೆಗೆ ಗುರಿಯಾಗುತ್ತಾರೆನ್ನುವಾಗ ಇದ್ದಕ್ಕಿದ್ದಂತೆ ಪಟೇಲ ಮತ್ತು ಶಾನುಭೋಗರು ರಾಮನ ಪರ ನಿಲುವು ತಾಳುತ್ತಾರೆ. ಇದು ಹೋರಾಟವೊಂದರಲ್ಲಿ ಸಾಧ್ಯವೇ? ಪ್ರೇಕ್ಷಕನ ಮುನುಗಾಟ ತಮ್ಮ ಪರಂಪರಾಗತ ಮನಸ್ಸುಗಳನ್ನು ಇಷ್ಟು ಬೇಗ ಬದಲಾಯಿಸಿಕೊಳ್ಳಲಾರರೆಂದೇ ಈತನ ಅನಿಸಿಕೆ. ಬಂಡಾಯದ ಬದುಕು ಸಿನಿಮಾಕ್ಕೆ ವಸ್ತುವಾದರೆ ಅದು ಸುಖಾಂತ್ಯಗೊಳ್ಳಲೇಬೇಕೆ? ಪ್ರೇಕ್ಷಕನ ತೊಳಲಾಟ ಕಡೆಗೂ ಯಥಾ ಪ್ರಕಾರ ಒಬ್ಬ 'ಹೀರೊ' ಎಲ್ಲ ಕೆಡಕನ್ನೂ ನಿವಾರಿಸುತ್ತಾನೆ! ಅವನು ಬರುವವರೆಗೆ ಜನ ಸಮುದಾಯ ಆತಂಕದಿಂದ ಮುದುರಿ, ಬೆದರಿ ಕುಳಿತಿರುತ್ತದೆ. ಚಿತ್ರದ ಉತ್ತರಾರ್ಧದಲ್ಲಿ ಸಂಭಾಷಣೆ ಮತ್ತೆ ಮತ್ತೆ ಸ್ವಲ್ಪ ಗಿರಕಿ ಹೊಡೆಯುತ್ತದೆ. 'ಗುಬ್ಬಚ್ಚಿ' ಎನ್ನುವ ಒಂದೇ ಪದವನ್ನು ಮೂರ್ನಾಲ್ಕು ಪಾತ್ರಗಳು ಹತ್ತಾರು ಬಾರಿ ಆಡುತ್ತವೆ. ಅದೇ ಅರ್ಥ ಬರುವ ಮಾತೂ ಹೇಳುತ್ತವೆ. ಈ ರೀತಿಯ ಕೆಲ ತೊಡಕು ಬಿಟ್ಟರೆ ''ಹಗಲುವೇಷ'' ಕನ್ನಡ ಚಲನಚಿತ್ರಕ್ಕೆ ಈ ಶತಮಾನದ ಹೊಸ ಸೇರ್ಪಡೆ. ಹೊಸ ವಸ್ತು, ಭಾಷೆ, ತಂತ್ರ, ನಟನೆಗಳಿಂದ ಚಿತ್ರವನ್ನು ಜೀವಂತ ಇಡುವಲ್ಲಿ ಖಂಡಿತಾ ನಿರ್ದೇಶಕರು ಗೆದ್ದಿದ್ದಾರೆ. ಬಂಡಾಯದ ಆಶೋತ್ತರಗಳನ್ನು ಕಂಡರಿಸುವಲ್ಲಿ ಬರಗೂರರು ಮಾಡಿದ ಇಲ್ಲಿಯ ಪ್ರಯತ್ನ ನಿಜಕ್ಕೂ ಸ್ವಾಗತಾರ್ಹ.

**ಡಾ॥ ರಂಗರಾಜ ವನದುರ್ಗ**
ಕನ್ನಡ ರೀಡರ್, ಕುವೆಂಪು ವಿ.ವಿ. . ಶಿವಮೊಗ್ಗ ಜಿಲ್ಲೆ

# ಯೋಗಪ್ರವೇಶ-೧೩

ಜಿ. ರಾಮಕೃಷ್ಣ

ಮಾನಸಿಕ ಸಂಚಾರವನ್ನು ಕಡಿಮೆ ಮಾಡುತ್ತಾ ಕ್ರಮೇಣ ಏಕಾಗ್ರತೆಯತ್ತ ಹೊರಳಲು ಯೋಗಪದ್ಧತಿಯಲ್ಲಿ ಸೂಚಿಸಲಾಗಿರುವ ಕ್ರಮಗಳಲ್ಲಿ ಕೆಲವನ್ನು ಈವರೆಗೆ ಪ್ರಸ್ತಾಪಿಸಿದ್ದಾಯಿತು. ಉಸಿರಾಟ, ಮಾಂಸಖಂಡಗಳು ಹಾಗೂ ನರಗಳನ್ನು ಕುರಿತಾದ ಪ್ರಕ್ರಿಯೆ ಇದು ಎಂದು ಸ್ಥೂಲವಾಗಿ ಹೇಳಬಹುದು. ದೇಹದ ಇತರ ಅಂಗಗಳಿಗೆ ಇದು ಸಂಬಂಧಿಸಿಲ್ಲವೆಂದು ಇದರರ್ಥವಲ್ಲ. ಉದಾಹರಣೆಗೆ, ಮಿದುಳಿನ ಭಾಗವಹಿಸುವಿಕೆ ಇಲ್ಲದ ಯಾವ ಯೋಗಾಭ್ಯಾಸ ತಾನೆ ಸಾಧ್ಯ ? ದೈಹಿಕ ವ್ಯಾಯಾಮ ಸಹ ಯೋಗಾಭ್ಯಾಸದ ಪರಿಧಿಯಲ್ಲಿ ಸೇರಿದೆ. ಏಕೆಂದರೆ, ದೇಹ ಮತ್ತು ಮನಸ್ಸು ಪರಸ್ಪರವಾಗಿ ಒಂದನ್ನೊಂದು ಪ್ರಭಾವಿಸುತ್ತವೆ. ಮನಸ್ಸನ್ನು ನಿರ್ಮಲವಾಗಿ ಇರಿಸಲು ದೇಹದ ಸಹಕಾರ ಅತ್ಯವಶ್ಯಕವಾದ್ದರಿಂದ ದೇಹವನ್ನು ಶಿಸ್ತು ಮತ್ತು ತರಬೇತಿಗೆ ಗುರಿ ಮಾಡುವುದು ಸಹಜವಾಗಿದೆ.

ಶರೀರದ ಅನೇಕ ಕ್ರಿಯೆಗಳ ಪೈಕಿ ನರಮಂಡಲದ್ದು ಒಂದಾದರೆ ನಿರ್ನಾಳ ಗ್ರಂಥಿಗಳದ್ದು ಇನ್ನೊಂದು. ಇವನ್ನು ಇಂಗ್ಲಿಷಿನಲ್ಲಿ 'ಎಂಡೋಕ್ರಿನ್ ಗ್ಲಾಂಡ್ಸ್' ಎನ್ನುತ್ತಾರೆ. ಇವೆರಡನ್ನೂ ಸಮಸ್ಥಿತಿಯಲ್ಲಿಟ್ಟರೆ ದೇಹಾರೋಗ್ಯ ಬಹುಮಟ್ಟಿಗೆ ಸುಧಾರಿಸಿದಂತೆ ಎನ್ನಬಹುದು. ಯೋಗಾಸನಗಳು ಇದಕ್ಕೆ ಒತ್ತುಕೊಡುತ್ತವೆಂಬುದು ಗಮನಾರ್ಹ.

ಮನುಷ್ಯನ ಭಾವನೆಗಳು ಶರೀರಸ್ಥಿತಿಯಿಂದಲೂ ಪ್ರೇರೇಪಿಸಲ್ಪಡುತ್ತವೆ ಎಂಬುದು ಎಲ್ಲರಿಗೂ ಅನುಭವಸಿದ್ಧ. ಕಾಲಕಾಲಕ್ಕೆ ಪ್ರವೃತ್ತಿಯಾಗದೆ ಮಲಬದ್ಧತೆಯಿಂದ ಘಾಸಿಗೊಳಗಾದವರ ಮಾನಸಿಕ ಜಡತೆ ಯಾರಿಗೆ ತಿಳಿಯದು ! (ಬೌದ್ಧಿಕ ಮಲಬದ್ಧತೆಯನ್ನು ಖಾಯಂ ಆಗಿ ತಮ್ಮದನ್ನಾಗಿರಿಸಿಕೊಂಡಿರುವವರ ಕತೆ ಬಿಡಿ, ಅವರಿಗೆ ಎಲ್ಲದರಲ್ಲೂ ಮೌಢ್ಯ, ಅಸೂಯೆ, ದ್ವೇಷ ಇತ್ಯಾದಿಗಳು ತುಂಬಿರುತ್ತವೆ). ಮಲಬದ್ಧತೆಯಿಂದ ನಿರುತ್ಸಾಹ ಮೂಡುವುದು ನರಮಂಡಲದ ಮೇಲಿನ ಅದರ ಪ್ರಭಾವದಿಂದ. ಆದರಿಂದ ಪೀಡಿತರಾದವರಿಗೆ ಒಮ್ಮೆ ಚೆನ್ನಾಗಿ ಮಲವಿಸರ್ಜನೆಯಾದರೆ ಎಷ್ಟು ಹಗುರದಿಂದಿರುತ್ತಾರೆ, ಎಷ್ಟು ಹೊಸತನದಿಂದ ತುಂಬಿರುತ್ತಾರೆ, ಅಲ್ಲವೆ ? ಅವರಲ್ಲಿ ಹೊಸ ಭಾವನಾಲೋಕವೇ ನಿರ್ಮಾಣವಾಗುತ್ತದೆ.

ಭಾವನೆಗಳ ಒತ್ತಡದಿಂದಾಗಿ ನರಮಂಡಲದಲ್ಲಿ ತೋರಿಬರುವ ವ್ಯತ್ಯಾಸಗಳು ಹಾಗೂ ಆದರಿಂದ ಶರೀರದಲ್ಲಿ ಉಂಟಾಗುವ ಬದಲಾವಣೆಗಳೂ ಅಷ್ಟೇ ಸ್ಪಷ್ಟ. ಪ್ರೀತಿ, ಕೋಪ, ಅಸೂಯೆ, ಮದ, ಮುದ, ದ್ವೇಷ, ಭಯ ಮುಂತಾದುವು ಯಾವ ಪ್ರಮಾಣದಲ್ಲಿದ್ದರೆ ಉಚಿತ ಅಥವಾ ಅನುಚಿತವೆಂಬುದನ್ನು ಅಳೆದು ಇಲ್ಲವೆ ತೂಕಮಾಡಿ ಹೇಳುವ ವಿಚಾರವಲ್ಲ. ಸಮಭಾವ ಮತ್ತು ಭಾವೋದ್ರೇಕ ಎಂಬ ಪದಗಳೇ ವಿವಿಧ ಪ್ರಮಾಣಗಳನ್ನು ಸೂಚಿಸುತ್ತವೆ. ಇದನ್ನು ಚರ್ಚಿಸುತ್ತಾ ಸ್ವಾಮಿ ಕುವಲಯಾನಂದರು ಎರಡು ಅರ್ಥಪೂರ್ಣವಾದ ನಿದರ್ಶನಗಳನ್ನು ನೀಡಿದ್ದಾರೆ : (ಅ) ವೆಸೇಲಿಯಸ್ ಎಂಬೊಬ್ಬ ಶಸ್ತ್ರವೈದ್ಯ ಹೆಣವೊಂದನ್ನು ಕುಯ್ಯುತ್ತಿದ್ದ. ಹೆಣವೆಂದು ಅವನು ತಿಳಿದಿದ್ದ ಆ ಶರೀರದ ಹೃದಯ ಇನ್ನೂ ಪುಟಿಯುತ್ತಿದ್ದುದನ್ನು ಕಂಡ. ಅವನ ಜಂಘಾಬಲ ಉಡುಗಿಹೋಯಿತು. ಜೀವಂತವಿದ್ದವನನ್ನು ಹೀಗೆ ಕೊಂದೆನಲ್ಲಾ ಎಂಬ ಶೋಕ ಅವನಲ್ಲಿ ಎಷ್ಟು ಗಾಢವಾಯಿತೆಂದರೆ ಅಲ್ಲೇ ಕುಸಿದುಬಿದ್ದು ಆತ ಸತ್ತ. (ಆ) ಸೊಫೋಕ್ಲಿಸ್‌ನ ದುರಂತ ನಾಟಕವೊಂದಕ್ಕೆ ಪ್ರಾಚೀನ ಗ್ರೀಸಿನಲ್ಲಿ ಒಂದು ಉನ್ನತ ಪ್ರಶಸ್ತಿ ದೊರೆಯಿತು. ಅದರಿಂದ ಸಂತೋಷದ ಅತಿರೇಕ ಉಂಟಾಗಿ ಅವನು ಮರಣ ಹೊಂದಿದ. ಲೈಬ್ನಿಟ್ಸ್ ಎಂಬ ತತ್ತ್ವಶಾಸ್ತ್ರಜ್ಞನ ಸೋದರ ಸಂಬಂಧಿಯೊಬ್ಬಳು ಕೂಡ ಹಾಗೇ ಸತ್ತಿದ್ದು. ತನ್ನ ಚಿಕ್ಕಪ್ಪನ ಸಾವಿನ ನಂತರ ಅವನ ಮಂಚದಡಿ ಚಿನ್ನವನ್ನು ಹೇರಳವಾಗಿ ಶೇಖರಿಸಿಟ್ಟಿದ್ದುದು ಗೋಚರಿಸಿತು. ಅದಷ್ಟೂ ಅವಳದೇ ಆಗುವುದಿತ್ತು. ಆನಂದದ ಮಹಾಪೂರದಲ್ಲಿ ಕೊಚ್ಚಿಹೋಗಿ ಅವಳು ಅಸುನೀಗಿದಳು.

ಕಾನನ್ ಡಾಯ್ಲ್‌ನ 'ಹೌಂಡ್ ಆಫ್ ದಿ ಬ್ಯಾಸ್ಕರವಿಲ್ಸ್'ನಲ್ಲಿ ಆ ಭಯಂಕರ ನಾಯಿಯನ್ನು ನೋಡಿ ಭಯಭೀತನಾದ ಮನೆಯ ಮಾಲಿಕ ಹೇಗೆ ರಕ್ತ ಹೆಪ್ಪುಗಟ್ಟಿ ಸತ್ತಿದ್ದ ಎಂಬುದನ್ನು ಚಿತ್ರಿಸಲಾಗಿದೆ. ನಾಯಿ ಅವನ ಮೈಮೇಲೆ ಬೀಳಲೇ ಇಲ್ಲ, ಆದರೆ ಅವನು ಹೆಣವಾಗಿದ್ದ! ಕ್ರೌಂಚ ಪಕ್ಷಿಯೊಂದನ್ನು ಕೊಂದ ಒಬ್ಬ ಬೇಡನ ಕ್ರಿಯೆಯು ಒಬ್ಬ ಋಷಿಯನ್ನು ಆ ಪಕ್ಷಿಯ ಪ್ರಿಯತಮೆಯೊಂದಿಗೆ ಸಮೀಕರಿಸಿಕೊಳ್ಳುವಂತೆ ಮಾಡಿತು. ಶೋಕಸಾಗರದಲ್ಲಿ ಮುಳುಗಿದ ವಾಲ್ಮೀಕಿ ಮೃತಿಹೊಂದಲಿಲ್ಲ; ಬದಲಾಗಿ ಪುಂಖಾನುಪುಂಖವಾಗಿ ಶ್ಲೋಕಗಳನ್ನು ರಚಿಸುತ್ತಾ ಮಹಾಕಾವ್ಯವನ್ನು ಸೃಷ್ಟಿಸಿದ. ಶೋಕವು ಶ್ಲೋಕತ್ವವಾಗಿ ಪರಿಣಮಿಸಿತು ಎನ್ನುತ್ತಾನೆ ಆನಂದವರ್ಧನ.

ಭಾವನೆಗಳ ಒತ್ತಡವು ನರಮಂಡಲದ ಮೇಲೆ ಎಂತಹ ಪ್ರಭಾವ ಬೀರುತ್ತದೆಂಬುದಕ್ಕೆ ಇದೆಲ್ಲಾ ಸಾಕ್ಷಿ. ಶೋಕ, ಆನಂದ, ಭಯ ಇವೆಲ್ಲಾ ಒಮ್ಮೆಲೇ ಘನೀಭೂತವಾಗಿ ಏರಿಬರುವುದರಿಂದ ಉಂಟಾಗುವ ಪರಿಣಾಮಗಳು ಅಪರಿಮಿತ. ಅಕಸ್ಮಾತ್ತಾಗಿ ಹೀಗೆ ತೋರಿಬರುವ ಭಾವನೆಗಳ ಒತ್ತಡ ಅಷ್ಟು ಆಘಾತಕರವಲ್ಲದಿದ್ದಾಗಲೂ ನರಮಂಡಲದ ಮೇಲೆ ಪ್ರಭಾವವಿದ್ದೇ ಇರುತ್ತದೆ. ೧೮೭೦ರಲ್ಲಿ ಜರ್ಮನಿಯ ಸ್ಟ್ರಾಸ್‌ಬುರ್ಗ್ ಮೇಲೆ ಬಾಂಬ್ ಧಾಳಿ ನಡೆದಾಗ ಇದ್ದಕ್ಕಿದ್ದಂತೆ ಆ ಊರಿನ ಅನೇಕರನ್ನು ಮಧುಮೇಹ ಕಾಡಿಸಲಾರಂಭಿಸಿತಂತೆ. ಹಾಗೆಂದು ನೌನಿನ್ ಎಂಬ ತಜ್ಞ ದಾಖಲಿಸಿದ್ದಾನೆ. ನಮ್ಮಲ್ಲಿ ಆಗಾಗ್ಗೆ ಉಂಟಾಗುವ ಕ್ಷೋಭೆಗಳಿಂದ (ಮತೀಯ ಗಲಭೆಗಳು, ಮಸೀದಿ ಧ್ವಂಸ, ಚರ್ಚುಗಳಿಗೆ ಸಿಡಿಮದ್ದು, ಮಠಾಧಿಪತಿಗಳ ಕುತಂತ್ರ ಬಯಲಾಗುವುದು, ಇತ್ಯಾದಿ) ಇಂತಹ ಎಷ್ಟೆಷ್ಟು ಅನಾರೋಗ್ಯ ಪ್ರಕರಣಗಳು ಘಟಿಸಿವೆ ಎಂಬುದನ್ನು ದಾಖಲಿಸಿದರೆ ನರಮಂಡಲದ ಮೇಲಿನ ಆಘಾತವು ನಿರ್ನಾಳ ಗ್ರಂಥಿಗಳಿಗೆ ಎಂತಹ ಹೊಡೆತ ನೀಡುತ್ತದೆಂಬುದು ಸ್ಪಷ್ಟವಾಗುತ್ತದೆ.

ನಿರ್ನಾಳ ಗ್ರಂಥಿಗಳಲ್ಲಿ ಪ್ರಮುಖವಾದುವು ಪಿಟ್ಯುಟರಿ, ಥೈರಾಯಿಡ್, ಅಡ್ರೆನಲ್ಸ್ ಮತ್ತು ಗೊನಾಡ್ಸ್ ಎನ್ನುತ್ತಾರೆ (ಚಿತ್ರ ನೋಡಿ). ಭಾವನೆಗಳ ರಾಹಿತ್ಯ ಮತ್ತು ಉದ್ರೇಕಗಳು ಈ ಗ್ರಂಥಿಗಳ ಮೇಲೆ ಅಗಾಧ ಪರಿಣಾಮ ಬೀರುತ್ತವೆ. ಉದಾಹರಣೆಗೆ, ಭಾವೋದ್ರೇಕಕ್ಕೆ ಅಡ್ರೆನಲ್ ಗ್ರಂಥಿಗಳು ಸ್ಪಂದಿಸುವುದು ರಕ್ತದ ಒತ್ತಡವನ್ನು ಹೆಚ್ಚಿಸುವುದರಿಂದ. ಮಾನಸಿಕ ಖಿನ್ನತೆಯು ಅತಿಯಾದಾಗ ಥೈರಾಯಿಡ್ ಗ್ರಂಥಿಗಳು ಎಷ್ಟು ನಶಿಸುತ್ತವೆಂದರೆ ಮೈಕ್ಸೋಡೆಮ ಎಂಬ ಕಾಹಿಲೆ ತಕ್ಷಣವೇ ಹುಟ್ಟಿಕೊಳ್ಳುತ್ತದೆ. ವಿಷವನ್ನು ನಿಗ್ರಹಿಸಲು ಪ್ರಕೃತಿಯು ಮಾನವ ಶರೀರದಲ್ಲಿ ಥೈರಾಯಿಡ್ ಗ್ರಂಥಿಗಳನ್ನು ಅವಳವಡಿಸಿದೆ; ಅದು ನಶಿಸಿದರೆ ಪ್ರಮಾದವಾಗದಿರಲು ಹೇಗೆ ಸಾಧ್ಯ? ಪಿಟ್ಯುಟರಿ ಒಂದರ್ಥದಲ್ಲಿ ಸರ್ವೇಕ್ಷಣದ ಅಧಿಪತಿ. ಅದಕ್ಕೆ ಪೆಟ್ಟುಬಿದ್ದರೆ ಸ್ವಾಸ್ಥ್ಯ ದೂರದ ಮಾತಾಗುತ್ತದೆ. ಇನ್ನು ಗೊನಾಡ್ಸ್ : ಅವು ಜನನಾಂಗಗಳ ನಿರ್ದೇಶಕ ಸೂತ್ರ ವಹಿಸಿವೆ. ಅವಕ್ಕೆ ಮಾರಕವಾಗುವ ರೀತಿಯಲ್ಲಿ ಭಾವನೆಗಳು ಭೋರ್ಗರೆದರೆ ಪರಿಣಾಮ ಅನೂಹ್ಯ.

ಬೇರೆಷ್ಟೋ ವಿಧಗಳಲ್ಲಿ ಶರೀರದ ಮೇಲೆ ಪ್ರಭಾವ ಬೀರುವ ಯೋಗಾಭ್ಯಾಸವು ಯೋಗಾಸನಗಳ ಮೂಲಕ ನರಮಂಡಲ ಮತ್ತು ನಿರ್ನಾಳ ಗ್ರಂಥಿಗಳನ್ನು ವಿಶೇಷವಾಗಿ ಪೋಷಿಸುತ್ತದೆ. ಇನ್ನು ಮುಂದೆ ಕ್ರಮವಾಗಿ ಕೆಲವು ಯೋಗಾಸನಗಳ ಅಭ್ಯಾಸ ಮತ್ತು ಪ್ರಭಾವಗಳನ್ನು ಪರಿಶೀಲಿಸೋಣ. ಮೊದಲಿಗೆ ಸರ್ವಾಂಗಾಸನವೆಂಬ ಆಸನದತ್ತ ನಮ್ಮ ಗಮನವಿರುತ್ತದೆ. ಯಾವುದೇ ಆಸನವಾಗಲಿ ಬೇಸರಿಸದೆ ಅಭ್ಯಾಸ ಮಾಡಿದರೆ ಅದು ಜಯಿಸುತ್ತದೆ; ಆಸನ ಜಯದಿಂದ ಆಹಾರ ಜಯ, ಅದರಿಂದ ನಿದ್ರಾಜಯ (ನಿದ್ರೆಯಲ್ಲಿ ಅಲಸ್ಯವೂ ಸೇರುತ್ತದೆ). ಎನ್ನುತ್ತಾನೆ ಶಾಂತರಸ (ಯೋಗರತ್ನಾಕರ ೩.೩-೪).

# ನಮಗೆ ಗೌರವ ಹೇಗೆ ಬರುತ್ತದೆ ?

**ಗು**ರು ಹಿರಿಯರಿಗೆ ಗೌರವ, ಮಾತಾಪಿತರಲ್ಲಿ ಪ್ರೀತಿ, ದೇಶದ ಮೇಲೆ ಪ್ರೇಮ, ಇವೆಲ್ಲ ಈಗೀಗ ಕಡಿಮೆಯಾಗುತ್ತಿದೆ ಎಂಬುದಾಗಿ ಅನೇಕರ ದೂರು. ಇದು ನಿಜವೂ ಹೌದು. ಅನೇಕ ಗುರುಹಿರಿಯರು ನಿಜವಾಗಿ ಗೌರವಕ್ಕೆ ಅರ್ಹರಾಗಿದ್ದಾರೆಯೇ, ನಾವು ಮಕ್ಕಳಲ್ಲಿ ದೇಶಪ್ರೇಮ ಬೆಳೆಸುವಲ್ಲಿ ಎಷ್ಟು ಸಫಲರಾಗಿದ್ದೇವೆ, ಎಂದು ಆತ್ಮವಿಮರ್ಶೆ ಮಾಡಿಕೊಳ್ಳಬೇಕು.

ಶಿಕ್ಷಕರು ತಾವು ಗುರುಗಳಾಗಿದ್ದುಕೊಂಡು, ತಮ್ಮ ಸ್ಥಾನಕ್ಕೆ ಗೌರವ ಸಿಗಬೇಕೆಂದು ಬಯಸುವುದರಲ್ಲಿ ತಪ್ಪೇನೂ ಇಲ್ಲ. ಆದರೆ ಗೌರವವೆನ್ನುವುದು ತಾನು ಕೇಳಿ ಪಡಕೊಳ್ಳುವಂಥಾದ್ದಲ್ಲ, ತಾನು ಅದಕ್ಕೆ ತಕ್ಕ ಅರ್ಹತೆಯನ್ನು ಗಳಿಸಿಕೊಳ್ಳುವುದು ಮುಖ್ಯ ಎನ್ನುವ ವಿಚಾರ ಅನೇಕ ಗುರುಗಳಿಗೇ ಗೊತ್ತಿಲ್ಲ. ಒಂದು ವೇಳೆ ತನಗೆ ಗೌರವ ಸಿಗದಿದ್ದರೆ, ಅದಕ್ಕಾಗಿ ಅಪೇಕ್ಷೆ ಪಡುವುದೂ, ಅದಕ್ಕಾಗಿ ಯತ್ನಿಸುವುದು ಕೂಡಾ ಗೌರವಕ್ಕೆ ಕುಂದುಂಟು ಮಾಡುತ್ತದೆನ್ನುವುದನ್ನು ನಾವು ತಿಳಿದುಕೊಳ್ಳಬೇಕು. ನಮ್ಮಲ್ಲಿ ಅರ್ಹತೆ ಇದ್ದರೆ, ಬಹುಶಃ ಜನರು ಗೌರವಿಸುತ್ತಾರೆನ್ನುವುದಕ್ಕೆ ಅನುಮಾನವೇನೂ ಬೇಡ. ಒಂದು ವೇಳೆ ನಮ್ಮಲ್ಲಿ ಅರ್ಹತೆ ಇದ್ದಾಗ್ಯೂ ಕೂಡ ನಮಗೆ ಗೌರವ ಸಿಗಲಿಲ್ಲವಲ್ಲಾ ಎಂದು ಕೊರಗುವುದು, ನಮ್ಮ ಗೌರವಾರ್ಹತೆಯನ್ನು ತಗ್ಗಿಸುತ್ತದೆ.

ಈಗೀಗ ಜನರಲ್ಲಿ ನಿಜವಾದ ಯೋಗ್ಯತೆ ಇಲ್ಲದಿರುವುದರಿಂದಲೇ ಅವರು ತಮ್ಮಲ್ಲಿ ಇಲ್ಲದ ಗುಣವನ್ನು ತೋರ್ಪಡಿಸಿಕೊಂಡು, ಸಿಗದ ಗೌರವಕ್ಕೆ ಪಾತ್ರರಾಗಲು ಹಂಬಲಿಸುತ್ತಾರೆ. ಮೇಲಧಿಕಾರಿಗಳಿಗೆ ಅವರ ಕೈಕೆಳಗಿನ ನೌಕರರು ಗೌರವ ಸಲ್ಲಿಸುವುದು ಒಂದು ರೀತಿಯಲ್ಲಿ ಅವರ ಕರ್ತವ್ಯ. ಆದರೆ ಆ ಗೌರವ ಬರೇ ಯಾಂತ್ರಿಕವಾದಾಗ, ನಟನೆಯಾದಾಗ, ಭಯದಿಂದ ತೋರ್ಪಡಿಸಿದಾಗ, ಅದರಿಂದ ಅಧಿಕಾರಿಗಾಗಲಿ, ನೌಕರರಿಗಾಗಲಿ ಮಾನಸಿಕವಾಗಿ ಅಷ್ಟೇನೂ ಪ್ರಯೋಜನವಾಗಲಾರದು.

ಗುರು ಪೀಠಗಳನ್ನು ಗೌರವಿಸಿ, ಸನ್ಯಾಸಿಗಳನ್ನು ಆದರಿಸಿ, ಅವರನ್ನು ಗೌರವಿಸುವುದು ನಮ್ಮಲ್ಲಿ ಅನಾದಿಕಾಲದಿಂದಲೂ ನಡೆದುಕೊಂಡು ಬಂದ ಸಂಪ್ರದಾಯ. ಆದರೆ ಆ ಗುರುಪೀಠಕ್ಕೆ ತಕ್ಕ ಹಾಗೆ ನಡೆದುಕೊಳ್ಳದೆ, ಅನೇಕ ವ್ಯಕ್ತಿಗಳು ಅದಕ್ಕೆ ಅಪಚಾರವೆಸಗುವುದನ್ನು ಜನತೆ ನೋಡುತ್ತಿದ್ದರೂ ಪೀಠದ ಗೌರವವನ್ನೂ ಜೊತೆಗೆ ತನ್ನ ಅಭಿಮಾನವನ್ನೂ ಉಳಿಸಿಕೊಳ್ಳುವ ಸಲುವಾಗಿ ಮೂಕಪ್ರೇಕ್ಷಕನಾಗಿಬಿಡುತ್ತದೆ. ಅಂಥಾ ಸಂದರ್ಭದಲ್ಲಿ ಜನತೆ ತಮಗೆ ಗೌರವ ಕೊಡುತ್ತಿಲ್ಲವೆಂದು ಪೀಠಾಧಿಪತಿಗಳು ಕೊರಗಿದರೆ ತಪ್ಪು ಯಾರದು?

ಆದ್ದರಿಂದ, ಕಾಲವೇ ಕೆಟ್ಟಿದೆ, ಹಿರಿಯರಿಗೆ ಕೊಡುವ ಗೌರವದ ಕಾಲ ಮುಗಿದು ಹೋಯಿತು, ಎಂದು ಚಿಂತಿಸುವುದರಲ್ಲಿ ಯಾವ ಅರ್ಥವೂ ಇಲ್ಲ. ಗೌರವ ಅನ್ನುವಂಥಾದ್ದು, ಆಯಾ ಸ್ಥಾನಕ್ಕೆ ಆಯಾ ವ್ಯಕ್ತಿ ಸಲ್ಲಿಸುವ ಕರ್ತವ್ಯದಿಂದ ಹುಟ್ಟಿಕೊಳ್ಳುವಂಥಾದ್ದು, ಜನತೆ ಅದನ್ನು ಗುರುತಿಸಿ ತೋರ್ಪಡಿಸುವಂಥಾದ್ದೇ ಹೊರತು, ಅಪೇಕ್ಷಿಸಿ ಪಡಕೊಳ್ಳುವಂಥಾದ್ದಲ್ಲ. ಒಂದು ರೀತಿಯಲ್ಲಿ ನೋಡಿದರೆ, ತನಗೆ ಗೌರವ ಸಿಗಲಿಲ್ಲವೆಂದು ಯಾರು ಆಕ್ಷೇಪಿಸುತ್ತಾನೋ ಅವನು ಗೌರವವನ್ನು ಅಪೇಕ್ಷಿಸುತ್ತಾನೆಂದಾಯಿತು. ಹಾಗೆ ಆಗ್ರಹ ಉಳ್ಳವರಿಂದ ಗೌರವ ದೂರದೂರ ಸರಿದು ಹೋಗುತ್ತದೆಂಬುದು ಖಂಡಿತ. ನಿಜವಾದ ವ್ಯಕ್ತಿತ್ವ ಉಳ್ಳವರು, ಗೌರವಾರ್ಹರಾದವರು, ತಮಗೆ ಸಿಗಬೇಕಾದ ಗೌರವ ಸಿಗದಿದ್ದಾಗ ಕೊರಗುವುದಿಲ್ಲ. ಏಕೆಂದರೆ ಅವರು ಅದನ್ನು ನಿರೀಕ್ಷಿಸಿರುವುದಿಲ್ಲ. ಅವರು ತಮ್ಮ ಕರ್ತವ್ಯವನ್ನು ಮಾಡುತ್ತಾ ಹೋಗುತ್ತಾರೆ. ಅಂಥವರು ಗೌರವದ ಬದಲು, ಅಗೌರವ, ನಿಂದೆ, ಅಪಮಾನವಾದಾಗಲೂ ವಿಚಲಿತರಾಗಲಾರರು. ತನ್ನನ್ನು ಅವರು ತಪ್ಪಾಗಿ ತಿಳಿದುಕೊಂಡಿದ್ದಾರೆಂದೋ ಅಥವಾ ಅವರು ಬುದ್ಧಿಹೀನತೆಯಿಂದ ಹಾಗೆ ಮಾಡಿರಬಹುದೆಂದೋ ಭಾವಿಸಿಕೊಳ್ಳಬಹುದು.

ಗೌರವ ಸಿಗದಿದ್ದರೂ, ಎಂಥಾ ಎಡರು ತೊಡರುಗಳು ಎದುರಾದರೂ, ತನ್ನ ಪಾಲಿನ ಕರ್ತವ್ಯವನ್ನು ಯಾರು ನಿರ್ವಹಿಸಿಕೊಂಡು ಬರುತ್ತಾನೋ ಅವನನ್ನು ಗೌರವ ಹುಡುಕಿಕೊಂಡು ಬರುತ್ತದೆ. ಈಗೀಗ ಅನೇಕರನ್ನು ಹುರಿದುಂಬಿಸುವ ಸಲುವಾಗಿ, ಪ್ರಶಸ್ತಿಗಳನ್ನು ನೀಡಿ, ಪುರಸ್ಕರಿಸಿ, ಸನ್ಮಾನಿಸಿ ಗೌರವಿಸುವುದು ಪ್ರಾರಂಭವಾಗಿದೆ. ಇದರಿಂದ ಜಡ ಪ್ರಕೃತಿಯವರಿಗೆ ಒಂದಿಷ್ಟು ಹುರುಪೇನೋ ಬರಬಹುದು. ಆದರೆ ಅದು ತಾತ್ಕಾಲಿಕ. ''ದಕ್ಷತೆ'' ಎನ್ನುವುದು ಯಾವುದೇ ಗೌರವ ಪುರಸ್ಕಾರಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಹುಟ್ಟಿಕೊಳ್ಳುವುದಿಲ್ಲ. ಅದು ಆತನ ಮನೋ ನಿರ್ಧಾರ, ಚಿತ್ತ ಶಕ್ತಿ, ತಾನು ಏನಾಗಿದ್ದೇನೆಂಬ ಅರಿವು ಆತನಲ್ಲಿ ಜಾಗೃತವಾಗಿದ್ದಷ್ಟು ಕಾಲ ಅದೇ ಆತನನ್ನು ತನ್ನ ಕಾರ್ಯದತ್ತ ಮುನ್ನುಗ್ಗಿಸುತ್ತದೆ.

ಗೌರವ ಎನ್ನುವುದು ವ್ಯಕ್ತಿ ನಮ್ಮ ಮುಂದಿರುವಾಗ ಆತನಿಗೆ ಸಲ್ಲಿಸುವ ಮರ್ಯಾದೆಯಾಗಿರದೆ, ಆತ ಹುತಾತ್ಮನಾದ ಮೇಲೆ ಆತನ ಗುಣಗಾನ ಮಾಡಿ, ಸ್ಮಾರಕ ರಚಿಸುವುದು ಈಚೆಗೆ ಒಂದು ಸಂಪ್ರದಾಯವಾಗಿ ಬೆಳೆದಿದೆ. ಪ್ರತಿಯೊಬ್ಬ ಮಹಾಪುರುಷರ, ದಾರ್ಶನಿಕರ, ಮಹಾತ್ಮರ, ವಿಜ್ಞಾನಿಗಳ, ಸಂಶೋಧಕರ, ಕ್ರಾಂತಿಕಾರರ ಪಾಡೂ ಇದೇ. ಇರುವಾಗ ಅವರನ್ನಾರೂ ಗುರುತಿಸದೆ, ಸತ್ತ ಮೇಲೆ ಹಾಡಿ ಹೊಗಳಿ (ಕೆಲವು ಬಾರಿ ಕೊಂದು) ಆತನ ಕೃತಿಯ ಲಾಭ ಪಡೆಯುವುದೇ ದೇಶದ ಜನಗಳ ಪರಿಪಾಠವಾಗಿ ಹೋಗಿದೆ.

ನಾವು ಮಾಡುತ್ತಿರುವದು ಇಡೀ ಮಾನವನ ಕುಲಕ್ಕೆ ಹಿತವಾದುದು ಎಂಬ ಭಾವನೆ ನಮ್ಮಲ್ಲಿದ್ದರೆ ಸಾಕು; ನಮ್ಮ ಕರ್ತವ್ಯವನ್ನು ಅತ್ಯಂತ ಶ್ರದ್ಧೆಯಿಂದ ಮಾಡುತ್ತ ಹೋಗಬೇಕು. ಅದರಿಂದ ಲೋಕಕ್ಕೆ ಹಿತವಾಗುತ್ತದಾದರೆ ಅದೇ ನಮಗೆ ಸಿಗುವ ಪುರಸ್ಕಾರ. ಈ ಬದುಕಿನಲ್ಲಿ ನಮಗೆ ಏನಾದರೂ ಒಂದು ಒಳಿತನ್ನು ಮಾಡುವ ಅಭಿಲಾಷೆ, ಅವಕಾಶ ಒದಗಿದರೆ ಸಾಕು; ಅದಕ್ಕಿಂತ ಮಿಗಿಲಾದ ಗೌರವ, ಪ್ರಶಂಸೆ, ಸಂತೋಷ, ಅಭಿಮಾನ ಇನ್ನೊಂದಿರಲಾರದು. ಆತ್ಮ ತೃಪ್ತಿಯೇ ನಮಗೆ ಸಿಗುವ ಗೌರವ. ಅದೇ ನಾವು ಪಡಬೇಕಾದ ಹೆಮ್ಮೆ. ಇನ್ನು ನಮಗೆ ಪರರಿಂದ ಸಿಗುವ ಗೌರವದಿಂದ ನಮಗೆ ಏನಾಗಲಿಕ್ಕಿದೆ !

ಎಂ. ಕೃಷ್ಣರಾಜ ಕೆದ್ಲಾಯ
ಸಾಮೆತಡ್ಕ, ಪುತ್ತೂರು, ದ.ಕ. - ೫೭೪ ೨೦೧

(೫೯ನೇ ಪುಟ ನೋಡಿ)

ಏನು ಗತಿಯಾಗುತ್ತಿತ್ತೊ? ಒಟ್ಟಿನಲ್ಲಿ ನಮ್ಮ ಅದೃಷ್ಟ ಚೆನ್ನಾಗಿತ್ತು. ಆದರೆ, ಈಗ ಹಿಂದಿರುಗುವುದಾದರೂ ಹೇಗೆ ? ಆಗಲೇ ಸಮಯ ಒಂದು ಗಂಟೆಯಾಗಿತ್ತು. ಇನ್ನು ನಮಗುಳಿದಿದ್ದ ದಾರಿಯೆಂದರೆ ಮತ್ತೆ ಅಪಾಯದ ಅಂಚಿನಲ್ಲಿ ಮೇಲೇರಿ, ಬೆಟ್ಟದಿಂದ ಕೆಳಗಿಳಿದು ಬುಡದಲ್ಲೇ ಹೋಗುವುದು. ಆಗಲೂ ಸಹ ಆನಂದ್‌ಕುಮಾರನೇ ನಿರಾಧಾರವಾಗಿ ಧೈರ್ಯವಾಗಿ ಮೇಲೇರಿ ಹಗ್ಗ ಬಿಟ್ಟು ಎಲ್ಲರನ್ನೂ ಮೇಲಕ್ಕೆ ಕರೆದುಕೊಂಡ. ಜೀವವನ್ನು ಕೈಯಲ್ಲಿ ಹಿಡಿದುಕೊಂಡೇ ಎಲ್ಲರೂ ಸುರಕ್ಷಿತವಾಗಿ ಮೇಲೇರಿ ಸುರಕ್ಷಿತ ಮಾರ್ಗದಲ್ಲಿ ಶಿಬಿರವನ್ನು ಸೇರಿದಾಗ ಮೂರು ಗಂಟೆಯಾಗಿತ್ತು. ಅಷ್ಟು ಹೊತ್ತಿಗಾಗಲೇ ಎಲ್ಲರೂ ಗಾಬರಿಗೊಂಡು ಇನ್ನೂ ಹಿಂದಿರುಗದ ನಮ್ಮನ್ನು ಹುಡುಕಲು ಸ್ಥಳೀಯರೊಡನೆ ಹೊರಟಿದ್ದರು ! ನಮ್ಮನ್ನು ನೋಡಿದೊಡನೆಯೇ ಎಲ್ಲರೂ ನಿರಾಳವಾಗಿ ಉಸಿರಾಡಿದರು. ನಾವು ನಮ್ಮ ಸಾಹಸದ ಸನ್ನಿವೇಶಗಳನ್ನು ವರ್ಣರಂಜಿತವಾಗಿ ವರ್ಣಿಸುತ್ತಾ ಸಂತೋಷಪಟ್ಟೆವು. ಸಾಮಾನ್ಯ ಚಾರಣದಲ್ಲಿ ಅಸಾಮಾನ್ಯ ಸಾಹಸವನ್ನು ಮಾಡಿದ್ದನ್ನು ಮಾತ್ರ ಖಂಡಿತ ಜೀವನದಲ್ಲಿ ಎಂದೆಂದಿಗೂ ಮರೆಯೆವು.

ಊಟ ಮತ್ತು ಸ್ವಲ್ಪ ವಿಶ್ರಾಂತಿಯ ನಂತರ ೯೦ ಡಿಗ್ರಿ ಕೋನದಲ್ಲಿ ಗೋಡೆಯಂತೆ ಲಂಬಾಕಾರವಾಗಿದ್ದ ನೂರಡಿ ಎತ್ತರದ ಬಂಡೆಯಿಂದ ಸ್ಲಿಂಗ್ ತಂತ್ರದಲ್ಲಿ ಬಂಡೆಯಿಂದ ಕೆಳಗಿಳಿವ ವಿಧಾನವನ್ನು ಕಲಿಸಲಾಯಿತು. ಮುಂಗಾಲುಗಳಿಂದ ಬಂಡೆಯನ್ನು ಒದೆಯುತ್ತಾ ಅದರಿಂದ ದೂರಸರಿದು ಹಗ್ಗದ ನೆರವಿನಿಂದ ಬಂಡೆಗೆ ಅಭಿಮುಖವಾಗಿ ಕೆಳಕ್ಕೆ ಜಿಗಿಯುತ್ತಾ ತಳ ಸೇರುವುದು ಒಂದು ರೀತಿಯ ಜೋಕಾಲಿಯ ಮಜವನ್ನು ನೀಡಿತು. ಇದರೊಂದಿಗೆ ನಮ್ಮ ಸಾಹಸ ಕ್ರೀಡೆಗಳ ಶಿಬಿರ ಮುಕ್ತಾಯವಾಯಿತು. ಅಲ್ಲಿ ಪಡೆದ ಅನುಭವಗಳನ್ನೆಲ್ಲಾ ಮೆಲುಕು ಹಾಕುತ್ತಾ ಮನೆ ಸೇರಿದೆವು.

ಸ್ವಾಮಿ ರಾಮಕೃಷ್ಣಾರ್ಪಣಾನಂದ
೩೬೭೧, ಶ್ರೀಕಂಠಮಂಟಪ ಬ್ಲಾಕ್, ನಂಜನಗೂಡು - ೫೭೧ ೩೦೧

# ಅಗಲಿದ ಕಲಾಚೇತನ ಶಂಕರ ಪಾಟೀಲ



**ಕಲಾವಿದ ದಿ|| ಶಂಕರ ಪಾಟೀಲ**

## ನಿಮ್ಮ ಅನಿಸಿಕೆ ಏನು?

*ಇಲ್ಲಿ 'ಹೊಸತು' ಓದುಗರಿಗಾಗಿ ಖ್ಯಾತ ಕಲಾವಿದ ದಿ|| ಶ್ರೀ ಶಂಕರ ಪಾಟೀಲ ಅವರ ನಾಲ್ಕು ವರ್ಣ ಚಿತ್ರಗಳನ್ನು ಪ್ರಕಟಿಸುತ್ತಿದ್ದೇವೆ. ಇವನ್ನು ನೋಡಿದಾಗ ನಿಮಗೆ ಏನೆನ್ನಿಸಿತು? ನಿಮ್ಮ ಅನಿಸಿಕೆಗಳನ್ನು ಅಂಚೆ ಕಾರ್ಡಿನಲ್ಲಿ ಬರೆದು ತಿಳಿಸಿ. ಕಲಾವಿಮರ್ಶಕರ ಪರಿಶೀಲನೆಯ ನಂತರ ನಿಮ್ಮ ಉತ್ತಮ ವಿಮರ್ಶೆಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುತ್ತೇವೆ.*

*-ಸಂ*



**ಹೆ**ಸರಾಂತ ಕಲಾವಿದ, ಕಲಾ ಚಿಂತಕ, ಕವಿ ಶಂಕರ ಪಾಟೀಲರು ಕಳೆದ ಮೇ 15 ರಂದು ಆಕಸ್ಮಿಕವಾಗಿ ನಮ್ಮನ್ನಗಲಿದರು. ನಿಧನವಾದಾಗ ಅವರಿಗೆ ಕೇವಲ 54 ವರ್ಷ. ದಾವಣಗೆರೆಯ ಕುವೆಂಪು ವಿಶ್ವವಿದ್ಯಾಲಯದ ಕಲಾ ಕಾಲೇಜಿನ 'ಕಮರ್ಷಿಯಲ್ ಆರ್ಟ್' ವಿಭಾಗದ ಮುಖ್ಯಸ್ಥರಾಗಿದ್ದರು.

ಧಾರವಾಡ ಜಿಲ್ಲೆಯ ಗರಗನಲ್ಲಿ ಜೂನ್ ಒಂದು 1947ರಲ್ಲಿ ಹುಟ್ಟಿದ ಪಾಟೀಲರು ಮುಂಬೈನ ಸರ್ ಜೆ. ಜೆ. ಇನ್‌ಸ್ಟಿಟ್ಯೂಟ್ ಆಫ್ ಅಪ್ಲೈಡ್ ಆರ್ಟ್ಸ್‌ನಲ್ಲಿ ಪದವಿ ಪಡೆದ ಬಳಿಕ ದಾವಣಗೆರೆಯನ್ನು ತಮ್ಮ ಕಾರ್ಯಕ್ಷೇತ್ರವಾಗಿಸಿಕೊಂಡರು. ಅಲ್ಲಿ 'ಕಲಾಗುರು' ಆರ್ಟ್ ಗ್ಯಾಲರಿ ಶುರುಮಾಡಿದರು. ಹೊಸ ಹೊಸ ಪ್ರತಿಭೆಗಳಿಗೆ ಅವಕಾಶ ನೀಡುವುದು ಅವರ ಧ್ಯೇಯವಾಗಿತ್ತು.

ಕಲೆಯ ನವನವೀನ ಪ್ರಯೋಗ ನಡೆಸುವುದರೊಟ್ಟಿಗೆ ಕಲಾಬರಹವನ್ನೂ ಗಂಭೀರವಾಗಿ ತೆಗೆದುಕೊಂಡ ಶಂಕರ ಪಾಟೀಲರು 'ಚಿತ್ರಕಲಾ ಚಿಂತನೆ' 'ಚಿತ್ರಾಂತರಂಗ' ಹಾಗೂ 'ದಿ ಲಿವ್ವಿಂಗ್ ಲೈನ್' ಎಂಬ ಮಹತ್ವದ ಕೃತಿಗಳನ್ನು ಕಲಾಪ್ರಪಂಚಕ್ಕೆ ಕೊಟ್ಟಿದ್ದಾರೆ. ಕಾವ್ಯ ಪ್ರಯೋಗ ನಡೆಸಿ 'ನಾ ಕವಿತಾ ಬರೆದಿಲ್ಲ' ಎಂಬ ಕವನ ಸಂಕಲನವೂ ಪಾಟೀಲರಿಂದ ರಚನೆಗೊಂಡಿತು. ಚಿತ್ರಕಲೆಯಷ್ಟೇ ಛಾಯಾಚಿತ್ರ ಮಾಧ್ಯಮದಲ್ಲೂ ತಮ್ಮ ಪ್ರತಿಭೆ ಮೆರೆದವರು.

ಕಲೆಯನ್ನು ಅರಿಯುವ ಹಸಿವು ತೀವ್ರಗೊಂಡ ಬಳಿಕ ಹೊರದೇಶಗಳಿಗೆ ಕಲಾಪ್ರದರ್ಶನ ಮತ್ತು ಕಲಾಭ್ಯಾಸಂಗಕ್ಕಾಗಿ ತೆರಳಿದರು. ಕೆನಡ, ಅಮೆರಿಕಾಗಳಲ್ಲಿ ಕಲಾ ಪ್ರದರ್ಶನ ನಡೆಸಿ ಭಾರತೀಯ ಚಿತ್ರಕಲೆಯ ಕುರಿತು ಉಪನ್ಯಾಸ ನೀಡಿದರು. ಅಲ್ಲಿ ಪಾಶ್ಚಾತ್ಯ ಪೌರಾತ್ಯ ಕಲೆಯ ಕುರಿತು ಅಧ್ಯಯನ ನಡೆಸಿದ ಪಾಟೀಲರು ಭಾರತದ ಒಳ ಹೊರಗೆ ಹಲವಾರು ಪ್ರದರ್ಶನ ನಡೆಸಿದ್ದಾರೆ.

ಪಾಟೀಲರ ಕಲೆ ಜನಪದೀಯ ನೆಲೆಯ ಜತೆಗೆ ಆಧ್ಯಾತ್ಮದ ಹೊಳಹುಗಳನ್ನು ಪಡೆದು ಕಲಾರಸಿಕರನ್ನು ತಲುಪಿದೆ. ಅವರು ಇಂಥದ್ದೇ ಎಂಬ ಶೈಲಿ, ಆಶಯಕ್ಕೆ, ತಂತ್ರಗಳಿಗೆ ಒಳಗಾದವರಲ್ಲ. ಕರ್ನಾಟಕದಿಂದ ಹೈದರಬಾದಿನ ಸಾಲಾರಜಂಗ್ ಮ್ಯೂಜಿಯಂನ ಏಕೈಕ ಸದಸ್ಯರಾಗಿದ್ದ ಪಾಟೀಲರು ಕಳೆದ ಏಪ್ರಿಲ್ ತಿಂಗಳಿನಲ್ಲಿ 'ಕರ್ನಾಟಕ



*ಉತ್ಸವ*

ಸಮಕಾಲೀನ ಕಲೆಯ ಪ್ರದರ್ಶನ'ವನ್ನು ಏರ್ಪಡಿಸಿದ್ದರು. ಕನ್ನಡ ಕಲಾಜಗತ್ತಿಗೆ ಅವರು ನೀಡಿದ ಕೊನೆಯ ಸೇವೆ ಇದು.

ಈ ಕಲಾವಿದರಿಗೆ `ಕರ್ನಾಟಕ ಲಲಿತಕಲಾ ಅಕಾಡೆಮಿ 1998ರಲ್ಲಿ ಗೌರವ ಪ್ರಶಸ್ತಿ ನೀಡಿ ಗೌರವಿಸಿತು. ಕಳೆದ ಏಪ್ರಿಲ್‌ಲ್ಲನಷ್ಟೇ ಅವರು ವಿಶ್ವೇಶ್ವರಯ್ಯ ಪ್ರಶಸ್ತಿ ಸ್ವೀಕರಿಸಿದ್ದರು. ಸದಾ ಕ್ರಿಯಾಶೀಲವಾಗಿದ್ದ ಕಲಾಚೇತನವೊಂದು ಕಳಚಿಹೋಯಿತು. ಆದರೆ ಅವರ ಸಾಧನೆಯ ಮೂಲಕ ನಮ್ಮ ಹೃದಯದಲ್ಲಿ ಸದಾ ನೆನಪಾಗಿ ಉಳಿಯುವರು.

*- ಛಾಯಚಿತ್ರಗಳು, ಲೇಖನ : **ಡಿ. ಎಸ್. ಚೌಗಲೆ***



**HOSATHU** Kannada Monthly / August 2000 Rs.10
RNI Regn. No. 11308/99 REGD. CPMG / KA / BG-7 / 2000 Licenced to post without prepayment. Licence No. WPP(CO)-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published
Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna